ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಚದುರೆ

(ಐತಿಹಾಸಿಕ ಕಥೆ.)



ಲೇಖಕ: ಮತ್ತು ಪ್ರಕಾಶಕ:-

ಭಿ. ಪ. ಕಾಳೆ,

ಆನಂದವನ

ಸಪ್ಟಂಬರ 1937

ಬೆಲೆ 1 4 0

ಇದನ್ನು ಭಿ ಪ ಕಾಳೆ ಇವರು ಆನಂದವನ-ಅಗಡಿ
ಯೊಳಗಿನ ತಮ್ಮ ಶ್ರೀ ಶೇಷಾಚಲ ಪ್ರಿಂಟಿಂಗ
ಪ್ರೆಸ್ಸಿನಲ್ಲಿ ಮುದ್ರಿಸಿದರು

# ಮುನ್ನುಡಿ.

ದಿವ್ಯಪ್ರತಾಪನಿಧಿಯೂ, ವರ್ಧಮಾನ...ಯೂ, ಸ್ವರಾಜ್ಯಜೀವ ಜ್ಯೋತಿಯೂ ಆದ ಪೇಶವೆ ಬಾಜೀರಾಯನ ಕಾಲದ ಕಥಾನಕವಿದು. ಛತ್ರ ಪತಿ ರಾಜಾರಾಮನ ತರುವಾಯ ತೇಜೋಹೀನನಾದ ಸ್ವರಾಜ್ಯದ ಸೂರ್ಯನು ಈ ಪೇಶವೆಯ ಕಾಲದಲ್ಲಿ ಮತ್ತೆ ದೈದೀಪ್ಯಮಾನನಾಗಲಿಕ್ಕೆ ಅವನ ಅಖಂಡ ಕಾರ್ಯತತ್ಪರತೆ, ಅದ್ವಿತೀಯ ಸ್ವರಾಜ್ಯಪ್ರೇಮ, ಅತುಲನೀಯ ಶೌರ್ಯ-ಸಾಹಸ, ಅನುಪಮೇಯ ರಾಷ್ಟ್ರಧರ್ಮ ಮೊದಲಾದ ಸದ್ಗುಣಗಳು ಹೇಗೆ ಕಾರಣವಾದವೆಂಬದನ್ನು ಈ ಕಥಾನಕದಲ್ಲಿ ಕಾಣಬಹುದು. ಈ ಪುಸ್ತಕಿಗೆ ಮರಾಠೀ ಭಾಷೆಯೊಳಗಿನ ಐತಿಹಾಸಿಕ ಬಖರಗಳೂ ಕಾದಂಬರಿಮಯ ಪೇಶ ವಾಯಿಯ ಲೇಖಕರಾದ ಶ್ರೀ. ವಿ. ವಾ. ಹಡಪರವರ ಲೇಖನಗಳೂ ಬಹು ಮಟ್ಟಿಗೆ ಆಧಾರಭೂತಗಳಾಗಿರುತ್ತವೆ. ಅದಕ್ಕಾಗಿ ನಾನು ಆ ಎಲ್ಲ ಗ್ರಂಥ ಕರ್ತರಿಗೆ ಋಣಿಯಾಗಿರುತ್ತೇನೆ.

ಕಥಾನಾಯಿಕೆಯಾದ ಚದುರೆಯು ಸರ್ವಸಾಮಾನ್ಯ ಸ್ತ್ರೀಯು. ಇವಳು ದುರ್ಜನರಿಂದ ಶೀಲಭ್ರಷ್ಟಳಾದ ಮೇಲೆ ಅನೇಕ ಅಘೋರ ಕೃತ್ಯ ಗಳನ್ನೂ ಅದ್ಭುತ ಸಾಹಸಗಳನ್ನೂ ಮಾಡಿದುದನ್ನು ನೋಡಿದರೆ, ಮನುಷ್ಯರು ಈರ್ಷೆ, ಮಹತ್ವಾಕಾಂಕ್ಷೆಗಳಿಗೆ ಒಳಪಟ್ಟ ಮೇಲೆ ಅವರಿಂದ ಎಂಥ ಕೃತ್ಯ ಗಳಾದರೂ ಘಟಿಸುವವೆಂಬುದು ನಿದರ್ಶನಕ್ಕೆ ಬಾರದೆ ಇರಲಾರದು ನಾಮ ಧಾರಿ ರಾಮದಾಸನು ಸೇಡು ತೀರಿಸಿಕೊಳ್ಳುವ ಮಹತ್ವಾಕಾಂಕ್ಷೆಯಿಂದ ಪ್ರಳಯಕಾರಿಯಾಗಿ, ಶ್ರೀ ಬ್ರಹ್ಮೇಂದ್ರಸ್ವಾಮಿ, ಶಾಹೂರಾಜ, ಬಾಜೀರಾಯ, ಸಂಭಾಜಿರಾಜ, ಜಿಜಾಬಾಯಿ ಮೊದಲಾದ ಜನರಿಗೆ ತೊಂದರೆ ಕೊಟ್ಟ ದ್ದನ್ನು ನೋಡಿದರೆ ಒಂದು ವಿಧವಾಗಿ ಕೌತುಕವಾಗದೆ ಇರಲಾರದು.

ಈ ಪುಸ್ತಕ ಬರೆಯುವಾಗ ಹಲವು ರೀತಿಯಿಂದ ಸಹಾಯ ಮಾಡಿದ ಪ್ರಿಯಮಿತ್ರ ನಾಗೇಶರವರ ಉಪಕಾರವನ್ನು ಸ್ಮರಿಸದಿರಲಾರೆನು.

ಸದ್ಯದ ಆರ್ಥಿಕ ಮುಗ್ಗಟ್ಟಿನ ಹಾಗು ಕಾಗದದ ಮಹರ್ಗತೆಯ ಸಮ ಯದಲ್ಲಿ ನಾವು ನಮ್ಮ ಗ್ರಂಥಮಾಲೆಯ ಪುಷ್ಪಗಳನ್ನು ಅರಳಿಸಿ, ಕನ್ನಡ ನುಡಿಯ ಸೇವೆ ಮಾಡುತ್ತಿರುವದು ಸಾಹಸದ ಮಾತೇ ಸರಿ. ಕರ್ನಾಟಕ ವಾಚಕವೃಂದವು ಪ್ರೋತ್ಸಾಹನೆಯಿತ್ತು ನಮ್ಮಿಂದ ಹೆಚ್ಚಾಗಿ ಸಾಹಿತ್ಯಸೇವೆ ಘಟಿಸುವಂತೆ ಮಾಡುವದೆಂದು ತುಂಬಾ ಭರವಸೆಯುಂಟು.

ಆನಂದವನ<br>೮ ೮-೧೯೩೭

ಕನ್ನಡಿಗರ ಸೇವಕ,<br>**ಭಿ. ಪ. ಕಾಳೆ**

# ಅನುಕ್ರಮಣಿಕೆ.

# ಒದರೆ.

### ತಂತು.

"ಸುಖದುಃಖಗಳು ದೈವಾಯತ್ತವೆಂದು ನಿನ್ನ ಭಾವನೆಯಿರಬಹುದು. ನನಗೆ ಮಾತ್ರ ಹಾಗೆ ತೋರುವದಿಲ್ಲ ಮನುಷ್ಯರ ಕರ್ತವ್ಯಕರ್ಮಗಳಿಗನು ಸಾರವಾಗಿ ಸುಖದುಃಖಗಳೊದಗುವವೆಂದು ನನ್ನ ಸಿದ್ಧಾಂತ. ಒಂದು ವೇಳೆ ನಿನ್ನ ಅಭಿಪ್ರಾಯವನ್ನು ನಿಜವೆಂದು ಗ್ರಹಿಸಿದರೂ, ದೈವಾಯತ್ತವಾದ ದುಃಖ ವನ್ನು ಮನುಷ್ಯರು ಪ್ರಯತ್ನದಿಂದ ನಿವಾರಿಸಿಕೊಳ್ಳಲಿಕ್ಕೆ ಬರುವದಿಲ್ಲವೆಂದು ನಾನು ಅನ್ನಲಾರೆನು"

"ಕೆಲವು ಘಟನೆಗಳು ಮನುಷ್ಯನ ಪ್ರಯತ್ನಕ್ಕೆ ಮೀರಿದಂಥವುಗಳಿ ರುತ್ತವೆ. ಹಿಂದುಸ್ವರಾಜ್ಯದ ಛತ್ರಪತಿಯಾಗಬೇಕೆಂದು ನೀವು ಪ್ರಯತ್ನ ನಡೆಯಿಸಿದರೆ, ಅಥವಾ ಮಹಾರಾಜ್ಞಿಯಾಗಬೇಕೆಂದು ನಾನು ಪ್ರಯತ್ನ ಮಾಡಿದರೆ ಎಂದಾದರೂ ಸಫಲತೆ ಹೊಂದಬಹುದೆ?"

"ಓಹೋ! ಯೋಗ್ಯತೆಯಿದ್ದರೆ ಕಾರ್ಯಸಾಫಲ್ಯವಾಗಬಹುದು. ಹಿಂದುಪದಪಾತಶಾಹಿಯ ಸಂಸ್ಥಾಪನೆ ಮಾಡಿದ ಪುಣ್ಯಶ್ಲೋಕಿಗಳಾದ ಶಿವಾಜಿ ಮಹಾರಾಜರು ಈ ಮಾತಿಗೆ ದೃಷ್ಟಾಂತವಾಗಿಲ್ಲವೆ?"

"ಯೋಗ್ಯತೆಯ ಮೇಲೆ ಕಾರ್ಯವು ಸಫಲವಾಗುವದು. ನಮ್ಮ ನಿಮ್ಮಲ್ಲಿ ಅಂತಹ ಯಾವ ಯೋಗ್ಯತೆಯಿರುವದೆಂದು ಅಭ್ಯುದಯ ಹೊಂದು ವೆವು? ನಮ್ಮ ಬಡತನದ ಸಂಸಾರವು ಸುಖರೂಪವಾಗಿ ಸಾಗಿದರೆ ಸಾಕೆಂದು ಅನ್ನುತ್ತ ಕಾಲಕಳೆಯುತ್ತಿದ್ದೆನು; ಆದರೆ ನನ್ನ ಪಾಲಿಗೆ ಸಂಸಾರದ ಸೌಖ್ಯವೇ ದೊರೆಯುವ ಯೋಗವಿಲ್ಲ. ಅವರು ದುರ್ವ್ಯಸನಿಗಳಾಗಿ ಮನೆ ಬಿಟ್ಟು ಹೊರಟು ಹೋದರು. ನಾನು ತವರುಮನೆಯಲ್ಲಿ ಇಷ್ಟು ದಿವಸಗಳ ವರೆಗೆ ಸೇರಿದರೂ ಅವರ ಗಂಧವಾರ್ತೆಯೇ ಇಲ್ಲ. ಇದುವರೆಗೆ ಅವರು ಮಸೂರಿಗೆ ಸಹ ಬಂದ ಸುದ್ದಿಯಿಲ್ಲ. ಇಂಥ ನನ್ನ ಹಾಳು ಸಂಸಾರವು ಯಾವ ಪ್ರಯತ್ನದಿಂದ ಸುಖರೂಪವಾಗುವದು?"

"ಚದುರೆ' ನಿನಗೆ ಸಿಟ್ಟುಬಂದರೂ ನನಗೆ ಅದರ ಪರಿವೆಯಿಲ್ಲ. ನಿನ್ನ ಪತಿಯಾದ ಜಗದಳಿ ಕೃಷ್ಣಾಜಿಯು ಶುದ್ಧ ಪಶುವು! ನವಯೌವನ ಯುತಳೂ, ಅನುಪಮ ಲಾವಣ್ಯಲತಿಕೆಯೂ ಆದ ನಿನ್ನಂಥವಳೊಡನೆ ಸಂಸಾರಮಾಡಿಕೊಂಡಿರದ ಆ ಮೂರ್ಖನಿಗೆ ಏನೆಂದು ಹೆಸರಿಡಬೇಕೋ ತಿಳಿಯದು. ನಿನ್ನ ದೈವವು ಒಳಿತಾಗಿರುವದಿಲ್ಲ; ಅಂತೆಯೆ ಈ ದುರವಸ್ಥೆಗೆ ಈಡಾಗಿರುವೆ. ಒಬ್ಬ ಸಾರ್ವಭೌಮನ ಸಾಮ್ರಾಜ್ಞಿಯಾಗಲು ಶೋಭಿಸುವಂತಹ ರೂಪವು ನಿನ್ನದಿರುವದೆಂದೇ ನನ್ನ ಸಿದ್ಧಾಂತವು."

ಚದುರೆಯ ಕಣ್ಣುಗಳು ದುಃಖಾಶ್ರುಪರಿಪೂರ್ಣವಾದವು. ಅವಳು ಗದ್ಗದ ಕಂಠದಿಂದ:—"ಅಂತಹ ಭಾಗ್ಯವು ನನಗೆ ಹೇಗೆ ಬಂದೀತು? ನಾನು ಸಾಮ್ರಾಜ್ಞಿಯಾಗಲಿಚ್ಛಿಸುವದಿಲ್ಲ. ನನ್ನ ಬಡತನದ ಬಾಳ್ವೆಯೇ ನನಗಿರಲಿ. ನನ್ನ ಪತಿಯು ಒಳ್ಳೇ ರೀತಿಯಿಂದ ಸಂಸಾರ ಮಾಡಿಕೊಂಡು ಹೋದರೆ, ನಾನು ನನ್ನ ಈ ಬಡತನದ ಬಾಳ್ವೆಯೇ ಸಾಮ್ರಾಜ್ಯವೆಂದು ಕಲ್ಪಿಸುತ್ತೇನೆ; ಆದರೆ ಪತಿಸೌಖ್ಯವು ನನ್ನ ದೈವದಲ್ಲಿ ಬರೆದಿಲ್ಲ ನಾನೂ ನನ್ನ ಬಾಲಕನಾದ ಸಟವಾಜಿಯೂ ಇದೇ ರೀತಿಯಾಗಿ ಒರಲುತ್ತ ಆಯುಷ್ಯವನ್ನು ಕಳೆಯಬೇಕಾಗಿದೆ."

"ಚದುರೆ, ನೀನೇನಾದರೂ ಹೆಸರಿಗೆ ತಕ್ಕಂತೆ ಚದುರೆಯಿರಬಹುದೆಂದು ನನ್ನ ಗ್ರಹಿಕೆಯಿದ್ದಿತು; ಆದರೆ ನೀನು ನಿಜವಾಗಿಯೂ ಹುಚ್ಚಿಯಾಗಿದ್ದು, ಯಾರಾದರೂ ಹಾಗೆ ತಿಳಿಯಬಾರದೆಂಬ ಉದ್ದೇಶದಿಂದ ಚದುರೆಯೆಂಬ ಹೆಸರು ಹೊಂದಿದಂತೆ ತೋರುವದು."

"ತ್ರ್ಯಂಬಕರಾಯರೆ, ಈ ಹೆಸರು ನಾನು ಹೊಂದಿದ್ದಲ್ಲ. ಹಾಗು ಇಂದು ನಿನ್ನೆ ಹೊಂದಿದ್ದಲ್ಲ. ನಾನು ಹುಚ್ಚಿಯಾಗುವೆನೋ ಜಾಣಳಾಗುವೆನೋ ಎಂಬ ವಿಚಾರವು ಸಹ ಇಲ್ಲದಾಗ ಶೈಶವಾವಸ್ಥೆಯಲ್ಲಿಯೇ ನನಗಿಟ್ಟ ಹೆಸರಿದು. ಯಾಕೆ, ನನ ಹೆಸರಿನಲ್ಲಿ ವೈಗುಣ್ಯವೇನಾದರೂ ನಿಮಗೆ ಕಂಡಿತೇನು?"

"ಕಾಣದೇನು? ಸ್ಪಷ್ಟವಾಗಿ ಕಾಣುವದು. ಅತಿ ಸುಲಭವಾದ ಪ್ರಯತ್ನಗಳಿಂದ ಸಹ ಸೌಖ್ಯದೊರಕಿಸುವದು ಸಾಧ್ಯವಿರುವಂಥ ಸಂದರ್ಭದಲ್ಲಿ ಕೇವಲ ದೈವ-ದೈವವೆಂದು ಕ್ಲೇಶಪಡುತ್ತ ಕುಳಿತುಕೊಳ್ಳುವದು ಹುಚ್ಚುತನವೋ, ಜಾಣತನವೋ ನೀನೇ ತಿಳಿದು ನೋಡು."

"ನಾನು ಮತಿಭ್ರಾಂತಳಾಗಿರುವೆನು. ಯಾವ ದಾರಿಯೂ ನನಗೆ ತೋಚದಾಗಿದೆ. ಮುಂಗಾಣದವಳಾದ ನನಗೆ ನೀವು ಸೌಖ್ಯದ ಮಾರ್ಗವನ್ನು

ತೋರಿಸಿದರೆ ಚಿರಋಣಿಯಾಗಿರುವೆನು.''

"ಸುಖದ ಮಾರ್ಗವನ್ನು ಹುಡುಕುವದು ನಿನ್ನಂತಹ ಲಾವಣ್ಯಲತಿಕಗೆ ಅಗಮ್ಯವಿಲ್ಲ ಯಾವದು ದುಃಖದ ದಾರಿಯೆಂದು ನಿನ್ನ ಮನವರಿಕೆಯಾಗಿರುವದೋ ಅದನ್ನು ತ್ಯಜಿಸಿ ಬಿಟ್ಟರೆ ಸುಖದ ಮಾರ್ಗವು ತಾನಾಗಿ ದೊರೆಯುವದು. ರಾಜರಾಜೇಶ್ವರಿಯಾಗಲಿಕ್ಕೆ ಯೋಗ್ಯವಾದಂಥ ರೂಪಯೌವನಗಳನ್ನು ವಿಧಾತನು ನಿನಗೆ ದಯಪಾಲಿಸಿರಲು, ನೀನು ಹೀಗೆ ಅಂಥರಂತೆ ಅವಸ್ಥೆಹೊಂದಿರುವದನ್ನು ನೋಡಿ ನನ್ನ ಮನಸ್ಸಿಗೆ ಬಲು ಕೆಡಕೆನಿಸುವದು.''

"ತ್ರ್ಯಂಬಕರಾಯರೆ, ನಿಮ್ಮ ಮಾತಿನ ಅರ್ಥವಾಗಲೊಲ್ಲದು ಸ್ಪಷ್ಟವಾಗಿ ಹೇಳಿದರೆ ನಿಮ್ಮ ಮಾತು ಅರ್ಹವೋ ಅನರ್ಹವೋ, ಎಂಬದರ ಬಗ್ಗೆ ಯೋಚಿಸುವೆನು.''

"ಚದುರೆ, ನಿನ್ನ ದುರವಸ್ಥೆಯನ್ನು ನೋಡಿ ನನ್ನ ಅಂತಃಕರಣವು ದ್ರವಿಸಿದೆ. ನಿನಗೆ ಭಾಗ್ಯೋದಯವಾಗಬೇಕೆಂದು ನನ್ನ ಉತ್ಕಟೇಚ್ಛೆಯುಂಟು. ಹಾಗಾಗಲಿಕ್ಕೆ ಯೋಗ್ಯವಾದ ಪರಿಸ್ಥಿತಿಯೂ ಇರುವದು. ನಾನು ಹೇಳಿದಂತೆ ನಡೆಯಲೊಪ್ಪಿದರೆ ನಿನ್ನ ದುರ್ದಿನಗಳು ಮುಗಿದವೆಂದು ದೃಢವಾಗಿ ತಿಳಿ.''

"ನಾನು ಹೇಗೆ ನಡೆಯಬೇಕೆಂದು ನಿಮ್ಮ ಮನೀಷೆಯುಂಟು?"

"ನೀನು ಆ ನೀಚ ಕೃಷ್ಣಾಜಿಯ ಅಭಿಲಾಷೆಯನ್ನು ಪೂರ್ಣವಾಗಿ ಬಿಡಬೇಕು.''

"ತಾನಾಗಿಯೇ ಬಿಟ್ಟಂತಾಗಿದೆ."

"ನನ್ನ ಜೊತೆಯಲ್ಲಿ ಕೊಲ್ಹಾಪುರಕ್ಕೆ ಬರಬೇಕು."

"ಮುಂದೆ?'' ವಿಸ್ಮಯದಿಂದ ಚದುರೆಯು ಕೇಳಿದಳು.

"ಮುಂದೆ; ಮುಂದೆಯೇನು? ಸೌಖ್ಯದ ಸಾನಿಧ್ಯ! ಸೊಬಗಿನ ಸಾಮ್ರಾಜ್ಯ! ವಿಲಾಸದ ಸಾಯುಜ್ಯ!"

ಚದುರೆಯು ಗಹಗಹಿಸಿ ನಕ್ಕಳು. ಅವಳು ನಗುತ್ತಲೆ:—"ನಾನು ಕೊಲ್ಹಾಪುರಕ್ಕೆ ಹೋದ ಕೂಡಲೆ ಛತ್ರಪತಿ ಸಂಭಾಜಿ ಮಹಾರಾಜರು ತಮ್ಮ ರಾಜ್ಯದೊಳಗಿನ ಅರ್ಧರಾಜ್ಯವನ್ನು ನನ್ನ ಉಡಿಯಲ್ಲಿ ಹಾಕುವರೆಂದಂತಾಯಿತೇ?''

"ಅರ್ಧ ರಾಜ್ಯ! ಅರ್ಧವೇ ಏಕೆ? ಪ್ರಸಂಗವೊದಗಿದರೆ ಇಡೀ ರಾಜ್ಯವೇ ನಿನ್ನ ಉಡಿಯಲ್ಲಿ ಬೀಳುವದು."

"ಏನಿದು ಉಪಹಾಸ!''

"ಉಪಹಾಸವಲ್ಲ; ಚದುರೇ, ಸಾಹಸ!"

"ನಿಮ್ಮ ಸಾಹಸದ ಪಡಿಕಟ್ಟು ಗೊತ್ತಾಗದೆ ನಾನು ಏನು ಮಾತಾಡಲಿ? ಯಾವದೊಂದು ಭೂತವೇತಾಳವನ್ನು ಕೈವಶಮಾಡಿಕೊಂಡು ಈ ಬಗೆಯ ಕಾರ್ಯಸಾಧನೆ ಮಾಡಿಕೊಂಡಿರುವಿರೋ ಹೇಗೆ? ಯಾವದೊಂದು ವಾಮ ಮಾರ್ಗದಿಂದ ಸಾಮ್ರಾಜ್ಯಲಾಭವಾಗುವಂತಿದ್ದರೆ, ಅದನ್ನು ನೀವೇ ತೆಗೆದು ಕೊಳ್ಳದೆ ನನ್ನ ಉಡಿಯಲ್ಲಿ ಹಾಕುವ ಉದ್ದೇಶವಾವುದು?"

"ಚದುರೆ, ನಾನು ಸ್ಪಷ್ಟವಾಗಿ ಹೇಳುವೆನು. ನಾನು ಭೂತವೇತಾಳ ಗಳನ್ನು ವಶಮಾಡಿಕೊಂಡಿಲ್ಲ. ನನ್ನ ಸಾಹಸದಿಂದಾಗುವ ಸಾಮ್ರಾಜ್ಯಲಾಭವು ನನಗಲ್ಲ; ನಿನಗೆ! ನೀನು ಸಂಭಾಜಿಮಹಾರಾಜರ ಮಹಾರಾಜ್ಞಿಯಾಗಲೊಪ್ಪಿ ದರೆ ನಿನ್ನ ಉಡಿಯಲ್ಲಿ ಛತ್ರಪತಿಯ ಸಾಮ್ರಾಜ್ಯವೇ ಬೀಳುವದು. ಯಾಕೆ? ನೀನು ಈ ಹಾಳು ಸಂಸಾರವನ್ನು ತ್ಯಜಿಸಿ, ವೈಭವಯುಕ್ತವಾದ ಸಂಸಾರ ವನ್ನು ಅಪ್ಪಿಕೊಳ್ಳಲಿಕ್ಕೆ ಸಿದ್ಧಳಿರುವೆಯಾ? ಓಹೋ! ಸಿದ್ಧಳಾಗದೇನು? ಛತ್ರಪತಿಯ ರಾಣಿಯಾಗುವ ಅಪ್ಪೂತ ಸಂಧಿಯು ಅಂಥ ಇಂಥವರಿಗೆ ಹೇಗೆ ಲಭಿಸೀತು? ನೀನು ಅಪ್ಸರೆಯರನ್ನು ನಾಚಿಸುವಂತಹ ರೂಪವತಿಯಿದ್ದುದನ್ನು ಕೇಳಿಯೇ ಮಹಾರಾಜರು ನಿನ್ನನ್ನು ಅಂತಃಪುರದಲ್ಲಿರಿಸಿಕೊಳ್ಳಲಿಕ್ಕೆ ಒಪ್ಪಿರು ವರು. ನೀನು ಅವರ ಮನಸ್ಸನ್ನು ನಿಶ್ಚಯವಾಗಿ ಎಳೆದುಕೊಳ್ಳುವೆ. ಮಹಾ ರಾಜರು ನಿನ್ನ ಸೂತ್ರದ ಗೊಂಬೆಯಾಗುವರು. ಅವರ ರಾಣಿಯವರಾದ ಜಿಜಾಬಾಯಿಯವರು ನಿನ್ನ ಮುಂದೆ ನಿಸ್ತೇಜರಾಗಿ ಹೋಗುವರು. ಹಾಗಾದ ಮೇಲೆ ನಿನ್ನದೇ ರಾಜ್ಯ, ನಿನ್ನದೇ ಸಾಮ್ರಾಜ್ಯ!"

ತ್ರ್ಯಂಬಕರಾಯನ ಮಾತುಗಳು ಚದುರೆಯ ಮೈಗೆ ಮುಳ್ಳುಹಚ್ಚಿ ದಂತಾದವು. ಅವಳು ಎಷ್ಟೇ ದಾರಿದ್ರ್ಯದಲ್ಲಿದ್ದರೂ, ಪತಿವಿಯೋಗದಿಂದ ಎಷ್ಟೇ ದುಃಖಾಬ್ಧಿಯಲ್ಲಿ ಮುಳುಗಿದ್ದರೂ ದುರಾಚರಣೆಗೆ ಪ್ರವೃತ್ತಳಾಗಿದ್ದಿಲ್ಲ. ಕಂಟಕಮಯವೂ ಪಾಪಮಯವೂ ಆದ ಜಗತ್ತಿನಲ್ಲಿ ಶೀಲಕ್ಕೆ ಬಾಧೆಬರುವಂ ತಹ ಎಷ್ಟೋ ಪ್ರಸಂಗಗಳನ್ನು ಅವಳು ತನ್ನ ಶೀಲ-ನೀತಿಗಳ ಬಲದಿಂದ ದೂರ ಮಾಡಿದ್ದಳು. ಅವಳು ತಪ್ಪುಹೆಜ್ಜೆಯಿಟ್ಟಿದ್ದರೆ ಇಷ್ಟೊತ್ತಿಗೆ ಅವಳ ಬಡತನವು ಬಯಲಾಗುತ್ತಿತ್ತು; ಸಂಸಾರವು ಸುಖಮಯವಾಗುತ್ತಿತ್ತು; ಆದರೆ ಶೀಲ-ನೀತಿಗಳಿಗೆ ಬಾಧೆಬರುವಂಥ ಹೇಸಿ ಕೃತ್ಯಗಳನ್ನಾಚರಿಸಲಿಕ್ಕೆ ಆ ಪವಿತ್ರ ಸತಿಯು ಮನಸ್ಸು ಮಾಡಿದ್ದಿಲ್ಲ. ಅವಳು ಇದುವರೆಗೆ ಈ ಬಗೆಯಾಗಿ ಸಚ್ಛೀಲ ಳಾಗಿದ್ದುದರಿಂದ ತ್ರ್ಯಂಬಕರಾಯನ ಮಾತುಗಳು ಅವಳ ಮೈಗೆ ಮುಳ್ಳು ಹಚ್ಚಿದಂತಾದವು.

"ತ್ರ್ಯಂಬಕರಾಯರೆ!' ಚದುರೆಯು ಕರ್ಕಶವಾಣಿಯಿಂದ:—"ನನ್ನ ಅಭ್ಯುದಯಕ್ಕಾಗಿ ನೀವು ಒಳ್ಳೇ ಅಗಾಧವಾದ ಹಂಚಿಕೆಯನ್ನು ಹುಡುಕಿರುವಿರಿ. ನೀವು ಈ ವಿಧದ ಹಿತಚಿಂತಕರಿರುವಿರೆಂದು ನಾನು ಈ ಕ್ಷಣದವರೆಗೂ ತಿಳಿದಿದ್ದಿಲ್ಲ. ಐಶ್ವರ್ಯದ ಲೋಭದಿಂದ ಸತೀಧರ್ಮವನ್ನು ವಿಕ್ರಯಿಸುವ ಜಾರಿಣಿಯು ನಾನಲ್ಲ. ನೀವು ಇಂತಹ ಅಲ್ಲದ-ಸಲ್ಲದ ಸಲಹೆಗಳನ್ನು ಕೊಡುವವಾದರೆ ನನ್ನ ನೆರಳಿಗೆ ಕೂಡ ಬರಲಾಗದು. ನೀವು ನಿಜವಾದ ಹಿತಚಿಂತಕರೆಂದು ನನ್ನ ಭಾವನೆಯಿದ್ದಿತು; ಆದರೆ ಇಂದು ನಿಮ್ಮ ಹೃದಯದ ಪಡಿಕಟ್ಟು ನಿಚ್ಚಳವಾಗಿ ತಿಳಿಯಿತು. ನೀವು ನನ್ನನ್ನು ಆಸುರೀ ವಿಷಯಪಿಪಾಸುಗಳಾದ ಸಂಭಾಜಿ ಮಹಾರಾಜರ ಕೈಯಲ್ಲಿ ಕೊಟ್ಟು ಯಾವ ಜಹಾಗೀರನ್ನು ಪಡೆಯಬೇಕೆಂದು ಹವಣಿಸಿರುವಿರಿ? ನನ್ನ ಸತೀತ್ವ ವಿಕ್ರಯದ ಲಾಭವನ್ನು ನೀವು ಇದೇ ವಿಧವಾಗಿ ಮಾಡಿಕೊಳ್ಳಬೇಕೆಂದು ಕಾರಸ್ಥಾನ ನಡೆಯಿಸಿರುವಿರಲ್ಲವೆ? ಧನ್ಯವಾದ! ನಿಮ್ಮ ಅಗಾಧವಾದ ಬುದ್ಧಿವಂತಿಕೆಗೆ ಅನಂತ ಧನ್ಯವಾದಗಳು!!

ಚದುರೆಯ ಮಾತುಗಳನ್ನು ಕೇಳಿ ತ್ರ್ಯಂಬಕರಾಯನು ಬೆಟ್ಟಿಬಿದ್ದನು. ದೀನದರಿದ್ರಳಾದ ಅವಳು ಛತ್ರಪತಿಯ ಕೈ ಹಿಡಿಯಲಿಕ್ಕೆ ಅತ್ಯಾನಂದದಿಂದ ಒಪ್ಪಿ, ತನ್ನ ಮಹತ್ಕೃತಿಯ ಬಗ್ಗೆ ಮನಃಪೂರ್ವಕವಾಗಿ ಅಭಿನಂದನೆ ಮಾಡುವಳೆಂದು ತ್ರ್ಯಂಬಕರಾಯನ ತಿಳುವಳಿಕೆಯಿತ್ತು; ಆದರೆ ಚದುರೆಯ ಮಾತಿನಿಂದ ಅವನ ಭ್ರಮೆಯು ನಿರಸನ ಹೊಂದಿತು. ಸುಲಭ ಸಾಧ್ಯಳೆಂದು ಭಾವಿಸಿದ್ದ ಚದುರೆಯು ದುಸ್ಸಾಧ್ಯಳಿರುವಳೆಂದು ಅವನಿಗೆ ಚನ್ನಾಗಿ ಮನವರಿಕೆಯಾಯಿತು; ಆದರೆ ಇಷ್ಟರಿಂದಲೇ ಭಗ್ನಮನೋರಥನಾಗುವಂತಹ ಸ್ವಭಾವವು ತ್ರ್ಯಂಬಕರಾಯನದಿದ್ದಿಲ್ಲ. ಅವನು ಚತುರೋಪಾಯ ನಿಪುಣನು; ಅದರಲ್ಲೂ ಛತ್ರಪತಿ ಸಂಭಾಜಿರಾಜನ ಬೆಂಬಲವಿದ್ದವನು. ಯಾವದೊಂದು ಉಪಾಯದಿಂದ ಚದುರೆಯನ್ನು ಕೊಲ್ಹಾಪುರದ ಅಂತಃಪುರಕ್ಕೆ ಸೇರಿಸಿ ಕೃತಕೃತ್ಯನಾಗಬೇಕೆಂದೇ ಅವನು ದೃಢಸಂಕಲ್ಪ ಮಾಡಿದ್ದನು. ಚದುರೆಯ ಮಾರ್ಮಿಕವಾದ ಮಾತುಗಳಿಂದ ಧೃತಿಗುಂದದೆ, ಗಾಂಭೀರ್ಯದಿಂದ ಅವನು:—"ಅನಾಯಾಸವಾಗಿ ನಡೆದು ಬರತೊಡಗಿದ ಭಾಗ್ಯಲಕ್ಷ್ಮಿಯನ್ನು ನಿರಾಕರಿಸುವದನ್ನು ನೋಡಿದರೆ, ನಿನ್ನ ನಷ್ಟಚರ್ಯೆಯು ಒದಗಿಬಂದಿರುವದೆಂದೇ ಭಾವಿಸಬೇಕಾಗುವದು."

"ಬೇಕಾದಹಾಗೆ ಭಾವಿಸಿರಿ! ಸತೀಧರ್ಮವಿಕ್ರಯದಿಂದ ಪ್ರಾಪ್ತವಾಗುವ ಭಾಗ್ಯಲಕ್ಷ್ಮಿಯು ನನಗೆ ಬೇಕಾಗಿಲ್ಲವೆಂದು ಒಮ್ಮೆ ಬಿಟ್ಟು ನೂರು ಸಾರೆ

ಹೇಳುವೆನು.''

''ಲಕ್ಷ್ಮಿಯು ಬರಹತ್ತಿದಳೆಂದರೆ ಒಲ್ಲೆನೆಂದರೂ ಕೇಳುವದಿಲ್ಲ. ಕಡೆಗೆ ನೀನು ನಿನ್ನ ಈ ಸತೀತ್ವದ ಜಂಬವನ್ನು ಬಿಡಬೇಕಾಗುವ ಪ್ರಸಂಗವೇ ಒದಗುವದು.''

''ಅದು ಹೇಗೆ ಬರುವದೋ ನೋಡಿಕೊಳ್ಳುವೆನು.''

''ಚನ್ನಾಗಿ ಬರುವದು. ಛತ್ರಪತಿ ಮಹಾರಾಜರೊಡನೆ ಆಟವಿರುವದು. ಚದುರೇ, ಇದು ಹುಡುಗಾಟವಲ್ಲ!''

''ಹಾಗಾದರೆ ನನ್ನ ಮೇಲೆ ಬಲಾತ್ಕಾರ ನಡೆಯುವದೋ?''

''ಸತ್ಕಾರಕ್ಕೆ ಒಳಗಾಗಲಪೇಕ್ಷಿಸದಿದ್ದರೆ ಬಲಾತ್ಕಾರವೇ ಸರಿ!''

''ಮಹಾರಾಜರು ಅಧಿಕಾರಸಂಪನ್ನರಿರುವರು. ಅವರು ತಮ್ಮ ಶೀಲವನ್ನು ಮರೆತು, ನನ್ನ ಮೇಲೆ ಅತ್ಯಾಚಾರ ಮಾಡಲುದ್ಯುಕ್ತರಾದರೆ, ಅವರು ಅದರ ಫಲವನ್ನು ಭೋಗಿಸುವ ಪ್ರಸಂಗವು ನಿಶ್ಚಯವಾಗಿ ಒದಗುವದು."

"ಚದುರೆ! ನೀನು ಈಗ ನಿನ್ನ ಮುರುಕ ಗುಡಸಲಲ್ಲಿರುವೆ. ಕಣ್ಣು ಕುಕ್ಕಿಸುವಂಥ ಅರಮನೆಯಲ್ಲಿ ವಿಧವಿಧದ ವಿಲಾಸಸುಖವನ್ನು ಸುರಿಯುತ್ತಿರುವಾಗ ನಿನ್ನ ಈಗಿನ ಸತೀಧರ್ಮದ ಸೊಲ್ಲು ಎತ್ತ ಅಡಗುವದೋ ಏನೋ! ಧರ್ಮದ ಕಟ್ಟಾಶೆಗೆ ಬಲಿಬಿದ್ದು, ಅಭಿಮಾನದಿಂದಾಡಿದ ಈ ನಿನ್ನ ಕುನಸು ಕನಸಾಗುವದೋ ಏನೋ! ನಿನ್ನ ತಂದೆಯಾದ ಬಿಂಬಾಜಿಯು ಸಹ ನನ್ನ ಮತದಂತೆ ನಡೆಯಲಿಕ್ಕೆ ಒಪ್ಪಿರುವನು. ಪಿತ್ರಾಜ್ಞೆಯನ್ನು ಮನ್ನಿಸುವದು ಪುತ್ರಧರ್ಮವೆಂಬ ಮಾತು ಧರ್ಮದ ಆಧ್ಯತೆಯನ್ನು ಮೆರಿಸುವ ನಿನಗೆ ಅರಿಯದಿರಲಿಕ್ಕಿಲ್ಲ''

''ತಂದೆಯುವರೂ ನಿಮ್ಮ ಮತಕ್ಕೆ ಅನುಕೂಲರಿರುವರೆ?''

''ಮಹಾರಾಜರಿಂದ ಯಥೇಷ್ಟವಾಗಿ ಲಾಭ ದೊರೆಯುತ್ತಿರಲು ಆ ಸಂಧಿಯನ್ನು ಯಾವನು ತಾನೇ ವ್ಯರ್ಥ ಹೋಗಗೊಡುವನ ?''

''ನನ್ನ ತಂದೆಯುವರು ಘೋರಾತ ಮನೆತನಕ್ಕೆ ಕಲಂಕರೂಪಿಗಳಿರುವರೆಂಬದಕ್ಕೆ ಏನೂ ಪ್ರತ್ಯವಾಯವಿಲ್ಲ'' ಎಂದು ಚದುರೆಯು ನುಡಿದು ದೃಢನಿಶ್ಚಯದಿಂದ:—''ತಂದೆಯಾದರೆ ಏನಾಯಿತು? ಅಲ್ಲದ ಸಲ್ಲದ ಆಜ್ಞೆಮಾಡುವ ತಂದೆಯನ್ನು ನಾನು ಶತಶಃ ಧಿಃಕರಿಸಲಿಕ್ಕೆ ಸಮರ್ಥಳಿರುವೆನು. ನನ್ನ ಅಣ್ಣನಾದ ರಘೂಜಿಯು ಈಗ ಇಲ್ಲಿದ್ದರೆ ನಿಮ್ಮ ಹಾಗು ನನ್ನ ತಂದೆಯ ನಿರಿಳಿಸಿಬಿಡುತ್ತಿದ್ದನು.''

''ಇಷ್ಟೇಯೋ!'' ತ್ರ್ಯಂಬಕರಾಯನು ವಿಕಟಹಾಸ್ಯದಿಂದ ನುಡಿದು:-

"ನಿನ್ನ ಅಣ್ಣನೇನು ಸಾಮಂತನಲ್ಲ; ಸರದಾರನಲ್ಲ. ನಿನ್ನ ಮನೆಯ ಮೇಲೆ ಕತ್ತೆಯ ರಂಟೆ ಹೊಡೆಯಿಸಿ, ನಿನ್ನನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಛತ್ರಪತಿಗಳ ಬೆಂಬಲದಿಂದ ನಾನು ಸಮರ್ಥನಾಗಿರುವೆನು. ನೀನು ಒಳ್ಳೇ ಮಾತಿನಿಂದ ನನ್ನೊಡನೆ ಕೊಲ್ಹಾಪುರಕ್ಕೆ ಬರದಿದ್ದರೆ ಬಲಾತ್ಕಾರದಿಂದಾದರೂ ನಿನ್ನನ್ನು ಒಯ್ದು ಸಂಭಾಜಿ ರಾಜರ ಅಂತಃಪುರಕ್ಕೆ ಸೇರಿಸುವೆನು."

"ನಿನ್ನಲ್ಲಿ ಸಾಮರ್ಥ್ಯವಿದ್ದರೆ ಹಾಗೆ ಮಾಡಬಹುದು. ನೀನು ಛತ್ರಪತಿಗಳ ಬೆಂಬಲದಿಂದ ಸಮರ್ಥನಾಗುವಷ್ಟರಲ್ಲಿ ಈ ಚತುರೆಯಾದ ಚದುರೆಯು ನಿನ್ನ ಕಣ್ಣಿಗಾದರೂ ಬೀಳುವಳೋ ಇಲ್ಲವೋ! ನಿಜವಾಗಿ ಹೇಳಬೇಕಾದರೆ ಅವಳ ಕಾಲೊಳಗಿನ ಮಣ್ಣು ಸಹ ಹಣೆಗೆ ಹಚ್ಚಿಕೊಳ್ಳಲಿಕ್ಕೆ ನಿನಗೆ ದೊರೆಯಲಾರದು."

"ಅಬ್ಬಾ! ಇಷ್ಟು ಸಾಹಸಿಯಿರುವೆಯಾ ನೀನು!" ಎಂದು ನುಡಿದು, ತ್ರ್ಯಂಬಕರಾಯನು ಕೊಂಬು ಊದಿದನು.

ಪರಕ್ಷಣದಲ್ಲಿ ನೂರಾರು ಸೈನಿಕರು ಚದುರೆಯ ಮನೆಯನ್ನು ಮುತ್ತಿದರು. ಆ ಸೈನಿಕರು ತ್ರ್ಯಂಬಕರಾಯನ ಅಪ್ಪಣೆಯ ಮೇರೆಗೆ ಚದುರೆಯನ್ನು ಬಂಧಿಸಿ, ಮೇಣೆಯಲ್ಲಿ ಹಾಕಿಕೊಂಡು, ಬಹೇಬೋರಗಾಂವದಿಂದ ಕೊಲ್ಹಾಪುರದ ಕಡೆಗೆ ಹೊರಟರು

---

## ಸಂಕಟ ಬಂದಾಗ ವೆಂಕಟರಮಣ

"ಅತ್ತೆಯವರೆ!"

"ಯಾರು?"

"ನಾನು ಜಿಜಾ!"

"ಜಿಜಾ?"

"ಹೌದು, ಜಿಜಾ!"

"ಜಿಜಾ! ಬಾರಮ್ಮಾ, ಬಾ! ಇದೇನು ಇಂಥ ರಾತ್ರಿಯ ವೇಳೆಯಲ್ಲಿ ಇಲ್ಲಿಗೆ ಬಂದೆ?"

ಜಿಜಾಬಾಯಿಯ ಕಂಠವು ಸದ್ಗದಿತವಾಗಿತ್ತು. ಕಣ್ಣುಗಳಿಂದ ಅವಿರಲವಾದ ಅಶ್ರುಗಳು ಹರಿಯತೊಡಗಿದ್ದವು. ಅವಳು ತನ್ನ ಅತ್ತೆಯಾದ

ತಾರಾಬಾಯಿಯು ತೋರಿಸಿದ ಆಸನದ ಮೇಲೆ ಕುಳಿತುಕೊಂಡು ರೋದಿಸ ತೊಡಗಿದಳು.

ಜಿಜಾಬಾಯಿಯು ತಾರಾಬಾಯಿಯನ್ನು ಹೀಗೆ ಸನ್ಮಾನಪೂರ್ವಕ ವಾಗಿ ಸಂಬೋಧಿಸಿದ್ದು ಆವಳ ನೆನಪಿನಲ್ಲಿ ಇದೇ ಮೊದಲೆನ್ನಬಹುದು. ತನ್ನನ್ನು ನೀರಲ್ಲಿ ನೋಡುತ್ತಿದ್ದ ಜಿಜಾಬಾಯಿಯ ಮುಖದಿಂದ "ಅತ್ತೆಯ ವರೆ!" ಎಂಬ ಬಹುಮಾನದ ವಾಣಿಯು ಹೊರಟದ್ದಕ್ಕಾಗಿ ತಾರಾಬಾಯಿಗೆ ಸೋಜಿಗವಾಗದೇನು ಮಾಡೀತು?

ಶಾಹೂರಾಜನು ಬಾದಶಾಹೀ ಬಂಧನದಿಂದ ಬಿಡುಗಡೆ ಹೊಂದಿ ದಕ್ಷಿಣಕ್ಕೆ ಬಂದ ಮೇಲೆ, ಏಕನಿಷ್ಠ ಸರದಾರ-ಸಾಮಂತರ ಸಹಾಯದಿಂದ ಸ್ವರಾಜ್ಯದ ರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಸಾತಾರೆಯಲ್ಲಿ ರಾಜ್ಯಾಭಿಷೇಕ ಮಾಡಿಸಿಕೊಂಡನು. ಶಾಹೂರಾಜನು ಬಂಧನದಲ್ಲಿದ್ದಾಗ ರಾಜಾರಾಮ ಮಹಾರಾಜರ ಪತ್ನಿಯಾದ ತಾರಾಬಾಯಿಯು ಹಿಂದು ಸ್ವರಾಜ್ಯಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಆಢಳಿತ ನಡೆಯಿಸಿದ್ದಳು. ತನ್ನ ಕೈಯೊಳಗಿನ ಅಧಿಕಾರವು ಹೋದ ಕೂಡಲೆ ಅವಳು ಅಸಂತುಷ್ಟಳಾಗಿ ಕೊಲ್ಹಾಪುರಕ್ಕೆ ಹೋಗಿ ಸವತಿ ಸುಭೆಯನ್ನು (ರಾಜ್ಯವನ್ನು) ಸ್ಥಾಪಿಸಿದಳು. ಮುಂದೆ ಕೆಲವು ದಿವಸಗಳ ಮೇಲೆ ಕೊಲ್ಹಾಪುರದ ಮನೆತನದಲ್ಲಾದರೂ ದಾಯಾದಿತನವು ಪ್ರಾದುರ್ಭವಿಸಿತು. ರಾಜಾರಾಮ ಮಹಾರಾಜರ ಮತ್ತೊಬ್ಬ ರಾಣಿಯಾದ ರಾಜಸಬಾಯಿಯು ತನ್ನ ಮಗನಾದ ಸಂಭಾಜಿರಾಜನಿಗೆ ಅರಸೊತ್ತಿಗೆಯು ದೊರೆಯಬೇಕೆಂದು ಇಚ್ಛಿಸಿದಳು. ರಾಜ್ಯದಾಡಳಿತವನ್ನು ನಡೆಯಿಸಲಿಕ್ಕೆ ಅನರ್ಹನಾದ ತಾರಾಬಾಯಿಯ ಮಗನಾದ ಶಿವಾಜಿಯು ಸಿಂಹಾಸನಾರೋಹಣ ಮಾಡಿದ್ದು ಸಂಭಾಜಿಗೆ ಸಹನವಾಗಲಿಲ್ಲ ಸಂಭಾಜಿಯು ಪ್ರಭಾವಶಾಲಿಯಾಗಿರದಿದ್ದರೂ ಶಿವಾಜಿಯಂಥ ಹುಚ್ಚನಿದ್ದಿಲ್ಲ. ಬಾಹುಬಲದಿಂದ ಹೊಸ ರಾಜ್ಯವನ್ನು ದೊರಕಿಸುವ ಇಲ್ಲವೆ ಇದ್ದ ರಾಜ್ಯವನ್ನು ಕಾಯ್ದುಕೊಳ್ಳುವ ಯೋಗ್ಯತೆಯೂ, ಜಾಣ್ಮೆಯೂ, ರಾಜಕಾರಣ ದುರಂಧರತೆಯೂ ಅವನಲ್ಲಿರದಿದ್ದರೂ ಹುಚ್ಚ ಶಿವಾಜಿಯಿಂದ ರಾಜ್ಯವನ್ನು ಕಸುಕೊಳ್ಳಲಿಕ್ಕೆ ಮಾತ್ರ ಅವನಲ್ಲಿದ್ದ ಬುದ್ಧಿ-ಶಕ್ತಿಗಳೇ ಸಾಕಾದವು. ತಾರಾಬಾಯಿಯ ಉಪಟಳವು ಸ್ವರಾಜ್ಯದಲ್ಲಿ ಮಿತಿಮೀರಿದ್ದರಿಂದ ಅವಳ ಕೈಯೊಳಗಿನ ರಾಜ್ಯ ಸೂತ್ರಗಳನ್ನು ತಪ್ಪಿಸದಿದ್ದರೆ, ಶಿವಪ್ರಭುವು ಅತಿ ಸಾಹಸದಿಂದ ಸ್ಥಾಪಿಸಿದ ಹಿಂದುಪದಪಾತಶಾಹಿಗೆ ಆಘಾತ ತಗಲುವದೆಂದು ಶಾಹೂ ಮಹಾರಾಜನೂ, ಅವನ ಪೇಶವೆ-ಪ್ರತಿನಿಧಿಗಳೂ ದೃಢವಾಗಿತಿಳಿದಿದ್ದರು; ಆದ್ದರಿಂದ

ಅವರು ತಾರಾಬಾಯಿಯ ವಿರುದ್ಧವಾಗಿ ಸಂಭಾಜಿರಾಜನಿಗೆ ಗುಪ್ತರೀತಿಯಿಂದ ನೆರವಾಗಿ, ಅವನಿಗೆ ರಾಜ್ಯಪ್ರಾಪ್ತಿಯಾಗುವಂತೆ ಮಾಡಿದರು. ಸಂಭಾಜಿಯು ರಾಜ್ಯಾಭಿಷಿಕ್ತನಾದ ಕೂಡಲೆ ತಾರಾಬಾಯಿ, ಶಿವಾಜಿ, ಶಿವಾಜಿಯ ಪತ್ನಿಯರಾದ ಭವಾನಿಬಾಯಿ-ಪಾರ್ವತಿಬಾಯಿ ಮೊದಲಾದವರು ಸೆರೆಮನೆಯ ಸೋಬತಿಗಳಾಗಬೇಕಾಯಿತು. ಆಗ ಜಿಜಾಬಾಯಿಯು ತಾರಾಬಾಯಿಯನ್ನು ಅನೇಕ ಕಟುವಚನಗಳಿಂದ ನೋಯಿಸುತ್ತಿದ್ದಳು. ಶಿವಾಜಿಯ ಆಪತ್ಯಗಳನ್ನು ಹಿಂಸಿಸುವ ಕೃತಿಗಳು ನಹ ರಾಜ-ರಾಣಿಯರಿಂದ ಘಟಿಸಿದ್ದವು. ಇಂತಹ ಪರಿಸ್ಥಿತಿಯಲ್ಲಿ ಜಿಜಾಬಾಯಿಯು ತನ್ನಲ್ಲಿ ಇಷ್ಟು ಭಕ್ತಿ-ವಿಶ್ವಾಸಗಳುಳ್ಳವಳಾದ ಇಂಗಿತವು ತಾರಾಬಾಯಿಗೆ ಹೊಳೆಯದಾಯಿತು. ಆಗ ಅವಳಿಗೆ ಮಳಲಿನಲ್ಲಿ ಎಣ್ಣೆ ಹೊರಟದ್ದಕ್ಕಿಂತಲೂ ಹೆಚ್ಚಿನ ವಿಸ್ಮಯವೆನಿಸಿತು

ಜಿಜಾಬಾಯಿಯು ದುಃಖಿಸುತ್ತ ಕುಳಿತ ಕಾರಣವು ತಾರಾಬಾಯಿಗೆ ತಿಳಿಯಲಿಲ್ಲ. ಅವಳು ಯಾವದೋ ಒಂದು ವಿಪತ್ತಿನಲ್ಲಿ ಸಿಲುಕಿರಬಹುದೇನೆಂದು ಕೆಲವು ವೇಳೆ ಯೋಚಿಸಿದಳು ಸ್ವಲ್ಪ ವೇಳೆಯಲ್ಲಿ ಅವಳ ಮನಸ್ಸಿಗೆ ಸಮಾಧಾನಕಾರಕವಾದ ಉತ್ತರವು ಹೊರಟಿತು. ಚತುರಳಾದ ಚದುರೆಯೇ ಇವಳ ಆಪತ್ತಿಯ ಮೂಲವೆಂಬದು ಅವಳಿಗೆ ಗೊತ್ತಾಯಿತು; ಆದರೂ ಅವಳು ಅರಿಯದವಳಂತೆ ಜಿಜಾಬಾಯಿಯನ್ನು ಕುರಿತು -"ರಾಣೀ, ಯಾಕೆ ದುಃಖಿಸುವೆ? ಸಂಭಾಜಿಯ ಪ್ರಕೃತಿಯೇನಾದರೂ ಅಸ್ವಸ್ಥವಾಗಿರುವದೆ? ಅಥವಾ ಶಾಹುವಿನ ವಿರುದ್ಧವಾಗಿ ನಡೆಯಿಸಿದ ಕಾರಸ್ಥಾನದಲ್ಲಿ ನಿನ್ನ ಪತಿಗೆ ನಿಜಾಮ, ಫತ್ತೇಸಿಂಗ ಭೋಸಲೆ ಮೊದಲಾದವರೇನಾದರೂ ಕೈತೋರಿಸಿದರೆ? ಇಲ್ಲವೆ ದಿವ್ಯ ಪ್ರತಾಪನಿಧಿಯಾದ ಬಾಜೀರಾವ ಪೇಶವೆಯು ಕೊಲ್ಹಾಪುರದ ರಾಜಸಿಂಹಾಸನವನ್ನು ವಶಪಡಿಸಿಕೊಳ್ಳಲಿಕ್ಕೆ ಬಂದನೇ? ಏನಾಯಿತು ಜಿಜಾ? ಹೇಳು. ಹೀಗೆ ಅಳುತ್ತ ಕುಳಿತರೆ ಹೇಗೆ ತಿಳಿಯಬೇಕು?" ಎಂದು ಮಾರ್ದವ ವಚನಗಳಿಂದ ನುಡಿದಳು.

"ಅತ್ತೆಯವರೆ!" ಜಿಜಾಬಾಯಿಯು ತುಂಬಿ ಹೊರಹೊಮ್ಮುತ್ತಿರುವ ದುಃಖವನ್ನು ನುಂಗಿಕೊಂಡು.—"ನೀವು ಉಚ್ಚರಿಸಿದ ಯಾವ ಅನಿಷ್ಟಗಳೂ ಸದ್ಯಕ್ಕೆ ಒದಗಿಲ್ಲ. ಈಗೊದಗಿದ ಅನಿಷ್ಟವು ಬೇರೆ ವಿಧವಾದದ್ದಿರುವದು."

"ಅದೇನು?" ತಾರಾಬಾಯಿಯು ಉತ್ಕಂಠೆಯಿಂದ ಕೇಳಿದಳು.

"ಚದುರೆಯು ಮಹಾರಾಜರನ್ನು ಸಂಪೂರ್ಣವಾಗಿ ಕೈಯಲ್ಲಿ ತೆಗೆದುಕೊಂಡಿರುವಳು ಈಗ ಅವಳಿಗೆ ಪಟ್ಟಮಹಿಷಿಯ ಮಾನ ಮಾನ್ಯತೆಗಳು ದೊರೆಯತೊಡಗಿವೆ ಅವಳೇ ಈಗಿನ ಅನಭಿಷಿಕ್ತ ರಾಣಿಯು. ನಾನು

ಪರಿತ್ಯಕ್ತ ದಾಸಿಯರ ಮಾಲಿಕೆಯಲ್ಲಿ ಸೇರಿರುವೆನು. ಅಂತಃಪುರದಲ್ಲಿಯೂ, ಅರಮನೆಯಲ್ಲಿಯೂ ಓಲಗದಲ್ಲಿಯೂ ಅವಳದೇ ಸಡಗರ! ಅವಳದೇ ಅಟ್ಟಹಾಸ!! ರಾಜಕಾರಣದ ಸೂತ್ರಗಳು ಸಹ ಅವಳ ಕೈಸೇರತೊಡಗಿರುವವು. ಕೊಲ್ಹಾಪುರದ ರಾಣಿಯ ದಾಸಿಯಾಗುವ ಯೋಗ್ಯತೆಯಿಲ್ಲದ ಆ ಸ್ವೈರಿಣಿಯು ಈಗ ಪಟ್ಟಮಹಿಷಿಯನ್ನೇ ದಾಸಿಯನ್ನಾಗಿ ಮಾಡಿಕೊಳ್ಳುವಷ್ಟು ಯೋಗ್ಯತೆಗೇರಿರುವಳು. ಮಹಾರಾಜರು ಅವಳ ಕೈಯೊಳಗಿನ ಸೂತ್ರದ ಬೊಂಬೆಯಾಗಿರುವರು. ಆ ಗೈಯ್ಯಾಳಿ ಚದುರೆಯು ಮನಸ್ಸಿನ ಮೇಲೆ ತೆಗೆದುಕೊಂಡರೆ, ಇಂದೇ ನಾನು ಸೆರೆಮನೆಯನ್ನು ಸೇರಬೇಕಾಗಬಹುದು; ಇಲ್ಲವೆ ಪ್ರಾಣಕ್ಕಾದರೂ ಹೊರತಾಗಬಹುದು ನಾನು ಹೇಳಿದ್ದೇ ಪೂರ್ವವೆನ್ನುತ್ತಿದ್ದ ಮಹಾರಾಜರು ನನ್ನನ್ನು ಕಸದಂತೆ ಮಾಡಿಬಿಟ್ಟಿರುವರು! ನೀವು ಅನುಭವಿಕರು, ರಾಜಕಾರಣ-ಗೃಹಕಾರಣಗಳಲ್ಲಿ ನುರಿತವರು; ಬುದ್ಧಿಕುಶಲರು. ಅಂತೆಯೇ ಸದ್ಯದ ಗಂಡಾಂತರದ ತರಣೋಪಾಯವನ್ನು ಅರಿತುಕೊಳ್ಳಲಿಕ್ಕೆ ನಿಮ್ಮಲ್ಲಿಗೆ ಬಂದಿರುವೆನು.''

ತಾರಾಬಾಯಿಯು ಉಸಿರ್ಗರೆದಳು; ಆದರೆ ಅವಳ ಆ ಉಸಿರು ಮಾತ್ರ ನಿಜವಾದದ್ದಿದ್ದಿಲ್ಲ; ಕೃತ್ರಿಮವಾಗಿತ್ತು. ಯಾಕಂದರೆ, ಜಿಜಾಬಾಯಿಯು ತನ್ನ ಅಧಿಕಾರ ನಡೆಯುತ್ತಿದ್ದಾಗ ತಾರಾಬಾಯಿಗೆ ಅನೇಕ ವಿಧವಾದ ಅಸಹನೀಯ ಪೀಡೆಗಳನ್ನು ಕೊಟ್ಟಿದ್ದಳು. ಅವುಗಳನ್ನು ತಾರಾಬಾಯಿಯು ಈ ಜನ್ಮದಲ್ಲಿಯಂತೂ ಮರೆಯುವಂತಿದ್ದಿಲ್ಲ. ಮಹಾ ದುಷ್ಟೆಯಾದ ಜಿಜಾಬಾಯಿಯ ಆಳಿಕೆಯು ಪೂರಾ ನಾಶವಾಗಿ, ಚದುರೆಯ ಆಳಿಕೆಯು ಪ್ರಾರಂಭವಾದರೆ ಸಾಕೆಂದು ಅವಳು ಅನ್ನುತ್ತಿದ್ದಳು. ನಿಜವಾದ ಪರಿಸ್ಥಿತಿಯೂ ಹಾಗೆಯೆ ಇದ್ದಿತು. ಚದುರೆಯ ಯುಗವು ಪ್ರಾರಂಭವಾದಂದಿನಿಂದ ತಾರಾಬಾಯಿ, ಅವಳ ಸೊಸೆಯಂದಿರಾದ ಭವಾನಿಬಾಯಿ-ಪಾರ್ವತಿಬಾಯಿಯವರು ಸೌಖ್ಯದಿಂದಿದ್ದರು. ಜಿಜಾಬಾಯಿಯ ಪಾರುಪತ್ಯಗೊಳಿಸಬೇಕೆಂಬ ಉದ್ದೇಶದಿಂದಲೇ ಚದುರೆಯು ಅವರ ಒಲುಮೆಯನ್ನು ಸಂಪಾದಿಸಿಕೊಳ್ಳುವ ಕುತೂಹಲವುಳ್ಳವಳಾಗಿದ್ದಳು. ಅದಕ್ಕಾಗಿಯೇ ಅವಳು ತಾರಾಬಾಯಿಯನ್ನೂ ಅವಳ ಸೊಸೆಯಂದಿರನ್ನೂ ಮರ್ಯಾದೆಯಿಂದ ಕಾಣುತ್ತಿದ್ದಳು.

ತಾರಾಬಾಯಿಯು ಉಸಿರ್ಗರೆದು ಸುಮ್ಮನೆ ಕುಳಿತದ್ದನ್ನು ನೋಡಿ, ಜಿಜಾಬಾಯಿಯು:—''ಯಾಕೆ ಅತ್ತೆಯವರೆ, ಈ ಸಂಕಟದಿಂದ ಪಾರಾಗುವ ಉಪಾಯವು ನಿಮಗೂ ತೋಚದಾಗಿರುವದೇನು?''

ತಾರಾಬಾಯಿಯು ಮತ್ತೊಮ್ಮೆ ನಿಟ್ಟುಸಿರುಬಿಟ್ಟು:—''ಜಿಜಾ,

ಯೋಚಿಸಿ ನೋಡಿದರೆ ಪ್ರಸಂಗವೇನೋ ಕಠಿಣವೆಂಬಂತೆ ತೋರುತ್ತದೆ; ಆದರೂ ಈ ವಿಷಯದಲ್ಲಿ ನೀನು ಹೆಚ್ಚಾಗಿ ಚಿಂತಿಸುವ ಕಾರಣವಿಲ್ಲೆಂದು ನನಗೆ ಭಾಸವಾಗುವದು.''

''ಅದೇಕೆ?'' ಆತುರತೆಯಿಂದ ಜಿಜಾಬಾಯಿಯು ಕೇಳಿದಳು.

''ನೀನು ಇಷ್ಟು ದಿವಸಗಳವರೆಗೆ ರಾಜ್ಯಸೂತ್ರಗಳನ್ನು ಕೈಯಲ್ಲಿಟ್ಟು ಕೊಂಡಿದ್ದೆ; ಆದ್ದರಿಂದ ಪ್ರತಿನಿಧಿ-ಅಮಾತ್ಯ ಮೊದಲಾದವರ ಮೇಲೆ ನಿನ್ನ ವರ್ಚಸ್ಸವಿರುವದು ಅವರು ನಿನ್ನಲ್ಲಿ ನಿಷ್ಠೆಯುಳ್ಳವರಾಗಿರುವರು. ಹೀಗಿದ್ದ ಮೇಲೆ ನೀನು ಯೋಚಿಸುವೆಯೇಕೆ? ಪ್ರಸಂಗವೊದಗಿದರೆ ಅವರ ಸಹಾಯ ದಿಂದ ಸಂಭಾಜಿಯ ಮನಸ್ಸು ತಿರುಗಿಸಲಿಕ್ಕೆ ಬರುವದು; ಅದಾಗದಿದ್ದರೆ ಚದುರೆಯ ಪಾರುಪತ್ಯಗೊಳಿಸಲಿಕ್ಕಾದರೂ ವೇಳೆ ಹತ್ತುವದಿಲ್ಲ.''

''ಮಹಾರಾಜರ ಮನಸ್ಸು ತಿರುಗಿಸುವದಂತು ಅಸಾಧ್ಯವೆ; ಯಾಕಂದರೆ, ಚದುರೆಯು ನನಗಿಂತ ಸಾವಿರಾರು ಪಾಲು ಚಲುವೆಯು; ನವಯುವತಿಯು! ಹೆಸರಿಗೆ ತಕ್ಕಂತೆ ಅವಳು ಚತುರೆಯೂ ಇರುವಳು. ಅಂದಮೇಲೆ ಮಹಾರಾಜರ ಮನಸ್ಸು ಹೇಗೆ ತಿರುಗಬೇಕು? ಇಂತಹ ವಿಷಯಗಳಲ್ಲಿ ರಾಜ್ಯ ಕರ್ತ ಜನರಾದರೂ ಅವರಿಗೆ ಹೇಗೆ ಸಲಹ ಕೊಡುವರು? ನೀವು ಹೇಳಿದ ಇನ್ನೊಂದು ಉಪಾಯವು ಮಾತ್ರ ಇಂದಿಲ್ಲದಿದ್ದರೂ ಎಂದಾದರೂ ತಾರಿಸು ವಂತಹದೆಂದೆನ್ನಲಿಕ್ಕೆ ಬಾಧಕವಿಲ್ಲ ಇಂದು ನಾಳೆ ಮಾತ್ರ ಆ ಕೆಲಸವು ಈಡೇರುವಂತಿಲ್ಲ; ಯಾಕಂದರೆ, ನಮ್ಮ ರಾಜಪರಿವಾರದವರು ಸ್ವಾರ್ಥಪರ ರಿರುವರು ಸಾತಾರೆಯ ಒಲಗದಲ್ಲಿದ್ದಂತಹ ಒಬ್ಬ ವ್ಯಕ್ತಿಯಾದರೂ ನಮ್ಮ ಓಲಗದಲ್ಲಿರುವದಿಲ್ಲ ಎಲ್ಲರೂ ಮುಖಸ್ತುತಿ ಮಾಡಿ ತಮ್ಮ ಬೇಳೆ ಬೆಯಿಸಿ ಕೊಳ್ಳುವವರೇ ಈಗ ಚದುರೆಯ ಯುಗವಿರುವದರಿಂದ ರಾಜ್ಯಕರ್ತರೆಲ್ಲರೂ ಅವಳ ಸ್ವಾಧೀನವಾಗಿರುವರು. ಚದುರೆಯು ಮನಸ್ಸಿನ ಮೇಲೆ ತೆಗೆದು ಕೊಂಡರೆ, ಒಂದೇ ಒಂದು ಗಳಿಗೆಯಲ್ಲಿ ನನ್ನನ್ನೇ ನಾಶಗೊಳಿಸಬಹುದು. ನನ್ನ ಕಟ್ಟುನಿಟ್ಟಿನ ಸ್ವಭಾವಕ್ಕಾಗಿ ಎಷ್ಟೋ ಕರ್ಮಚಾರಿಗಳು ಮೊದಲೇ ನನ್ನ ವಿಷಯವಾಗಿ ಕ್ಷೋಭೆಗೊಂಡಿದ್ದರು. ಈಗಂತೂ ನನಗೆ ಪ್ರತಿಕೂಲ ಕಾಲವೊದಗಿದೆ. ಇಂತಹ ಸಂದರ್ಭದಲ್ಲಿ ನನಗೆ ನೆರವಾಗುವವರು ಯಾರು? ನನಗೆ ನೆರವಾಗುದೆಂದರೆ, ಅರ್ಥಾತ್ ಮಹಾರಾಜರ ವೈರ ಬಳೆಯಿಸಿದಂತೆ ಯೇ ಸರಿ! ಎಂಬ ಭಾವನೆಯು ಅವರಲ್ಲಿ ಹುಟ್ಟುವದೇನೂ ಅಸ್ವಾಭಾವಿಕವಲ್ಲ.

ಜಿಜಾಬಾಯಿಯ ಕಲ್ಪನೆಯು ಯಥಾಸ್ಥಿತವಾದದ್ದಿತ್ತು. ಅವಳು ಅಗ್ನಿಯಂತೆ ಪ್ರಖರಳಿದ್ದು, ಅವಳ ಶಾಸನವು ಅತ್ಯಂತ ನಿಷ್ಠುರತನದ್ದಿತ್ತು. ಸ್ವಕಾರ್ಯ

ಸಾಧನೆಗಾಗಿ ಅವಳು ಅಲ್ಲದ-ಸಲ್ಲದ ಮಾರ್ಗಗಳನ್ನು ಸಹ ಹಿಡಿಯುತ್ತಿದ್ದಳು. ಇವಳು ಅತ್ಯಂತ ಸಂಶಯ ಸ್ವಭಾವದವಳಿದ್ದುದರಿಂದ, ಎಲ್ಲರೂ ತನ್ನ ನಾಶಕ್ಕಾಗಿ ಹೊಂಚು ಹಾಕಿಕೊಂಡು ಕುಳಿತಿರುವರೋ ಎನೋ ಎಂದು ತಿಳಿಯುತ್ತಿದ್ದಳು. ಅವಳು ಯಾವಾಗಲೂ ತನ್ನ ಅಧಿಕಾರವನ್ನು ನಡೆಯಿಸುವದಕ್ಕೆ ಆತುರಳಾಗಿರುತ್ತಿದ್ದಳು. ಉತ್ಪಾತಪ್ರಿಯಳೂ ಕ್ರೂರಳೂ ಆದ ಜಿಜಾಬಾಯಿಯ ವಿಷಯವಾಗಿ ಅವಳ ವಿಶ್ವಾಸಪಾತ್ರರಾಗಿದ್ದ ಚಂದ್ರಸೇನ ಜಾಧವ, ಉದಾಜಿ ಚವ್ಹಾಣ, ಕೃಷ್ಣಾಜಿಪಂತ ಪಟವರ್ಧನ ಮೊದಲಾದ ಸರದಾರರು ಸಹ ಅಸಂತುಷ್ಟರಾಗಿದ್ದರು. ಇದಕ್ಕಾಗಿಯೇ ಜಿಜಾಬಾಯಿಯು ಭಗ್ನ ಮನೋರಥಳಾಗಿದ್ದಳು.

ಜಿಜಾಬಾಯಿಯ ಮಾತುಗಳನ್ನು ಕೇಳಿ ತಾರಾಬಾಯಿಯು ನಿರಾಶಾಜನಕ ವಾಣಿಯಿಂದ:—"ಜಿಜಾ, ಈ ವಿಷಯದಲ್ಲಿ ನನ್ನ ಬುದ್ಧಿ ಸಾಲದು. ಸಂಭಾಜಿಯು ಚದುರೆಯ ಹಿಡಿಕೆಯಲ್ಲಿ ಪೂರಾ ಸಿಲುಕಿರುವನು. ಚದುರೆಯು ಅವನನ್ನು ಕೈಬೆರಳಿನ ಮೇಲೆ ಸೂತ್ರದ ಗೊಂಬೆಯಂತೆ ಕುಣಿಸುತ್ತಿರುವಳು. ಸಂಭಾಜಿಯನ್ನು ಹೆಸರಿಗೆ ರಾಜನನ್ನಾಗಿ ಕುಳ್ಳಿರಿಸಿ ಎಲ್ಲೆಡೆಯಲ್ಲಿಯೂ ತನ್ನ ವರ್ಚಸ್ಸನ್ನು ಕೆಡಹಿದ ಚತುರ ಚದುರೆಯು ಮುಂದೆ ತನ್ನ ಕೌಶಲ್ಯವೇನು ನಡೆಯಬೇಕು? ನಮ್ಮ ಓಲಗದಲ್ಲಿ ನಿಸ್ಪೃಹಿಗಳೂ, ರಾಜನಿಷ್ಠರೂ, ಪ್ರತಾಪಿಗಳೂ, ನ್ಯಾಯಪ್ರಿಯರೂ ಆದ ಕಟ್ಟಾ ರಾಜ್ಯಕರ್ತರು ದೊರೆಯುವದು ಮೊದಲೇ ವಿರಳ ಬಹುತರವಾಗಿ ಆ ಎಲ್ಲ ಜನರು ಈಗ ನೂತನ ರಾಣಿಯಾದ ಚದುರೆಯ ಮನವೊಲಿಸಲಿಕ್ಕೇ ಮಗ್ನರಾಗಿರುವರು ಜಿಜಾ, ಈಗ ನಿನಗೆ ಗ್ರಹದೆಶೆಯು ಪ್ರತಿಕೂಲವಿರುವದು ಕೆಲವು ದಿನಗಳ ವರಗೆ ಕಾಲಪ್ರತೀಕ್ಷೆ ಮಾಡು. ಮುಂದೆ ಪ್ರಸಂಗವೊದಗಿದಂತೆ ನೋಡಲಿಕ್ಕೆ ಬಂದೀತು."

ಜಿಜಾಬಾಯಿಯು ಮತ್ತೆ ದುಃಖಿಸತೊಡಗಿದಳು. ಅವಳ ಕಣ್ಣುಗಳು ಮತ್ತೆ ಜಲಪೂರ್ಣವಾದವು. ಆಗ ಅವಳು:—"ಅತ್ತೆಯವರೆ, ಕಾಲಪ್ರತೀಕ್ಷ ಮಾಡುವಂತಿಲ್ಲ. ಈಗ ಚದುರೆಯು ಗರ್ಭಿಣಿಯಿರುವಳು. ಅವಳ ಸುದೈವದಿಂದಲೂ ನಮ್ಮ ದುರ್ದೈವದಿಂದಲೂ ಅವಳು ಪುತ್ರಸಂತಾನವನ್ನು ಪ್ರಸೂತಳಾದರೆ, ನಿಸ್ಸಂತಾನವಾಗಿರುವ ನಮ್ಮ ರಾಜ್ಯಕ್ಕೆ ಅವನೇ ಒಡೆಯನಾಗುವದಿಲ್ಲವೇ? ಮಹಾರಾಜರು ತಮ್ಮ ಪ್ರೇಯಸಿಯ ಮಗನನ್ನು ಪಟ್ಟಕ್ಕೆ ಬಾಧ್ಯನನ್ನಾಗಿ ಮಾಡದೆ ಬಿಡುವರೆ? ಪರಮಪೂಜ್ಯ ಆಬಾಸಾಹೇಬರ (ಛತ್ರಪತಿ ಶಿವಾಜಿ ಮಹಾರಾಜರ) ಅತ್ಯಂತ ಪವಿತ್ರ ಸ್ವರಾಜ್ಯಸಿಂಹಾಸನವು ದಾಸೀಪುತ್ರನಿಂದ ಅಪವಿತ್ರಗೊಳ್ಳಬೇಕೆಂದು ನೀವು ಇಚ್ಛಿಸುತ್ತಿರುವಿರಾ?"

ಜಿಜಾಬಾಯಿಯು ಎಷ್ಟು ಕರ್ಕಶಸ್ವಭಾವದವಳಾಗಿದ್ದರೂ ಪ್ರಸಂಗ ವೊದಗಿದ ವೇಳೆಯಲ್ಲಿ ಮಾನಾಭಿಮಾನಗಳನ್ನು ಸಹ ತೊರೆದು ಬಹು ವಿನಯ ಶಾಲಿನಿಯಂತಾಗುತ್ತಿದ್ದಳು. ಯುಕ್ತಿ-ಪ್ರಯುಕ್ತಿಗಳಿಂದ ಜನರ ಮನಸ್ಸನ್ನು ಒಲಿಸಿಕೊಳ್ಳುವ ಕಲೆಯು ಅವಳಿಗೆ ಚನ್ನಾಗಿ ಅವಗತವಿದ್ದಿತು. ತಾರಾ ಬಾಯಿಯು ಅವಳ ಗುಣಗಳನ್ನೇನೂ ಅರಿಯದವಳಿದ್ದಿಲ್ಲ. ಅವಳು ಜಿಜಾಬಾ ಯಿಗಿಂತ ಎಷ್ಟೋ ಹೆಚ್ಚು ಮಳೆಗಾಲಗಳನ್ನು ಕಂಡಿದ್ದಳು; ರಾಜಕಾರಣದಲ್ಲಿ ಎಷ್ಟೋ ಬಗೆಯಾಗಿ ನೈಪುಣ್ಯವನ್ನು ಪ್ರಕಟಿಸಿದ್ದಳು. ಈಗ ಕಾಲವೈಚಿತ್ರ್ಯದ ಮೂಲಕ ಅವಳು ನಿರುಪಾಯಳಾಗಿದ್ದಳೇ ಹೊರತು, ಭೋಸಲೆ ಮನೆತನ ದಲ್ಲಿ ತಾರಾಬಾಯಂತಹ ಚಾಣಾಕ್ಷ ಹಾಗು ರಾಜಕಾರಣ ನಿಪುಣ ಸ್ತ್ರೀಯರು ಯಾರೂ ಆಗಲಿಲ್ಲವೆಂದು ಹೇಳಬಹುದು. ಇಂತಹ ಎಷ್ಟು ಜಿಜಾಬಾಯಿ ಯರು ಬೇಡಿಕೊಂಡಿದ್ದರೂ ಅವಳ ಹೃದಯವು ಕರಗುತ್ತಿದ್ದಿಲ್ಲ; ಸ್ವಭಾವ ಪರಿವರ್ತನವಾಗುತ್ತಿದ್ದಿಲ್ಲ, ಆದರೆ ಒಂದೇ ಒಂದು ವಿಷಯಕ್ಕಾಗಿ ಅವಳ ಮನೋಭೂಮಿಕೆಯು ನಿಮಿಷಾರ್ಧದಲ್ಲಿ ಪರಿವರ್ತನೆಹೊಂದಿತು. ಸಂಭಾ ಜಿಯು ಚದುರೆಯ ಸೂತ್ರದ ಗೊಂಬೆಯಾದುದರಿಂದ, ಅವಳಿಂದ ಹುಟ್ಟಿದ ಆಪತ್ಯವೇ ಭಾವೀ ಸಿಂಹಾಸನಾಧಿಕಾರಿಯಾಗಬಹುದೆಂಬ ಆಶಂಕೆಯು ಅವ ಳನ್ನು ಚೆನ್ನಾಗಿ ಗಾಸಿಗೊಳಿಸಿತು. ಯಾಕಂದರೆ, ಶಿವಾಜಿಮಹಾರಾಜರ ಪೂಜ್ಯ ಸಿಂಹಾಸನದ ವಿಷಯಕ್ಕೆ ಅವಳ ಭಕ್ತಿ ಬಹಳವಾಗಿತ್ತು. ಯಃಕ ಶ್ಚಿತ ದಾಸಿಯಾದ ಚದುರೆಯ ಪುತ್ರನು ಸಿಂಹಾಸನಕ್ಕೆ ಬಾಧ್ಯಸ್ತನೆಲ್ಲಾಗು ವನೋ ಎಂಬ ಭಯವು ಅವಳನ್ನೂ ಚನ್ನಾಗಿ ಬಾಧಿಸತೊಡಗಿತು. ಯುಕ್ತಿ ಪ್ರಯುಕ್ತಿಗಳಿಂದ ಚದುರೆಯ ಪಾರುಪತ್ಯಗೊಳಿಸದಿದ್ದರೆ, ಪರಿಣಾಮವು ಒಳತಾಗುವದಿಲ್ಲೆಂದು ಅವಳೂ ತಿಳಿದಳು. ಆಗ ಅವಳು ಜಿಜಾಬಾಯಿಯನ್ನು ಕುರಿತ:—“ಜಿಜಾ, ಆ ಗೈಯಾಳಿಯು ಗರ್ಭಿಣಿಯಿರುವಳೆ? ಹಾಗಾದರೆ ನಾನು ಹೇಳಿದಂತೆ ಕೆಲಸ ಮಾಡಿದರೆ ನಿನ್ನ ಗಂಡಾಂತರವೂ ನಿವಾರಣವಾಗು ವದು; ಸಿಂಹಾಸನದ ಮೇಲೆ ಬಂದ ವಿಪತ್ತೂ ಪರಿಹಾರವಾಗುವದು ಸಂಭಾ ಜಿಯು ನಾಲ್ಕಾರು ದಿನಗಳಲ್ಲಿ ಶಾಹುವಿನ ವಿರುದ್ಧವಾಗಿ ನಡೆದ ರಾಜಕಾರಣ ವಿಷಯದಲ್ಲಿ ಮಾತನಾಡುವದಕ್ಕಾಗಿ ನಿಜಾಮನ ಕಡೆಗೆ ಹೋಗುವವನಿದ್ದಾನೆ. ನಿಜಾಮನಿಂದ ಅವಸರದ ಪತ್ರಗಳು ಬರತೊಡಗಿವೆ. ಈ ಸುಸಂಧಿಯನ್ನು ಸಾಧಿಸಿ ನೀನು ರಾಜ್ಯಕರ್ತರನ್ನು ಸ್ವಾಧೀನ ಪಡಿಸಿಕೋ. ಭಗವಂತರಾವ ಅಮಾತ್ಯನು ನಿಸ್ಪೃಹಿಯೂ ಸತ್ಪಕ್ಷಪಾತಿಯೂ ಇರುವನು. ಅವನು ಬಹಿ ರಂಗದಲ್ಲಿ ಚದುರೆಯ ಪಕ್ಷದವನೆಂಬಂತೆ ತೋರುತ್ತಿದ್ದರೂ, ಅಂತರಂಗದ

ಒಲವು ನಿನ್ನ ಕಡೆಗೇ ಇರುವದು. ನಾನಾದರೂ ಅಮಾತ್ಯನಿಗೆ ಆಜ್ಞಾಪತ್ರ ಕಳುಹಿಸುವೆನು. ಇನ್ನು ಉದಾಜಿ ಚವ್ಹಾಣನು ಯಾವದೋ ಒಂದು ಸ್ವಾರ್ಥಸಾಧನೆಗಾಗಿ ಯಾವಾಗಲೂ ನಿನ್ನ ಆಜ್ಞಾಧಾರಕನಾಗಿಯೇ ಇರುವನು. ಸಂಭಾಜಿಯು ರಾಜಧಾನಿಯನ್ನು ಬಿಟ್ಟು ತೆರಳಿದ ಸಂಧಿಯನ್ನು ಸಾದಿಸಿ, ನೀನು ಅವರಿಂದ ಚದುರೆಯ ಪಾರುಪತ್ಯಗೊಳಿಸು. ನಾನು ಹೇಳಿದಂತೆ ನಡೆದರೆ, ನಿನಗೆ ನಿಜವಾಗಿಯೂ ಕಲ್ಯಾಣವಾಗುವದು."

ತಾರಾಬಾಯಿಯ ಸಮಯಸೂಚಕತೆಯಿಂದ ಜಿಜಾಬಾಯಿಗೆ ಆನಂದವಾಯಿತು. ಇತ್ತೀಚೆಗೆ ಜಿಜಾಬಾಯಿಯು ಸಂಭಾಜಿಯ ಪ್ರೇಮಕ್ಕೆ ಹೊರತಾದಂದಿನಿಂದ ರಾಜಕಾರಣದ ಗಂಧವಾರ್ತೆಯೂ ಅವಳಿಗೆ ಹತ್ತುತ್ತಿರಲಿಲ್ಲ. ಪತಿಯು ರಾಜಧಾನಿಯಲ್ಲಿರುವನೋ, ಮತ್ತೆಲ್ಲಿಗಾದರೂ ಹೋಗಿರುವನೋ ಎಂಬದು ಕೂಡ ಅವಳಿಗೆ ತಿಳಿಯಲಿಕ್ಕೆ ಮಾರ್ಗವಿದ್ದಿಲ್ಲ, ಯಾಕಂದರೆ, ಗೃಹಕಾರಣ-ರಾಜಕಾರಣಗಳಲ್ಲಿ ಚದುರೆಯೇ ನಾಯಿಕೆಯಾಗಿದ್ದು, ಜಿಜಾಬಾಯಿಯು ಅನಾಯಕತ್ವ ಹೊಂದಿ ಎಲ್ಲಿಯೋ ಹೇಗೋ ವೇಳೆಗಳೆಯುತ್ತಲಿದ್ದಳು. ತಾರಾಬಾಯಿಯ ಭೆಟ್ಟಿಯಾಗದಿದ್ದರೆ, ಚದುರೆಯ ಪಾರುಪತ್ಯದ ಕೆಲಸ ನಡೆಯುತ್ತಿದ್ದಿಲ್ಲವೆಂದು ಅವಳಿಗೆ ಮನವರಿಕೆಯಾಯಿತು. ಆಗ ಅವಳು ತಾರಾಬಾಯಿಯನ್ನು ಕುರಿತು:—"ಮಹಾರಾಜರು ನಿಜಾಮನ ಭೆಟ್ಟಿಗಾಗಿ ಹೊರಡುವರೆಂಬದನ್ನು ನಾನು ಕೇಳಿದ್ದಿಲ್ಲ ನಿಮಗೆ ಈ ಸುದ್ದಿಯನ್ನು ಯಾರು ಹೇಳಿದರು?''

"ಆ ಚದುರೆಯೇ ಹೇಳಿದಳು. ಅವಳು ನಿನ್ನನ್ನು ನೀರಲ್ಲಿ ನೋಡುತಿದ್ದರೂ, ನನ್ನ ವಿಷಯವಾಗಿ ಅಷ್ಟೊಂದು ದ್ವೇಷಭಾವನೆಯುಳ್ಳವಳಾಗಿಲ್ಲ ಸಂಭಾಜಿಯೊಡನೆ ತಾನೂ ಪ್ರವಾಸಕ್ಕೆ ಹೋಗಬೇಕೆಂದು ಅವಳು ಅನ್ನುತ್ತಾಳೆ. ಅವಳ ಪ್ರವಾಸವನ್ನು ನಿಲ್ಲಿಸಿದರೆ, ನಿನ್ನ ಕಾರ್ಯವು ಸಾಧಿಸುವದು."

ಜಿಜಾಬಾಯಿಯು ಮತ್ತೆ ಯೋಚನೆಗೊಳಗಾದಳು. ಕೆಲವು ವೇಳೆಯ ಮೇಲೆ ಅವಳು ವಿಷಾದ ವ್ಯಂಜಕವಾಣಿಯಿಂದ:—''ಅತ್ತೆಯವರೇ, ಇದಕ್ಕೆ ಯಾವ ಉಪಾಯ ಮಾಡಬೇಕು?''

''ಇದರಲ್ಲೇನು ಅಷ್ಟೊಂದು ರಾಜಕಾರಣವಿದೆ? ಗರ್ಭಿಣಿ ಸ್ತ್ರೀಯರನ್ನು ಪ್ರವಾಸಕ್ಕೆ ಹೊರಡಿಸುವದು ಅನುಚಿತವೆಂಬದನ್ನು ಸಂಭಾಜಿಯ ಕಿವಿಯ ಮೇಲೆ ವೇಳೆಗೆ ಸರಿಯಾಗಿ ಹಾಕುವಂತೆ ಉದಾಜಿ ಚವ್ಹಾಣನಿಗೆ ತಿಳಿಸು; ಹಾಗು ಸದ್ಯದ ರಾಜಕೀಯ ಗೊಂದಲದಲ್ಲಿ ಚದುರೆಯಂಥ ಚತುರಳು ರಾಜಧಾನಿಯಲ್ಲಿದ್ದರೇ ಹಿತವಾಗುವದೆಂಬದನ್ನೂ ಸಂಭಾಜಿಯ ಮನಸ್ಸಿಗೆ ಬಿಂಬಿ

ಸುವಂತೆ ತಿಳಿಸುವದಕ್ಕಾಗಿ ಅವನಿಗೆ ಹೇಳು."

"ಅತ್ತೆಯವರೇ! ಪ್ರಶಂಸನೀಯವಾದ ತಂತ್ರವಿದು! ನೀವು ಇಂತಹ ಪಾತಾಳಯಂತ್ರಿಗಳಿರುವದನ್ನು ಮನಗಂಡದ್ದರಿಂದಲೇ ನಿಮ್ಮ ಬಳಿಗೆ ಬಂದೆನು. ನೀವು ನಿರ್ವೈರಭಾವನೆಯಿಂದ ಯೋಗ್ಯ ಸಲಹೆ ಕೊಟ್ಟದ್ದಕ್ಕಾಗಿ ತುಂಬಾ ಋಣಿಯಾಗಿರುವೆನು."

ಜಿಜಾಬಾಯಿಯು 'ಸಂಕಟ ಬಂದಾಗ ವೆಂಕಟರಮಣ'ನೆನ್ನುವ ಸ್ವಭಾವದವಳಿದ್ದದ್ದನ್ನು ತಾರಾಬಾಯಿಯು ಅರಿಯದಿದ್ದಿಲ್ಲ. ಶಿವಪ್ರಭುವಿನ ಸಿಂಹಾಸನಕ್ಕಾಗಿ ಎಲ್ಲಿಯದೋ ಒಂದು ಕಾಗೆಯು ಹೊಂಚುಹಾಕಬಾರದೆಂಬ ಉದ್ದೇಶದಿಂದಲೇ ತಾರಾಬಾಯಿಯು ಜಿಜಾಬಾಯಿಗೆ ಅಂತಃಕರಣಪೂರ್ವಕವಾಗಿ ಸಲಹೆ ಕೊಟ್ಟಳು. ಅನ್ಯರೊಡನೆ ಜರುಗುವ ಇಂತಹ ಪ್ರಸಂಗಗಳಲ್ಲಿ ಸ್ವಕೀಯರು ಪರಸ್ಪರರಿಗೆ ನೆರವಾಗುವದೇ ಧರ್ಮವೆಂದು ತಾರಾಬಾಯಿಯು ಜಿಜಾಬಾಯಿಗೆ ಹೇಳಿದಳು. ಅನಂತರ ಸ್ವಲ್ಪ ವೇಳೆಯವರೆಗೆ ಮಾತಿಗೆ ಬಾರದ ಆ ಮಾತು ಈ ಮಾತು ಜರುಗಿದವು. ಅನಂತರದಲ್ಲಿ ಜಿಜಾಬಾಯಿಯು ಅಂದೇ ಅತ್ತೆಯವರಾದ ಅತ್ತೆಯ ನಿರೋಪ ಹೊಂದಿ ಅಲ್ಲಿಂದ ತೆರಳಿದಳು.

---

## ತಿರುಕನ ಕನಸು.



ಚದುರೆಯು ಸಂಭಾಜಿ ಮಹಾರಾಜನ ಅಂತಃಪುರವನ್ನು ಸೇರಿದಾಗ ಅವಳ ಅಣ್ಣನಾದ ರಘೂಜಿ ಧೋರಾತನು ಬಹೇಬೋರಗಾಂವದಲ್ಲಿದ್ದಿಲ್ಲ. ಅವನು ಪೇಶವೇ ಬಾಜೀರಾಯನ ಸೈನ್ಯದಲ್ಲಿ ಸೈನಿಕನಾಗಿದ್ದು, ಯಜಮಾನನೊಡನೆ ಯುದ್ಧಕ್ಕೆ ತೆರಳಿದ್ದನು. ರಘೂಜಿಯು ಕಟ್ಟುನಿಟ್ಟಿನ ಸ್ವಭಾವದವನೂ, ಅಭಿಮಾನಿಯೂ, ಪಾಪಭೀರುವೂ, ಅನ್ಯಾಯವನ್ನು ಸಹಿಸದಂಥವನೂ ಇದ್ದುದರಿಂದ, ಅವನ ಎದುರಿಗೆ ತಾಂಡವನೃತ್ಯ ಮಾಡುವ ಧೈರ್ಯವು ತ್ರ್ಯಂಬಕಸುಂದರನಲ್ಲಿದ್ದಿಲ್ಲ. ಅಂತೆಯೆ ಅವನು ರಘೂಜಿಯು ಊರಲ್ಲಿರದ ವೇಳೆಯನ್ನು ಸಾಧಿಸಿ ತನ್ನ ಕರ್ತವ್ಯವನ್ನು ಕೊನೆಗಾಣಿಸಿದನು. ಈ ಕೆಲಸ ಮಾಡುವಾಗ ಅವನು ಚದುರೆಯ ತಂದೆಯಾದ ಬಿಂಬಾಜಿಗೆ ಭೂ-ಧನಗಳ ಆಶೆಯನ್ನು ಹಚ್ಚಿದ್ದನು. ಈಗಾಗಲೆ ವಚನದ ಮೇರೆಗೆ ಹಣವು ಬಿಂಬಾಜಿಯ ಕೈ ಸೇರಿತ್ತು; ಭೂಮಿಗಳು ಹಿಂದಿನಿಂದ ದೊರೆಯುವವೆಂದು ತ್ರ್ಯಂಬ

ಕನು ಅವನಿಗೆ ಆಶ್ವಾಸನೆಯಿತ್ತಿದ್ದನು. ಸಂಭಾಜಿಯು ಆ ದುರಾಚಾರಿಯಾದ ತ್ರ್ಯಂಬಕನಿಗೆ ಬಹೇಬೋರಗಾಂವ ಗ್ರಾಮುವನ್ನು ಇನಾಮು ಹಾಕಿಕೊಟ್ಟಿದ್ದನು.

ಚದುರೆಯ ತಾಯಿಯಾದ ಮೈನಾಬಾಯಿಗೆ ಬಿಂಬಾಜಿಯ ಈ ವರ್ತನವು ಎಷ್ಟುಮಾತ್ರವೂ ರುಚಿಸಲಿಲ್ಲ. ಅವಳು ಪತಿಯ ಮನವೊಲಿಸಲಿಕ್ಕೆ ಬಹು ಪರಿಯಾಗಿ ಯತ್ನಿಸಿ ನಿಷ್ಫಲಮನೋರಥಳಾದಳು ತನ್ನ ಪತಿಯ ಈ ವೃತ್ತಿಯು ಅವಳ ಗೌರವಕ್ಕೆ ಕುಂದು ತಂದಂತಾಗಿತ್ತು. ಕಾಲವಶದಿಂದ ಸದ್ಯದ ಸ್ಥಿತಿಯು ಅವಳಿಗೆ ಬಡತನದ್ದಾಗಿದ್ದರೂ, ಮೊದಲು ದೊಡ್ಡ ಮನೆತನದಲ್ಲಿ ಹುಟ್ಟಿ ಬೆಳೆದವಳಾಗಿದ್ದಳು ಇವಳು ತೋರಗಲ್ಲಿನ ಸಿಂದೆಯ ಮನೆತನದವಳು. ಬಿಂಬಾಜಿ ಧೋರಾತನ ಮನೆತನವಾದರೂ ಸಿಂದೆಯ ಮನೆತನಕ್ಕೆ ಸರಿಸಮಾನದ್ದಿತ್ತು. ಸಂಭಾಜಿಯ ಪತ್ನಿಯಾದ ಜಿಜಾಬಾಯಿಯಾದರೂ ಸಿಂದೆಯ ಮನೆತನದವಳೇ. ಅವಳ ತಂದೆಗೆ ಕಾಲವು ಅನುಕೂಲವಿದ್ದುದರಿಂದ ಅವಳು ರಾಜಮನೆತನವನ್ನು ಸೇರಿದ್ದಳು; ಆದರೆ ಮೈನಾಬಾಯಿಯ ತಂದೆಯು ದೈವದುರ್ವಿಪಾಕದಿಂದ ದೀನದರಿದ್ರನಾದುದಕ್ಕಾಗಿ ಮೈನಾಬಾಯಿಯು ಬಿಂಬಾಜಿಯ ಮನೆಯನ್ನು ಸೇರಿದಳು. ಮೊದಲು ಬಹೇಬೋರಗಾಂವಗ್ರಾಮುವು ಬಿಂಬಾಜಿಯ ತಂದೆಯಾದ ಯಶವಂತರಾಯನ ಒಡೆತನದ್ದಾಗಿತ್ತು, ಆದರೆ ಬಿಂಬಾಜಿಯ ಕಾಲಕ್ಕೆ ಆ ಗ್ರಾಮುದ ಒಡೆತನವು ಕಾಗದ-ಪತ್ರಗಳ ಮಟ್ಟಿಗೆ ಅವನ ಕಡೆಗೆ ಉಳಿದಿತ್ತು ಈಗ ಅವನ ವಶದಲ್ಲಿ ಕೆಲವು ಭೂಮಿಗಳಷ್ಟೆ ಉಳಿದಿದ್ದವು. ವಸ್ತುಸ್ಥಿತಿಯು ಹೀಗಿದ್ದರೂ, ಮೈನಾಬಾಯಿಗೆ ತನ್ನ ತವರುಮನೆಯ ಹಾಗು ಅತ್ತೆಯ ಮನೆಯ ಅಭಿಮಾನ ಬಹಳವಾಗಿತ್ತು. ತಾನು ದೊಡ್ಡ ಮನೆತನದವಳೆಂದು ತಿಳಿದುಕೊಂಡದ್ದೇ ಅವಳ ಅಭಿಮಾನದ ಮುಖ್ಯ ಕಾರಣವಾಗಿತ್ತು ಈ ಅಭಿಮಾನಕ್ಕೆ ಬಿದ್ದು, ಅವಳು ತನ್ನ ಒಬ್ಬಳೇ ಒಬ್ಬ ರೂಪವತಿಯಾದ ಚದುರೆಯನ್ನು ಸರಿಯಾದ ಮನೆತನಕ್ಕೆ ಕೊಡಬೇಕೆಂದು ಯೋಚಿಸಿದ್ದಳು ಆದರಂತೆ ಅವಳು ಮಸೂರದ ಕಂತಾಜಿ ಜಗದಳೆಯ ಮಗನಾದ ಕೃಷ್ಣಾಜಿಗೆ ಚದುರೆಯನ್ನು ಧಾರೆಯೆರೆದುಕೊಟ್ಟಿದ್ದಳು. ಕೃಷ್ಣಾಜಿಯು ಸಶಕ್ತನೂ ಸುರೂಪಿಯೂ ಆಗಿದ್ದನು. ಅವನು ಪ್ರತಿನಿಧಿ ಶ್ರೀಪತಿರಾಯನ ಸೈನ್ಯದಲ್ಲಿ ಪೇದೆಯಾಗಿದ್ದನು. ಅವನಿಗೆ ತಕ್ಕಮಟ್ಟಿಗೆ ಭೂಮಿ-ಕಾಣೆಯಾದರೂ ಇತ್ತು. ಕೃಷ್ಣಾಜಿಯು ತಾರುಣ್ಯದಶೆಗೆ ಬಂದೊಡನೆಯೆ ದುರ್ವ್ಯಸನಕ್ಕೆ ಬಿದ್ದು, ತನ್ನ ಭೂಮಿ-ಸೀಮೆಗಳನ್ನೆಲ್ಲ ಕಳೆದು ಎಲ್ಲಿಗೋ ಹೊರಟು ಹೋದನು. ಅವನ

ತಾಯಿಯಾದ ಕಾವೇರಿಬಾಯಿಯೂ, ತಂದೆಯಾದ ಕಂರಾಜಿಯೂ ಅನನ್ಯಗತಿಕರಾಗಿ ಮೈಸೂರನ್ನು ಬಿಟ್ಟು ತೆರಳಿದರು. ಶ್ವಶುರಗೃಹದ ಸ್ಥಿತಿಯು ಈ ಬಗೆಯಾಗಿ ಹಾಳಾಗಿ ಹೋದುದಕ್ಕಾಗಿ ಚದುರೆಗೆ ಮರಣಪ್ರಾಯವಾದ ವ್ಯಸನವಾಯಿತು. ಅವಳು ಪತಿಯ ಶೋಧಕ್ಕಾಗಿ ಬಹುಪರಿಯಿಂದ ಶ್ರಮಬಟ್ಟಳು; ಆದರೆ ಅವಳಿಗೆ ಪತಿಯು ಶೋಧವು ಹತ್ತಲಿಲ್ಲ ಅವಳು ನಿರುಪಾಯಳಾಗಿ ಬಹೇಬೋರಗಾಂವಕ್ಕೆ ಬಂದಳು.

ತ್ರ್ಯಂಬಕಸುಂದರನು ಚದುರೆಯ ರೂಪ-ಲಾವಣ್ಯಾದಿಗಳ ಲಾಭಪಡೆಯಬೇಕೆಂದು ಯೋಚಿಸಿದನು ಅವನು ಕೊಲ್ಹಾಪುರಕ್ಕೆ ಹೋಗಿ ಚದುರೆಯ ಸೌಂದರ್ಯವನ್ನು ಸಂಭಾಜಿಮಹಾರಾಜನೆದುರಿಗೆ ಬಹುಪರಿಯಾಗಿ ಬಣ್ಣಿಸಿದನು ಸಂಭಾಜಿಯು ವಿಲಾಸಿಯಿದ್ದು, ಆಸುರೀವಿಷಯಲಾಲನೆಯುಳ್ಳವನಿದ್ದನು. ಅವನು ತ್ರ್ಯಂಬಕನಿಗೆ ಬಹೇಬೋರಗಾಂವ ಗ್ರಾಮದ ಇನಾಮಿನ ಅಶೆಹಚ್ಚಿ, ಚದುರೆಯನ್ನು ಸ್ವಾಧೀನಪಡಿಸಿಕೊಂಡನು.

ಸೈನ್ಯದೊಡನೆ ಹೋಗಿದ್ದ ರಘೂಜಿಯು ಬಹೇಬೋರಗಾಂವಕ್ಕೆ ಬಂದನು ಅವನಿಗೆ ತನ್ನ ಭಗಿನಿಯ ಸಂಬಂಧದ ಎಲ್ಲ ವೃತ್ತಾಂತವು ತಿಳಿಯಿತು. ಕೂಡಲೆ ಅವನ ಸಂತಾಪವು ಮಸ್ತಕಕ್ಕೇರಿತು ಅವನು ತಂದೆಯ ಬಳಿಗೆ ಬಂದು:—"ಸದ್ಗುಣಿಯೂ ಕುಲವತಿಯೂ ಆದ ಮಗಳನ್ನು ಒಲುಮೆಯಿಂದ ಅಡ್ಡದಾರಿಗೆ ಹಚ್ಚಿ ಯಾವ ಐಶ್ವರ್ಯವನ್ನು ಗಳಿಸಿದಿರಿ? ಮಗಳ ಪಾತಿವ್ರತ್ಯವನ್ನು ಸಂತೆಯಲ್ಲಿ ಮಾರಿ ಹೊಟ್ಟೆಹೊರೆಯುವಂತಹ ಪ್ರಸಂಗವು ನಿಮಗೇನು ಬಂದಿತ್ತು? ಒಟ್ಟಿನ ಮೇಲೆ ನೀವು ಘೋರಾತ ಮನೆತನವನ್ನು ಬೆಳಕಿಗೆ ತಂದಿರಿ ನಿಮ್ಮ ಮಗಳಾದ ಚದುರೆಯ ಶೀಲದ ಕಡೆಗೆ ನೀವು ಲಕ್ಷ್ಯಗೊಡಲಿಲ್ಲ. ತ್ರ್ಯಂಬಕಸುಂದರನು ತಾನು ಗ್ರಾಮವನ್ನು ಇನಾಮುಪಡೆದು, ನಿಮಗೆ ಕೊಟ್ಟ ಒಂದು ತುಣುಕು ರೊಟ್ಟಿಯಿಂದಲೇ ನೀವು ಸಂತುಷ್ಟರಾದಿರಿ. ಮಗಳ ಶೀಲವನ್ನು ಮಾರಿದವರು ನೀವು; ಅದರ ಫಲವು ತ್ರ್ಯಂಬಕನಿಗೆ! ಸಾಧ್ವಿಯರ ಶೀಲದ ಬೆಲೆಯು ಎಷ್ಟಿರುವದೆಂಬದರ ಪರಿವೆಯು ನಿಮಗಿಲ್ಲದಿರುವಾಗ ಏನು ಮಾಡಬೇಕು? ಇಡೀ ಪೃಥ್ವಿಯ ಬೆಲೆಗಿಂತ ಒಬ್ಬ ಸಾಧ್ವಿಯ ಶೀಲವು ಹೆಚ್ಚಿನ ಬೆಲೆಯುದಾಗಿದೆ. ನೀವು ಈ ಅನುಚಿತವೂ ನಿಂದ್ಯವೂ ಆದ ಕೃತಿಯನ್ನು ಮಾಡಿ ದುರ್ಗತಿಯನ್ನು ಹೊಂದಿದಿರಿ; ಮನೆತನಕ್ಕೆ ಕಲಂಕ ಹಚ್ಚಿದಿರಿ! ನಿಮ್ಮ ಈ ಕೃತಿಗೆ ಶತಶಃ ಧಿಃಕಾರವು!"

ರಘೂಜಿಯು ತಂದೆಯ ನಿರ್ಭರ್ತ್ಸನೆ ಮಾಡಿ, ತನ್ನ ಭಗಿನಿಯ ಶೀಲವನ್ನು ಸೂರೆಗೈಯಲಿಕ್ಕೆ ಕಾರಣೀಭೂತನಾದ ತ್ರ್ಯಂಬಕಸುಂದರನ ಸಮಾ

ಚಾರ ತೆಗೆದುಕೊಳ್ಳಲಿಕ್ಕೆ ಮನೆಯಿಂದ ಹೊರಬಿದ್ದನು. ಅವನು ತುಂಬಿದ ಚಾವಡಿಯಲ್ಲಿ ತ್ರ್ಯಂಬಕಸುಂದರನ ಮಾನಭಂಗ ಮಾಡಿ:—"ತ್ರ್ಯಂಬಕಾ! ನೀನು ನನ್ನ ತಂಗಿಯ ಪಾವಿತ್ರ್ಯವನ್ನು ನಾಶಗೊಳಿಸಿದ್ದರಿಂದ ನನ್ನ ಕ್ರೋಧಾಗ್ನಿಯಿಂದ ಹುರಪಳಿಸಿ ಹೋಗುವೆ ನೀನೂ ನಿನ್ನ ಒಡೆಯನಾದ ಸಂಭಾಜಿರಾಜನೂ ಬೇಗನೆ ಕರ್ಮಕ್ಕೆ ತಕ್ಕ ಫಲವನ್ನು ಹೊಂದುವಿರಿ. ನನ್ನ ಮನೆತನಕ್ಕೆ ಹತ್ತಿದ ಕಲಂಕವನ್ನು ನಿಮ್ಮ ರಕ್ತದಿಂದಲೇ ತೊಳೆಯುವೆನು ಇದೇ ನನ್ನ ಪ್ರತಿಜ್ಞೆಯು!"

ರಘೂಜಿಯು ಹೀಗ ನುಡಿದವನೇ ಅಲ್ಲಿಂದ ಓಡಿ ಹೋದನು ತ್ರ್ಯಂಬಕರಾಯನು ರಘೂಜಿಯನ್ನು ಹಿಡಿದು, ಅವನ ಪ್ರಾಣವನ್ನೇ ಹೀರಬೇಕೆಂದು ಬೆನ್ನಟ್ಟಿದನು; ಆದರೆ ಚಪಲನಾದ ರಘೂಜಿಯು ತ್ರ್ಯಂಬಕರಾಯನ ಹಾಗು ಅವನ ಅನುಯಾಯಿಗಳ ಕೈಗೆ ಸಿಗವೆ ಜಾರಿ ಹೋದನು ಜನರು ಅವನ ಪ್ರತಿಜ್ಞೆಯ ವಿಷಯವಾಗಿ ಉಪಹಾಸ ಮಾಡಿದರು.

ಚದುರೆಯು ಬಡತನದಲ್ಲಿ ಹುಟ್ಟಿ ಬಡತನದಲ್ಲಿ ಬೆಳೆದವಳು. ಅವಳು ರಾಜವೈಭವದಲ್ಲಿ ಬಿದ್ದ ಕೂಡಲೆ ತನ್ನ ಶೀಲವನ್ನು ಮರೆತಳು. ಅಲ್ಲಿಯ ಸಂಪತ್ತುಗಳು ಅವಳ ಕಣ್ಣುಗಳನ್ನು ಕುಕ್ಕಿಸಿದವು. ಅಲ್ಲಿಯ ವಿಲಾಸ ಭೋಗಗಳಿಂದ ಅವಳು ಉನ್ಮತ್ತಳಾದಳು ಸತೀಧರ್ಮವು ಮಣ್ಣು ಪಾಲಾಗಿ ಹೋದ ಮೇಲೆ ಅವಳು ಮುಂಚಿನ ಸ್ಥಿತಿಯನ್ನು ಪೂರಾ ಮರೆತಳು. ಸದ್ಯದ ವೈಭವದ ಕಾಲವೇ ತನ್ನ ಆಯುಷ್ಯದಲ್ಲೆಲ್ಲ ಇರುವದೆಂದು ಅವಳ ಭಾವನೆಯಾಯಿತು. ಚದುರೆಯು ಅಲೌಕಿಕ ಲಾವಣ್ಯಮಯಿಯು. ನವಯೌವನ ಲತಿಕೆಯು. ಸಂಭಾಜಿ ಮಹಾರಾಜನು ಒಳ್ಳೆಯ ಪ್ರೇಮದಿಂದ ತಂದು ಅಂತಃಪುರದಲ್ಲಿರಿಸಿದ ಪರಿಣಿತ-ಅಪರಿಣಿತ ವಧುಗಳಲ್ಲಿ ಚದುರೆಯು ಹೆಚ್ಚಾದ ರೂಪವತಿಯಾಗಿದ್ದಳು. ರೂಪಾಂಧನಾದ ಸಂಭಾಜಿರಾಜನನ್ನು ಚದುರೆಯು ಚತುರತನದಿಂದ ಕೆಲವು ದಿನಗಳಲ್ಲಿಯೇ ತನ್ನ ಸೂತ್ರದ ಗೊಂಬೆಯನ್ನಾಗ ಮಾಡಿಬಿಟ್ಟಳು. ರಾಜನು ಹೆಸರಿಗೆ ಮಾತ್ರ ರಾಜನಾಗಿದ್ದನು. ಎಲ್ಲ ಅಧಿಕಾರಸೂತ್ರಗಳೂ ಚದುರೆಯ ಕೈವಶವಾಗಿ ಹೋಗಿದ್ದವು. ನಾ-ನಾ ಅನ್ನುವ ರಾಜ್ಯಕರ್ತರು ಸಹ ರಾಜನನ್ನು ಬದಿಗಿರಿಸಿ, ಚದುರೆಯ ಅನುಗ್ರಹ ಪಡೆಯಲಿಕ್ಕೆ ಮುಂದುವರಿದಿದ್ದರು. ಒಳ್ಳೇ ಕಟ್ಟುನಿಟ್ಟಿನ ಸ್ವಭಾವದವಳಾದ ತಾರಾಬಾಯಿಯು ಸಹ ಚದುರೆಯ ಮುಂದೆ ತಲೆಬಾಗಿಸುತ್ತಿದ್ದಳು. ಅವಳು ಹಾಗೆ ತಲೆಬಾಗಿಸಲಿಕ್ಕೆ ಸೂಕ್ಷ್ಮ ಕಾರಣವೂ ಇದ್ದಿತು. ಅವಳು ಜಿಜಾಬಾಯಿಯಿಂದ ತ್ರಸ್ತಳಾಗಿದ್ದಳು. ಹೇಗಾದರೂ ಚದುರೆಯ ಅಧ್ಯಾತ್ಮ-ವರ್ಚಸ್ಸುಗಳು

ಬೆಳೆದು, ಸಿಂಹಿಣಿಯಂತಿದ್ದ ಜಿಜಾಬಾಯಿಯು ಮೂಲಿಗೆ ಬಿದ್ದರೆ ಸಾಕೆಂದು ಅವಳ ಮಾನಸವಿದ್ದಿತು. ಚದುರೆಯು ಈಗಾಗಲೆ ಅಭಿಷಿಕ್ತ ರಾಣಿಯನ್ನು ದಾಸಿಯರ ಮಾಲಿಕೆಯಲ್ಲಿ ಜೋಡಿಸಿದ್ದಳು. ಇಷ್ಟುದಿನ ಯಥೇಷ್ಟವಾಗಿ ಅಧಿಕಾರ-ಗೌರವಗಳನ್ನು ಹೊಂದಿದ ರಾಣಿಯು ಒಂದು ಮೂಲೆಯನ್ನು ಹಿಡಿದು ಕಣ್ಣೀರುದುರಿಸುತ್ತ ಕೂಡ್ರಬೇಕಾಯಿತು. ಉಚ್ಛೃಂಖಲೆಯಾದ ಚದುರೆಯ ಸಾಹಸವು ಇಷ್ಟಕ್ಕೇ ಮುಗಿಯಲಿಲ್ಲ. ತನ್ನ ವಿವಾಹಿತ ಪತಿಯು ಮುಂದೆ ಎಂದಾದರೂ ತನ್ನ ಮೇಲೆ ಗಂಡತನದ ಬಾಧ್ಯತೆಯನ್ನು ನಡೆಯಿಸ ಲಿಕ್ಕೆ ಬರಬಹುದೆಂದೂ, ಆಗ ಜನರು ತನಗೆ ಹೆಸರಿಡಬಹುದೆಂದೂ ಭಾವಿಸಿ, ರಾಜನಿಗೆ ಹೇಳಿ ತನ್ನ ವಿವಾಹಿತ ಪತಿಯನ್ನು ಕೊಲ್ಲಿಸಲಿಕ್ಕೆ ಕೊಲೆಗಡಕ ರನ್ನು ಕಳುಹಿಸಿದ್ದಳು. ಇಷ್ಟಲ್ಲದೆ ರಾಣಿಯಾದ ಜಿಜಾಬಾಯಿಯ ಸತ್ತಾ ನಾಶ ಮಾಡುವದಕ್ಕಾಗಿ ಅವಳ ಮೇಲೆ ದುರ್ವರ್ತನದ ದೋಷಾರೋಪಣೆ ಮಾಡತೊಡಗಿದ್ದಳು. ಕೊಲ್ಲಾಪುರದ ಪಟ್ಟಮಹಿಷಿಯು ಅಧಿಕಾರ ಹೊಂದ ಬೇಕೆಂಬ ಲಾಲಸೆಯು ಚದುರೆಯಲ್ಲಿ ಹುಟ್ಟಿತ್ತು; ಹಾಗು ತನ್ನ ಔರಸ ಸಂತ ತಿಗೆ ಭಾವೀ ಸಿಂಹಾಸನಾಧಿಕಾರವು ದೊರೆಯುವಂತೆ ಮಾಡಬೇಕೆಂದು ಅವಳ ಮಹತ್ವಾಕಾಂಕ್ಷೆಯಿದ್ದಿತು

ಸುಖದುಃಖಗಳು ದೈವಾಯತ್ತವೆಂದು ತಾನು ಹೇಳಿದಾಗ, ತ್ರ್ಯಂಬಕ ರಾಯನು ಮನುಷ್ಯರ ಕರ್ತವ್ಯಕರ್ಮಗಳಿಗನುಸಾರವಾಗಿ ಸುಖದುಃಖಗಳು ಲಭಿಸುವವೆಂಬ ತನ್ನ ಸಿದ್ಧಾಂತವನ್ನು ಹೇಳಿದ್ದು ಚದುರೆಗೆ ಈಗ ಮನವರಿಕೆ ಯಾಯಿತು. ತನ್ನ ಪ್ರಯತ್ನದಿಂದಲೇ ಇಂದಿನ ಸುಖವು ಲಭಿಸುವದೆಂದು ಅವಳ ತಿಳವಳಿಕೆಯಾಯಿತು. ಆಗ ಅವಳು ತನ್ನನ್ನು ಅಭ್ಯುದಯ ಪಥಕ್ಕೆ ಹಚ್ಚಿದ ತ್ರ್ಯಂಬಕಸುಂದರನನ್ನು ಮನಸ್ವೀಯಾಗಿ ಕೊಂಡಾಡಿದಳು. ಈ ಆನಂದದ ಸಂಧಿಯಲ್ಲಿ ಚದುರೆಯ ಆನಂದೋದಧಿಗೆ ಏರಿಕೆಯನ್ನುಂಟು ಮಾಡುವ ಯೋಗವೂ ಒದಗಿತು. ಅವಳು ಈಗ ಗರ್ಭಿಣಿಯಾಗಿದ್ದಳು ತನ್ನಿಂದ ಭಾವೀ ಛತ್ರಪತಿಯು ಉತ್ಪನ್ನನಾಗುವನೆಂದು ಅವಳು ಆನಂದಗಿರಿಯ ಅತ್ಯುಚ್ಚ ಶಿಖರದ ಮೇಲೇರಿ ಕುಳಿತಳು.

ಶಾಹೂಮಹಾರಾಜನ ವಿರುದ್ಧವಾಗಿ ನಡೆದ ಕಾರಸ್ಥಾನದ ಮಾತು-ಕಥೆಗಳನ್ನಾಡಲಿಕ್ಕೆ ಶೀಘ್ರವಾಗಿ ಬರಬೇಕೆಂದು ನಿಜಾಮನು ಕೊಲ್ಹಾಪುರಕ್ಕೆ ಸಂಭಾಜಿಮಹಾರಾಜರ ಕಡೆಗೆ ದೂತನನ್ನು ಕಳುಹಿಸಿದ್ದನು ಸಂಭಾಜಿಯು ಪ್ರವಾಸದ ಸಿದ್ಧತೆಯಲ್ಲಿ ತೊಡಗಿದ್ದನು. ಆಗ ಚದುರೆಯು ಅವನ ಬಳಿಗೆ ಹೋಗಿ:—"ಮಹಾರಾಜರೆ, ನೀವು ಮರಳಿ ಬರಬೇಕಾದರೆ ಬಹಳ ದಿನ

ಗಳು ಹಿಡಿಯಬಹುದು. ಅಷ್ಟು ದಿನಗಳವರೆಗೆ ನಿಮ್ಮಗ್ನಗಲಿ ನಾನು ಹೇಗೆ ಇರಲಿ? ನನ್ನನ್ನು ಬಿಟ್ಟುಹೋಗಬೇಕಾದರೆ ನಿಮ್ಮ ಜೀವವೂ ಹುರು ಹುರು ಆಗುತ್ತಿರಬಹುದು. ನನ್ನನ್ನೂ ಜೊತೆಗೆ ಕರೆದುಕೊಂಡು ಹೋಗುವ ಬಗ್ಗೆ ವಿನಂತಿ ಮಾಡಿಕೊಂಡಿದ್ದೆನು; ಆದರೆ ನನ್ನ ವಿನಂತಿಯನ್ನು ನೀವು ಪೂರಾ ದುರ್ಲಕ್ಷಿಸಿದಂತೆ ತೋರುತ್ತದೆ."

"ಚದುರೆ!" ಸಂಭಾಜಿಯು ಚದುರೆಯ ಕಪೋಲಗಳನ್ನು ಹಿಡಿದು:- "ನೀನು ನನಗೆ ಅಷ್ಟು ವಿನಂತಿಮಾಡಿಕೊಳ್ಳುವ ಕಾರಣವಿದ್ದಿಲ್ಲ. ನಾನು ನಿರುಪಾಯನಾಗಿ ನಿನ್ನನ್ನು ರಾಜಧಾನಿಯಲ್ಲಿ ಬಿಡಬೇಕಾದ ಸಂದರ್ಭವಿದೆ. ನೀನು ಗರ್ಭವತಿಯಿರುವೆ. ಪ್ರವಾಸದ ಶ್ರಮವು ನಿನಗೆ ತಗಲುವದು ಹಿತಾವಹವಲ್ಲ. ಈ ವಿಷಯದಲ್ಲಿ ನಾನು ನನ್ನ ಸರದಾರರಲ್ಲಿಯೂ ಮಂತ್ರಿಗಳಲ್ಲಿಯೂ ವಿಚಾರವಿನಿಮಯ ಮಾಡಿದೆನು; ಆದರೆ ಗರ್ಭಿಣಿಸ್ತ್ರೀಯರಿಗೆ ಪ್ರವಾಸದ ಶ್ರಮವಾಗಬಾರದೆಂದು ಅವರು ಅನ್ನುವರು. ಅದರಲ್ಲಿ ಎರಡು ದಿನಗಳಿಂದ ನಿನ್ನ ಪ್ರಕೃತಿಯೂ ಸ್ವಲ್ಪ ಅಸ್ವಸ್ಥವಿರುವದು; ಆದ್ದರಿಂದ ನೀನು ರಾಜಧಾನಿಯಲ್ಲಿಯೇ ಇರಬೇಕಾಗಿದೆ. ನಾನು ಬರುವವರೆಗೆ ರಾಜ್ಯವ್ಯವಸ್ಥೆಯನ್ನು ನೋಡಲಿಕ್ಕೆ ನಿನ್ನಂತಹ ರಾಜಕಾರಣಧುರಂಧರಳು ರಾಜಧಾನಿಯಲ್ಲಿ ಬೇಕೇಬೇಕು. ನಾನು ವೇಗನೆ ಮರಳಿ ಬರುವೆನು ಯೋಚಿಸಬೇಡ"

"ಮಹಾರಾಜರ!" ಚದುರೆಯು ಅಚ್ಚರಿಯಿಂದ.—"ನೀವು ಏನಾದರೂ ಹೇಳಿ ನನ್ನನ್ನು ಬಿಟ್ಟುಹೋಗಬೇಕೆನ್ನುವಿರಿ. ಮೇಣೆ-ಪಲ್ಲಕ್ಕಿಗಳಲ್ಲಿ ಪ್ರವಾಸ ಮಾಡಿದರೆ ನನಗೇನೂ ಪ್ರವಾಸದ ಶ್ರಮವಾಗುವದಿಲ್ಲ. ನನ್ನ ಪ್ರಕೃತಿಯು ಅಷ್ಟೇನೂ ಅಸ್ವಾಸ್ಥ್ಯ ಹೊಂದಿಲ್ಲ ಯಾಕೋ ಸ್ವಲ್ಪ ಪ್ಯಾಯುಕಾಯತೊಡಗಿದೆಯಿಷ್ಟೇ ನನ್ನನ್ನು ಇಲ್ಲಿಯೇ ಬಿಟ್ಟು ಹೋಗಲಿಕ್ಕೆ ನಿಮ್ಮ ಕಾಲುಗಳಾದರೂ ಹೇಗೆ ಏಳುವವೋ ನೋಡುವೆನು."

"ರಾಣಿ!" ಸಂಭಾಜಿಯು ಪ್ರೇಮಳ ವಾಣಿಯಿಂದ:—"ನಿನ್ನನ್ನು ಬಿಟ್ಟುಹೋಗಲಿಕ್ಕೆ ನನ್ನ ಮನಸ್ಸಾದರೂ ಒಪ್ಪುವದಿಲ್ಲ; ಆದರೆ ಏನು ಮಾಡಲಿ? ನಿನ್ನನ್ನು ರಾಜಧಾನಿಯಲ್ಲಿ ಬಿಟ್ಟುಹೋಗುವದೇ ಒಳಿತೆಂದು ಎಲ್ಲರೂ ಅನ್ನುತ್ತಾರೆ."

"ಆಗಲಾರದ ಜನರ ಮಾತು ತೆಗೆದುಕೊಂಡು ಮಾಡುವದೇನು? ನಾನು ನಿಮ್ಮ ಸಂಗಡ ಬರತಕ್ಕವಳೇ. ಬಿಟ್ಟು ಹೋದೇನೆಂದರೆ, ನಾನೇನೂ ಕೇಳುವವಳಲ್ಲ."

"ರಾಣಿ, ನಿನ್ನ ಇಚ್ಛೆಯಂತಾಗಲಿ. ಈಗಲಾದರೂ ಆಯಿತೆ?"

ಚದುರೆಯು ಸಂಭಾಜಿಯ ಆಶ್ವಾಸನೆಯಿಂದ ಹಿಗ್ಗಿದಳು. ಅವಳು ತನ್ನ ದಾಸಿಯರಿಗೆ ಪ್ರವಾಸದ ಸಿದ್ಧತೆಮಾಡುವದಕ್ಕಾಗಿ ಹೇಳಿದಳು.

ಅತ್ತ ದಾಸಿಯರು ಪ್ರವಾಸದ ಸಿದ್ಧತೆ ಮಾಡುತ್ತಿರುವಾಗ, ಇತ್ತ ಚದುರೆಯ ಮೈಯಲ್ಲಿ ಜ್ವರವು ಏರಹತ್ತಿತು. ರಾತ್ರಿಯಲ್ಲೆಲ್ಲ ಅವಳು ಸ್ಮೃತಿಗೆಟ್ಟು ಬಡಬಡಿಸತೊಡಗಿದಳು. ಪ್ರಾತಃಕಾಲಕ್ಕೆ ಪ್ರಯಾಣ ಮಾಡತಕ್ಕದ್ದೆಂದು ನಿರ್ಧರವಾಗಿತ್ತು; ಆದರೆ ಅಲ್ಲಿಯವರೆಗೆ ಚದುರೆಯ ಜ್ವರವು ಕಡಿಮೆಯಾಗಿದ್ದಿಲ್ಲ. ಮೈಮೇಲೆ ಅಷ್ಟು ಚನ್ನಾಗಿ ಸ್ಮೃತಿಯೂ ಇದ್ದಿಲ್ಲ. ಇಂತಹ ಸ್ಥಿತಿಯಲ್ಲಿ ಅವಳನ್ನು ಕರೆದುಕೊಂಡು ಹೋಗುವದು ಅನುಚಿತವೆಂದು ತಿಳಿದು, ಸಂಭಾಜಿ ಮಹಾರಾಜನು ತನ್ನ ಪರಿವಾರದೊಡನೆ ನಿಜಾಮನ ಭೆಟ್ಟಿಗಾಗಿ ಕೊಲ್ಹಾಪುರದಿಂದ ತೆರಳಿದನು.

ಸಂಭಾಜಿಯು ರಾಜಧಾನಿಯನ್ನು ಬಿಟ್ಟು ಹೋದದ್ದೂ, ಅದೇ ಕಾಲಕ್ಕೆ ಚದುರೆಯು ಬೇನೆಬಿದ್ದದ್ದೂ ದೈವಹತಳಾಗಿದ್ದ ಜಿಜಾಬಾಯಿಯ ಅಭ್ಯುದಯಕ್ಕೆ ಕಾರಣವಾದವು. ಅವಳು ರಾಜ್ಯದೊಳಗಿನ ಹಾಗು ರಾಜಧಾನಿಯೊಳಗಿನ ಕೆಲವು ರಾಜ್ಯಕರ್ತರನ್ನು ಸಾಮೋಪಾಯದಿಂದ ವಶಪಡಿಸಿಕೊಂಡು, ಅವರ ಸಹಾಯದಿಂದ ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತಕ್ಕೊಂಡಳು. ಧೂರ್ತಳಾದ ತಾರಾಬಾಯಿಯ ತಂತ್ರದಂತೆ ನಡೆದದ್ದು ಜಿಜಾಬಾಯಿಗೆ ಫಲದಾಯಕವಾಯಿತು. ಆಗ ಚದುರೆಗೆ ನವಮಾಸಗಳು ತುಂಬುತ್ತ ಬಂದಿದ್ದವು. ಅವಳ ಬೇನೆಯು ಇನ್ನೂ ಗುಣವಾಗಿದ್ದಿಲ್ಲ. ಆದರೂ ಜಿಜಾಬಾಯಿಯು ಅವಳಲ್ಲಿ ದಯೆದೋರದೆ, ಅವಳನು ಅರಮನೆಯಿಂದ ಓಲಗಕ್ಕೆ ಹಿಡಿತರಿಸಿದಳು ಅನಂತರದಲ್ಲಿ ಅವಳು ಕರ್ಕಶವಾಣಿಯಿಂದ:—"ಗಯ್ಯಾಳಿ ಚದುರೆ! ಜಾರಿಣಿಯಾದ ನೀನು ಕೊಲ್ಹಾಪುರದ ರಾಣಿಯಾಗಿ ನಿನ್ನ ಸಂತಾನಕ್ಕೆ ರಾಜಸಿಂಹಾಸನವು ದೊರಕಬೇಕೆಂಬ ಮಹತ್ವಾಕಾಂಕ್ಷೆ ತಾಳಿರುವೆಯಷ್ಟೆ? ಮಹಾರಾಜರ ಸಾಧುಸ್ವಭಾವದ ಲಾಭಹೊಂದಿ, ನೀನು ಎಷ್ಟು ಅನರ್ಥ ಪರಂಪರೆಗಳನ್ನು ನಡೆಯಿಸಿದೆಯೆಂಬದನ್ನು ಬಾಯಿಂದ ಆಡಿದರೆ ತೀರುವಂತಿಲ್ಲ. ನಿನಗೆ ದೇಹಾಂತ ಪ್ರಾಯಶ್ಚಿತ್ತವನ್ನೇ ವಿಧಿಸುತ್ತಿದ್ದೆನು; ಆದರೆ ನೀನು ಗರ್ಭಿಣಿಯಿರುವುದರಿಂದ ನಿನ್ನ ಮೇಲೆ ದಯೆದೋರಿರುವೆನು. ಅದಕ್ಕಾಗಿಯೆ ಅಲ್ಪ ದಂಡನೆಯುನ್ನು ವಿಧಿಸಿದ್ದೇನೆ" ಎಂದು ನುಡಿದು, ಪರಿಚಾರಕರನ್ನು ಕುರಿತು:—"ಈ ಜಾರಿಣಿಯ ಕೂದಲುಗಳನ್ನು ಕತ್ತರಿಸಿ, ಮೋರೆಗೆ ಕಪ್ಪು ಬಳೆದು, ಕತ್ತೆಯ ಮೇಲೆ ಕುಳ್ಳಿರಿಸಿ, ರಾಜಧಾನಿಯ ತುಂಬ ಮೆರವಣಿಗೆ ಮಾಡಿ ಗಡೀಪಾರು ಮಾಡಿರಿ. ಯಾರಾದರೂ ಈ ನರಾಧಮ

ಳಿಗೆ ಆಶ್ರಯವಿತ್ತರೆ, ಅವರು ರಾಜದ್ರೋಹಿಗಳೆಂದು ತಿಳಿಯಲ್ಪಟ್ಟು, ಅಘೋರ ರಾಜದಂಡನೆಗೆ ಈಡಾಗಬೇಕಾಗುವದೆಂದು ರಾಜ್ಯದ ತುಂಬ ಡಂಗುರ ಸಾರ ತಕ್ಕದ್ದು, ಈ ನನ್ನ ಆಜ್ಞೆಯಲ್ಲಿ ಅತ್ಯಲ್ಪ ವ್ಯತ್ಯಸವಾದರೂ ನಾನು ಎಂದೂ ಸಹಿಸಲಾರೆನು.''

ರಾಣಿಯ ಆಜ್ಞೆಯು ಕಾರ್ಯತಃ ಆಚರಿಸಲ್ಪಟ್ಟಿತು. ರಾಣಿಯೂ ರಾಜಮಾತೆಯೂ ಆಗಬೇಕೆಂದಿದ್ದ ಚದುರೆಯು ಅತ್ಯಂತ ಅಪಮಾನಿತ ಳಾದಳು. ಕತ್ತೆಯ ಮೇಲಿನ ಮೆರವಣಿಗೆಯು ವಿಧ್ಯುಕ್ತವಾಗಿ ರಾಜಧಾನಿ ಯಲ್ಲಿ ನೆರವೇರಿತು. ಆನಂದಗಿರಿಯ ಸರ್ವೋಚ್ಚವಾದ ಶಿಖರದಲ್ಲಿದ್ದ ಅವಳು ದುಃಖದ ಮಹಾ ಗರ್ತದಲ್ಲಿ ಬಿದ್ದು ಚಡಪಡಿಸಹತ್ತಿದಳು. ಇಷ್ಟು ದಿನಗಳ ವರೆಗೆ ಅನುಭವಿಸಿದ ಸುಖವು ಅವಳ ಪಾಲಿಗೆ 'ತಿರುಕನ ಕನಸಿ'ನಂತಾ ಯಿತು!

ಮೆರವಣಿಗೆಯ ಕೆಲಸವು ಪೂರೈಸಿದ ಮೇಲೆ ರಾಜಪರಿಚಾರಕರು ಅವ ಳನ್ನು ಕೊಲ್ಲಾಪುರದ ಗಡಿಯಿಂದ ಹೊರಗೆ ಹಾಕಿದರು. ಕೊಲ್ಹಾಪುರದ ರಾಜ್ಯ ಸೂತ್ರಗಳನ್ನು ಕೈಯಲ್ಲಿ ತೆಗೆದುಕೊಂಡಿದ್ದ ಆ ಚದುರೆಯು, ಈಗ ಒಬ್ಬ ಭಿಕ್ಷುಕಿಗಿಂತಲೂ ಕೀಳುತರದ ಅವಸ್ಥೆ ಹೊಂದಿ, ದಿಕ್ಕುಗಾಣದೆ ಅಂಡಲೆಯ ಬೇಕಾಯಿತು. ದೈವಲೀಲೆಯು ವಿಚಿತ್ರವೇ ಸರಿ!

---

## ದಾಸಿಯಲ್ಲ; ಸವತಿ!

ಚದುರೆಯ ಮಾನಭಂಗಮಾಡಿ ಅವಳನ್ನು ಗಡೀಪಾರು ಮಾಡಿದಷ್ಟಕ್ಕೆ ಜಿಜಾಬಾಯಿಯ ಕೋಪಾನಲವು ಶಾಂತವಾಗಲಿಲ್ಲ. ಅವಳನ್ನು ಮನೆಯಲ್ಲಿ ತಂದು ತನಗೆ ಗಂಡಾಂತರವನ್ನುಂಟುಮಾಡಿದ್ದ ತ್ರ್ಯಂಬಕಸುಂದರನ ಹಾಗು ಧನಾಶೆಯಿಂದ ತನ್ನ ಹೊಟ್ಟೆಯ ಮಗಳ ಸತೀಧರ್ಮವನ್ನು ಭ್ರಷ್ಟಗೊಳಿಸಿದ ಬಿಂಬಾಜಿ ಥೋರಾತನ ಪಾರುಪತ್ಯಗೊಳಿಸಿದ ಹೊರತು ದೀರ್ಘದ್ವೇಷಿಯಾದ ಆ ಜಿಜಾಬಾಯಿಯ ಸಂತಪ್ತ ಹೃದಯವು ಶಾಂತವಾಗುವಂತಿದ್ದಿಲ್ಲ. ಅವಳು ಆಗಿಂದಾಗಲೆ ಸೈನಿಕರನ್ನು ಕಳುಹಿಸಿ, ತ್ರ್ಯಂಬಕರಾಯನನ್ನು ಬಹೇಬೋರ ಗಾಂವದಿಂದ ಹೊರಗೆ ತಳ್ಳಿಸಿದಳು. ಅವನ ಆ ಇನಾಮುಗ್ರಾಮವು ಸರ ಕಾರಕ್ಕೆ ಸೇರಿತು. ಚದುರೆಯನ್ನು ಅಧರ್ಮದಿಂದ ಮಾರಿದ ಬಿಂಬಾಜಿ ಯನ್ನೂ, ಅವನ ಹೆಂಡತಿಯಾದ ಮೈನಾಬಾಯಿಯನ್ನೂ ಸೆರೆಹಿಡಿದು ತರ

ಬೇಕೆಂದು ರಾಣಿಯ ಆಜ್ಞೆಯಾಗಿತ್ತು; ಆದರೆ ರಾಣಿಯ ಸೈನಿಕರು ಬಹೇ ಬೋರಗಾಂವಕ್ಕೆ ಬರುವದಕ್ಕಿಂತ ಮುಂಚಿತವಾಗಿಯೇ ಈ ಸಮಾಚಾರವು ಬಿಂಬಾಜಿಯ ಕಿವಿಗೆ ಬಿದ್ದುದರಿಂದ, ಅವನು ತನ್ನ ಸಂಗಡ ತೆಗೆದುಕೊಂಡು ಹೋಗಲಿಕ್ಕೆ ಸಾಧ್ಯವಾಗಬಹುವಾಗಿದ್ದಷ್ಟು ಸ್ವತ್ತನ್ನು ಕಟ್ಟಿಕೊಂಡು 'ಯಃಪಲಾಯನ ಸ ಜೀವತಿ' ಮಂತ್ರದ ಪಠಣ ಮಾಡಿದನು. ಬಿಂಬಾಜಿಯು ತನ್ನ ಮಗಳನ್ನು ಧರ್ಮಭ್ರಷ್ಟಳನ್ನು ಮಾಡಿದ್ದಕ್ಕಾಗಿ ಬಹೇಬೋರಗಾಂವದ ಜನರೆಲ್ಲರೂ ಅಂತರಂಗದಲ್ಲಿ ಅವನನ್ನು ತಿರಸ್ಕರಿಸುತ್ತಿದ್ದರು; ಆದರೆ ಛತ್ರ ಪತಿಯ ಮಾವನಾಗಿರುವನೆಂದು ಬಹಿರಂಗದಲ್ಲಿ ಮಾತ್ರ ಅವನ ಮಾನ-ಮನ್ನಣೆಗಳಿಗೆ ಕೊರತೆಯಾಗುತ್ತಿದ್ದಿಲ್ಲ. ಕೊಲ್ಹಾಪುರದ ಸೈನಿಕರು ಬಿಂಬಾಜಿಯನ್ನು ಸೆರೆಹಿಡಿದೊಯ್ಯುವರೆಂಬ ಸಂಗತಿಯು ಊರೊಳಗಿನ ಬಹು ಜನರಿಗೆ ಗೊತ್ತಾಗಿದ್ದರೂ, ಅವರಾರೂ ಆ ಸುದ್ದಿಯನ್ನು ಬಿಂಬಾಜಿಗೆ ತಿಳಿಸಿದ್ದಿಲ್ಲ. ಕರ್ಮಧರ್ಮಸಂಯೋಗದಿಂದ ನೆರೆಹಳ್ಳಿಯ ಒಬ್ಬ ಮಿತ್ರನಿಂದ ಈ ಸಂಗತಿಯು ಅವನಿಗೆ ಗೊತ್ತಾದ್ದರಿಂದ ಅವನು ಪಾರಾಗಿ ಹೋಗಲಿಕ್ಕೆ ಅನುವು ದೊರೆಯಿತು.

ಬಿಂಬಾಜಿಯು ತನ್ನ ಪತ್ನಿಯಾದ ಮೈನಾಬಾಯಿಯನ್ನೂ ಮೊಮ್ಮಗನಾದ ಸಟವಾಜಿಯನ್ನೂ ಕರೆದುಕೊಂಡು ಸಾತಾರೆಯ ಕಡೆಗೆ ಓಡಿ ಹೋದ ಸಂಗತಿಯು ಕೊಲ್ಹಾಪುರದಿಂದ ಬಂದ ಸೈನಿಕರ ನಾಯಕನಿಗೆ ತಿಳಿದಕೂಡಲೆ ಅವನಿಗೆ ಪುತ್ರಘಾತ ದುಃಖದಷ್ಟು ವ್ಯಥೆಯಾಯಿತು. ಬಿಂಬಾಜಿಯನ್ನು ಸೆರೆಹಿಡಿದೊಯ್ದು ರಾಣಿಯಿಂದ ಹೇರಳವಾದ ಸಂಭಾವನೆ ಪಡೆಯಬೇಕೆಂಬ ಅವನ ಮನೋರಾಜ್ಯವೆಲ್ಲವೂ ಮಣ್ಣುಪಾಲಾಯಿತು! ಅವನು ಬಿಂಬಾಜಿಯ ಮನೆಯನ್ನು ಸುಲಿದು ಲಾಭಪಡೆಯಬೇಕೆಂದು ಅವನ ವಾಡೆಗೆ ಹೋದನು. ವಾಡೆಯು ತೆರವಾಗಿತ್ತು. ಅಲ್ಲಿಯ ಧನಕನಕಗಳು ಬಿಂಬಾಜಿಯೊಡನೆ ಸಾತಾರೆಯ ಮಾರ್ಗವನ್ನು ಹಿಡಿದಿದ್ದವು. ಅವನಿಗೆ ಅಲ್ಲಿ ದನ-ಕರಗಳು, ಧಾನ್ಯಗಳು ಪಾತ್ರೆ-ಪಡಗಗಳು ಮೊದಲಾದವುಗಳ ಹೊರತು ಬೆಲೆಯುಳ್ಳ ಯಾವ ಒಡವೆಗಳೂ ದೊರೆಯಲಿಲ್ಲ. ನಾಯಕನು ಸಿಟ್ಟಿನಿಂದ ಹುಚ್ಚನಾದನು. ಅವನು ಬಿಂಬಾಜಿಯ ವಾಡೆಯನ್ನು ಕೆಡಹಿಸಿ ಕತ್ತೆಗಳ ರಂಟೆ ಹೊಡೆಯಿಸಿ, ತನ್ನ ಸಂತಪ್ತ ಹೃದಯವನ್ನು ಸಾಂತ್ವನಗೊಳಿಸಿಕೊಂಡನು. ಅನಂತರದಲ್ಲಿ ನಾಯಕನ ಮನಸ್ಸಿನಲ್ಲಿ ಇನ್ನೊಂದು ಯೋಚನೆಯು ಹುಟ್ಟಿತು. ಪುರಾತನದಿಂದ ಇನಾಮುದಾರರಾಗಿದ್ದ ಧೋರಾತರ ವಾಡೆಯಲ್ಲಿ ನಿಕ್ಷೇಪವಿರಬಹುದೆಂದು ಅವನು ತರ್ಕಿಸಿದನು. ಕೂಡಲೆ ನೆಲವನ್ನು ಅಗಿಯುವ ಕೆಲ

ಸವು ಪ್ರಾರಂಭವಾಯಿತು. ಅಲ್ಲಿ ಒಂದು ಸಣ್ಣ ನೆಲಮನೆಯು ಹತ್ತಿತು. ಅದನ್ನು ಅಗಿಯುವಷ್ಟರಲ್ಲಿ ಅಲ್ಲಿಯೇ ಇದ್ದ ಬಿಲದಿಂದ ಒಂದು ನಾಗವು ಹೊರ ಬಿದ್ದು ಬಂದು ಒಬ್ಬ ಸೈನಿಕನನ್ನು ಕಚ್ಚಿತು. ಕೂಡಲೆ ಎಲ್ಲರೂ ಆ ನೆಲವನ್ನು ಅಗಿಯಲಿಕ್ಕೆ ಅಂಜಿದರು. ಸರ್ಪದಂಶವಾದ ಮನುಷ್ಯನು ಅರಗಳಿಗೆಯೊಳಗೆ ಯಮಸದನವನ್ನು ಸೇರಿದನು. ಎಲ್ಲ ಕಡೆಯಿಂದಲೂ ನಿರಾಶೆಯಾದ ಕೂಡಲೆ ಸೈನಿಕರ ನಾಯಕನಿಗೆ ಧನಸಂಗ್ರಹ ಮಾಡುವ ಮತ್ತೊಂದು ಯೋಚನೆಯು ತಲೆದೋರಿತು. ಬಿಂಬಾಜಿಯ ದನ-ಕರ, ಕಾಳು-ಕಡಿ, ಪಾತ್ರೆ ಮೊದಲಾದವುಗಳನ್ನು ವಿಕ್ರಯಿಸಿ ಬಂದಷ್ಟು ತೆಗೆದುಕೊಂಡು ಹೋಗ ಬೇಕೆಂದು ಅವನು ಮನಸ್ಸು ಮಾಡಿದನು; ಆದರೆ ಅವನು ಈ ವಿಷಯ ದಲ್ಲಿಯೂ ಭಗ್ನಮನೋರಥನಾದನು. ಯಾಕಂದರೆ, ಸರಕಾರದ ಅಂಜಿಕೆ ಯಿಂದ ಯಾರೂ ಬಿಂಬಾಜಿಯ ಒಡವೆಗಳನ್ನು ಕೊಳ್ಳಲಿಕ್ಕೆ ಸಿದ್ಧರಾಗಲಿಲ್ಲ. ಎಲ್ಲ ಒಡವೆಗಳೂ ಅಲ್ಲಿಯೇ ಬಿದ್ದು ನಷ್ಟ ಹೊಂದಿದವು.

ಚದುರೆಯು ಕೊಲ್ಹಾಪುರದಿಂದ ಹೊರಟು, ತನ್ನ ತಂದೆಯ ಆಶ್ರಯ ವನ್ನು ಹೊಂದಬೇಕೆಂಬ ಹೆಬ್ಬಯಕೆಯಿಂದ ಬಹೇಬೋರಗಾಂವಕ್ಕೆ ಬಂದಳು. ಅಲ್ಲಿ ತನ್ನ ತಂದೆಯ ಮನೆಯ ದುರವಸ್ಥೆಯನ್ನು ನೋಡಿ ಬಹು ಪರಿಯಾಗಿ ಪ್ರಲಾಪಿಸಿದಳು. ಇನ್ನು ತನಗೆ ಯಾರ ಆಶ್ರಯ ದೊರೆತೀತೆಂದು ಅವಳು ವಿಚಾರಮಾಡಹತ್ತಿದಳು. ಮೊದಲು ಅವಳು ತನ್ನನ್ನು ರಾಜ್ಞೀಪದವಿಗೇರಿ ಸಿದ್ದ ತ್ರ್ಯಂಬಕರಾಯನನ್ನು ಶೋಧಿಸಿದಳು. ಅವನು ಜಿಜಾಬಾಯಿಯ ಕೋಪಾನಲಕ್ಕೀಡಾಗಿ ಎತ್ತೋ ಹೋಗಿರುವನೆಂದು ತಿಳಿಯಿತು. ಅವಳಿಗೆ ಸದ್ಯದ ಪರಿಸ್ಥಿತಿಯಲ್ಲಿ ಒಂದು ಆಶ್ರಯಸ್ಥಾನವು ಬೇಕಾಗಿತ್ತು; ಯಾಕಂದರೆ, ಈಗ ಅವಳಿಗೆ ಪ್ರಸವಕಾಲವು ಸಮೀಪಿಸಿತ್ತು. ಅನೇಕ ವಿಧದ ಸಂಕಟಗಳಿ ಗೀಡಾಗಿ ಭಿಕ್ಷುಕಿಯಂತಾದ ಚದುರೆಯನ್ನು ಮೊದಲು ಯಾರೂ ಗುರುತಿಸಿ ದ್ದಿಲ್ಲ. ಅವಳು ತಾನಾಗಿ ತನ್ನ ಪರಿಚಯವನ್ನು ಜನರಿಗೆ ಮಾಡಿಕೊಟ್ಟು ಆಶ್ರಯವನ್ನು ಬಯಸಿದಳು. ಅವಳಿಗೆ ಆಶ್ರಯವಿತ್ತರೆ ರಾಣಿಯ ಕ್ರೋಧಾ ಗ್ನಿಗೆ ಬಲಿಯಾಗಬಹುದೆಂಬ ಭಯದಿಂದ ಯಾರೂ ಆಶ್ರಯ ಕೊಡ ಲಿಲ್ಲ. ಕಡೆಗೆ ಅವಳು ರಾಜಮಂದಿರದಿಂದ ಕದ್ದು ತಂದ ಅಲಂಕಾರಗಳಲ್ಲಿ ಒಂದನ್ನು ಒಬ್ಬಳಿಗೆ ಕೊಟ್ಟು, ಕೆಲವು ದಿನಗಳ ವರೆಗೆ ಇರಲಿಕ್ಕೆ ಅವಳ ಮನೆ ಯಲ್ಲಿ ಸ್ಥಳ ಪಡೆದಳು ಕೆಲವು ದಿವಸಗಳ ಮೇಲೆ ಚದುರೆಯು ಪುತ್ರಪ್ರಸ ವಿನಿಯಾದಳು. ಪ್ರಸೂತಳಾಗಿ ಹನ್ನೆರಡು ದಿನ ಮುಗಿದ ಕೂಡಲೆ ಅವಳು ತನಗೆ ಆಶ್ರಯಕೊಟ್ಟವಳಿಗೆ ಮತ್ತೊಂದು ಅಲಂಕಾರವನ್ನು ಕೊಟ್ಟು, ಮಗು

ವಿನ ರಕ್ಷಣೆ ಮಾಡಬೇಕೆಂದು ಹೇಳಿ ಬಹೇಬೋರಗಾಂವವನ್ನು ಬಿಟ್ಟು ಕರ್ನಾಟಕದ ಕಡೆಗೆ ಸಾಗಿದಳು.

ಕರ್ನಾಟಕದಲ್ಲಿ ಚದುರೆಯ ಒಬ್ಬ ಅಬಚಿಯಿದ್ದಳು. ಅವಳು ಪ್ರತಿನಿಧಿಯ ಮನೆಯ ಒಕ್ಕಲಗಿತ್ತಿಯಾಗಿದ್ದಳು. ಅವಳು ದಿನಹೋದವಳಿದ್ದು, ಹೊಟ್ಟೆಯಪಾಡಿಗಾಗಿ ಹೇಗಾದರೂ ದುಡಿಯಬೇಕಾಗಿತ್ತು. ಚದುರೆಯು ತನ್ನ ಅಬಚಿಯ ಮನೆಗೆ ಹೋದಷ್ಟೆಂದರೆ, ಏಕಾದಶಿಯ ಮನೆಗೆ ಶಿವರಾತ್ರಿಯು ಬಂದಂತಾಗಿತ್ತು. ಹೊಟ್ಟೆಯ ಪುಟ್ಟಿಗೆ ದುಡಿಯುತ್ತಿದ್ದ ಅಬಚಿಯ ಮನೆಯಲ್ಲಿ ಇವಳು ಕುಳಿತು ಉಣ್ಣಲಿಕ್ಕೆ ಉಪಾಯವಿಲ್ಲ. ಎಲ್ಲಿಯಾದರೂ ಹೋಗಿ ಕೂಲೀಹೊರಕಿಸದಿದ್ದರೆ ಗತ್ಯಂತರವಿಲ್ಲದಾಗಿತ್ತು. ತ ಅಬಚಿಯ ಮಧ್ಯಸ್ಥಿಕೆಯಿಂದ ಅವಳು ಪ್ರತಿನಿಧಿಯ ಮನೆಯಲ್ಲಿ ಕೆಲಸ ದೊರಕಿಸಿದಳು. ಇಷ್ಟು ಅವಧಿಯಲ್ಲಿ ಕೇಡಕಲಾದವ ಅಭಾವದಿಂದಾಗಲಿ ಅವಳ ಸೌಂದರ್ಯದ ನ್ಯೂನತೆಯಾದರೂ ಈಗ ಬಹುಮಟ್ಟಿಗೆ ಕಡಿಮೆಯಾಗಿದ್ದಿತು. ಪ್ರತಿನಿಧಿಯೂ ಅವನ ಪತ್ನಿಯೂ ಚದುರೆಯನ್ನು ನೋಡಿದೊಡನೆಯೆ ಅವಳನ್ನು ದಾಸಿಯಾಗಿ ಮನೆಯಲ್ಲಿರಿಸಿಕೊಳ್ಳಲಿಕ್ಕೆ ಅತ್ಯಾನಂದದಿಂದೊಪ್ಪಿದರು.

ಚದುರೆಯು ರೂಪವತಿಯೂ ಚತುರೆಯೂ ಇದ್ದುದರಿಂದ ಸ್ವಲ್ಪ ದಿನಗಳಲ್ಲಿಯೇ ತನ್ನ ಪ್ರಭಾವವನ್ನು ಪ್ರತಿನಿಧಿಯ ಮೇಲೆ ಕೆಡಹಿದಳು. ಸದ್ಯದ ಸ್ಥಿತಿಯಲ್ಲಿ ಅವಳು ಧರ್ಮಾಧರ್ಮ, ನೀತಿ-ಅನೀತಿ ಮೊದಲಾದ ಬಂಧನಗಳನ್ನು ಮೀರಿದ್ದಳು. ಯಾವ ದಿನಸ ಛತ್ರಪತಿಯ ಅಂತಃಪುರವನ್ನು ಸೇರಿದಳೋ, ಅಂದೇ ಅವಳು ಈ ಬಂಧನಗಳನ್ನು ದಾಟಿದ್ದಳು. ಆದ್ದರಿಂದ ಯಾವನೊಬ್ಬನನ್ನು ತನ್ನ ಪ್ರೇಮದ ಜಾಳಿಗೆಯಲ್ಲ ತೊಡಗಿಸಿಕೊಳ್ಳುವದೆಂದರೆ, ಅವಳಿಗ ಕೊಂಚವೂ ಹೇಯವೆನಿಸುತ್ತಿರಲಿಲ್ಲ. ಒಮ್ಮೆ ಪತಿತಳಾದ ಮೇಲೆ ಪಾಪದ ಭಯವಿಲ್ಲೆಂದು ಅವಳ ತಿಳವಳಿಕೆಯಾಗಿ ಹೋಗಿತ್ತು

ಕರ್ನಾಟಕದಲ್ಲಿ ಸಾತಾರೆಯ ಛತ್ರಪತಿಯ ಪ್ರತಿನಿಧಿಯಾದ ಶ್ರೀಪತಿರಾಯನಿರುತ್ತಿದ್ದನು. ಚದುರೆಯು ಒಕ್ಕಲಗಿತ್ತಿತನ ಮಾಡತೊಡಗಿದ್ದುದು ಈ ಪ್ರತಿನಿಧಿಯ ಮನೆಯಲ್ಲಿಯೇ. ಅವಳು ದಾಸಿಯಾದ ಸ್ವಲ್ಪ ದಿನಗಳಲ್ಲಿಯೇ ಪ್ರತಿನಿಧಿಯ ಮೇಲೆ ತನ್ನ ಓರನೋಟಗಳನ್ನು ಬೀರಿದಳು. ಪ್ರತಿನಿಧಿಯಾದರೂ ಇಂತಹ ಲಾವಣ್ಯಲತಿಕೆಯನ್ನು ಉಪೇಕ್ಷಿಸುವಂತಹ ಅರಸಿಕನಿದ್ದಿಲ್ಲ. ಅವನು ಚದುರೆಯನ್ನು ತನ್ನ ಹಿಡಿತದಲ್ಲಿ ತೆಗೆದುಕೊಳ್ಳಲಿಕ್ಕೆ ಯೋಗ್ಯಕಾಲವೂ ಪ್ರಾಪ್ತವಾಯಿತು. ಅವನ ಪತ್ನಿಯಾದ ರಾಧಾಬಾಯಿಯು

ಗರ್ಭಿಣಿಯಿದ್ದು, ಸ್ವಲ್ಪ ದಿನಗಳಲ್ಲಿಯೇ ಪ್ರಸೂತಳಾದಳು. ಬಾಣಂತಿತನವು ಮುಗಿಯುವಷ್ಟರಲ್ಲಿ ಆವಳ ಅಪತ್ಯವು ಮೃತ್ಯುಮುಖದಲ್ಲಿ ಬಿದ್ದಿತು ಈ ಅಪತ್ಯಮರಣದ ದುಃಖವಿಸ್ಮೃತಿಗಾಗಿ ರಾಧಾಬಾಯಿಯು ಎರಡು-ಮೂರು ತಿಂಗಳಮಟ್ಟಿಗೆ ತನ್ನ ತವರುಮನೆಗೆ ಹೋದಳು ಆಗ ಮಾತ್ರ ಶ್ರೀಪತಿ ರಾಯನನ್ನು ತನ್ನ ಮೋಹಜಾಲದಲ್ಲಿ ಪೂರಾ ತೊಡಗಿಸಲಿಕ್ಕೆ ಚದುರೆಗೆ ಸಂಧಿದೊರಕಿತು ಅವಳು ವಿಜಯಿಯಾದಳು. ಶ್ರೀಪತಿರಾಯನು ಚದುರೆಯ ಸೂತ್ರದ ಗೊಂಬೆಯಾದನು ವಾಡೆಯಲ್ಲಿ ಎಲ್ಲ ದಾಸ-ದಾಸಿಯರ ಮೇಲೂ ಚದುರೆಯ ವರ್ಚಸ್ಸು ಕುಳಿತಿತು ದಾಸ್ಯವೃತ್ತಿಯ ಬಂಧನಗಳು ಅವಳನ್ನು ಬಹುಮಟ್ಟಿಗೆ ತ್ಯಜಿಸಿದವು ನೋಡುವವರಿಗೆ ಅವಳೊಬ್ಬ ಚಿಕ್ಕ ಯಜಮಾನತಿಯೇ ಎಂಬಂತೆ ಕಾಣತೊಡಗಿದ್ದಳು ಶ್ರೀಪತಿರಾಯನು ಚದುರೆಯ ಪ್ರೇಮಸಾಗರದಲ್ಲಿ ಮುಳುಗಿ ಗುಟುಕು ನೀರು ಕುಡಿಯಹತ್ತಿದನು.

ರಾಧಾಬಾಯಿಯು ತವರೂರಿಂದ ಕರ್ನಾಡಕ್ಕೆ ಬಂದಳು ಆಗ ಗೃಹಸ್ಥಿತಿಯ ಭೂಮಿಕೆಯೇ ಬೇರೆಯಾಗಿದ್ದಿತು. ಚದುರೆಯ ಅಟ್ಟಹಾಸವು ವಾಡೆಯಲ್ಲಿ ಬಹಳವಾಗಿತ್ತು. ತಾನು ಗೃಹಾಂತರ ಮಾಡಿದಾಗ ಚದುರೆಯು ಮನೆಯ ಒಡತಿಯೇ ಆಗಿ ಹೋದಂತೆ ಭಾಸವಾಗಹತ್ತಿತು ಚತುರಳಾದ ಚದುರೆಯು ತನ್ನ ಪತಿಯನ್ನು ಮೋಹಪಾಶದಿಂದ ಬಿಗಿದಿರುವಳೆಂಬ ವಿಷಯದಲ್ಲಿ ಅವಳಿಗೆ ಯಾವ ಸಂದೇಹವೂ ಉಳಿಯಲಿಲ್ಲ ಕೆಲವು ಜನ ವಿಶ್ವಾಸದ ದಾಸಿಯರ ಮುಖದಿಂದಲೂ ಅವಳಿಗೆ ನಿಜಸ್ಥಿತಿಯು ತಿಳಿದು ಬಿಟ್ಟಿತು ಕೂಡಲೆ ಅವಳ ಮನಸ್ಸು ಗೊಂದಲದಲ್ಲಿ ಬಿದ್ದಿತು ಸ್ವೈರಿಣಿಯಾದ ಚದುರೆಯನ್ನು ಹೊರಗೆ ಹಾಕಿಬಿಡಬೇಕೆಂಬ ವಿಚಾರವು ಕೆಲವು ವೇಳೆಯ ಮಟ್ಟಿಗೆ ಅವಳಲ್ಲಿ ಹುಟ್ಟಿತ್ತು; ಆದರೆ ಅವಳು ಪ್ರೇಮಳ ಸ್ವಭಾವದವಳೂ, ಪತಿನಿಷ್ಠಳೂ ಆಗಿದ್ದು, ಲೌಕಿಕಕ್ಕೆ ಭಯಪಡುವಂಥವಳೂ ಆಗಿದ್ದುದರಿಂದ ಸಂತಾಪವನ್ನು ತಡೆದಳು; ಆದರೆ ಚದುರೆಗೆ ನಾಲ್ಕು ಬುದ್ಧಿಯ ಮಾತು ಹೇಳದಿರುವದು ಅವಳಿಂದ ಆಗಲಿಲ್ಲ. ಅವಳು ಚದುರೆಯನ್ನು ತನ್ನ ಏಕಾಂತ ಗೃಹದಲ್ಲಿ ಕರೆಯಿಸಿ:—"ಚದುರೆ! ನೀನು ನಿನ್ನ ಚಾತುರ್ಯವನ್ನು ನನ್ನ ಮನೆಯಲ್ಲಿ ತೋರಿಸತೊಡಗಿರುವೆ. ನೀನು ಎಷ್ಟು ಸಾಹಸಿಯೂ ಪಾತಾಳಯಂತ್ರಿಯೂ ಇರುವೆಯೆಂಬದನ್ನು ನಾನು ಬಲ್ಲೆನು ಕರ್ತೃತ್ವಶಾಲಿನಿಯೂ, ತಂತ್ರಗಾರಳೂ, ಅಧಿಕಾರಸಂಪನ್ನೆಯೂ ಆದ ಜಿಜಾಬಾಯಿಯನ್ನು ಮೊಳಕಾಲೂರಿಸಿದ ನಿನಗೆ ನನ್ನಂಥವಳ ಪರಿವೆಯೇನು? ನೀನು ಇಲ್ಲಿಗೆ ಬಂದಾಗ ಯಾವ ಅವಸ್ಥೆಯನ್ನು ಹೊಂದಿದ್ದೆ; ಎಂಥ ವೇಳೆಯಲ್ಲಿ ನಾನು ನಿನಗೆ

ಆಶ್ರಯವಿತ್ತಿರುವೆನು? ಮೊದಲಾದ ವಿಷಯಗಳನ್ನು ಲಕ್ಷ್ಯದಲ್ಲಿರಿಸಿಕೊಂಡು ವರ್ತಿಸು."

ರಾಧಾಬಾಯಿಯ ಮಾತುಗಳು ಚದುರೆಯ ಮರ್ಮಸ್ಥಳಕ್ಕೆ ತಗಲಿದವು ನಿಜವಾಗಿ ವಿಚಾರಿಸಿದರೆ ರಾಧಾಬಾಯಿಯ ಘನವಂತಿಕೆಯಿಂದಲೇ ಚದುರೆಗೆ ಕೆಲಸವು ದೊರೆತಿತ್ತು. ಅವಳ ಎಲ್ಲ ಕರ್ಮಕಥೆಯು ರಾಧಾಬಾಯಿಗೆ ಗೊತ್ತಿದ್ದರೂ ಪ್ರಾಪ್ತಪರಿಸ್ಥಿತಿಯನ್ನು ನೋಡಿ ಮರುಗಿ ಅವಳಿಗೆ ಆಶ್ರಯಕೊಟ್ಟಿದ್ದಳು ಇವೆಲ್ಲ ಸಂಗತಿಗಳನ್ನು ಮನಸ್ಸಿನ ಮೇಲೆ ತಂದರೆ ಚದುರೆಯ ವರ್ತನವು ನಿಂದ್ಯವಾದದ್ದೆಂದು ಯಾರಿಗಾದರೂ ಕಂಡು ಬರುವಂತಿತ್ತು. ಅವಳು ಮೊದಲು ಸುಶೀಲಳಾಗಿದ್ದರೂ, ಒಮ್ಮೆ ಜಾರಿ ಪಾಪಪಂಕದಲ್ಲಿ ಬಿದ್ದುಬಿಟ್ಟಿದ್ದಳು ಈಗ ಅವಳಿಗೆ ಪಾಪ-ಪುಣ್ಯ, ಧರ್ಮ-ಅಧರ್ಮಗಳ ಭಯವು ತಪ್ಪಿ ಹೋಗಿದ್ದರೂ, ರಾಧಾಬಾಯಿಯು ತನಗೆ ಮಾಡಿದ ಉಪಕೃತಿಯನ್ನು ಮರೆತು ಮನಸ್ವೀಯಾಗಿ ಆಚರಿಸಲಿಕ್ಕೆ ಎದೆ ಮಾಡದಾಗಿದ್ದಳು ಒಂದು ವೇಳೆ ತನ್ನ ವರ್ತನವನ್ನು ನೋಡಿ ರಾಧಾಬಾಯಿಯು ಮುನಿದರೆ, ಆಶ್ರಯಹೀನಳಾಗಿ ತೊಂದರೆಗೊಳಗಾದೇನೆಂಬ ಭಯವೂ ಅವಳನ್ನು ಬಾಧಿಸುತ್ತಿತ್ತು ಅವಳು ಕೇವಲ ಉದರಂಭರಣಕ್ಕಾಗಿಯೇ ಪ್ರತಿನಿಧಿಯ ಮನೆಯ ಆಶ್ರಯ ಬಯಸುತ್ತಿರಲಿಕ್ಕಿಲ್ಲ ಅವಳು ಅಲ್ಲಿಯೇ ಇನ್ನೂ ಕೆಲವು ದಿನ ವಾಸವಾಗಿರಬೇಕೆಂದು ಸಂಕಲ್ಪ ಮಾಡಿಕೊಂಡಿದ್ದಂತೆ ಭಾಸವಾಗುತ್ತಿತ್ತು ಹೀಗೆ ಸಂಕಲ್ಪ ಮಾಡಿಕೊಳ್ಳಲಿಕ್ಕೆ ಬೇರೆ ಕಾರಣಗಳಿರುತ್ತಿರಬಹುದು. ತನಗೆ ಪ್ರಾಪ್ತವಾದ ಪ್ರತಿಕೂಲ ಕಾಲದ ಕಡೆಗೂ, ತಾನು ಸಾಧಿಸಬೇಕಾರುವ ಕಾರ್ಯಗಳ ಕಡೆಗೂ ಲಕ್ಷ್ಯಗೊಟ್ಟು ರಾಧಾಬಾಯಿಯ ಅಧಿಕಾರವಾಣಿಯ ಮುಂದೆ ಅವಳು ತಲೆಬಾಗಿಸಬೇಕಾಯಿತು

ರಾಧಾಬಾಯಿಯ ಮಾತಿನ ಇಂಗಿತವು ಚದುರೆಗೆ ಚೆನ್ನಾಗಿ ತಿಳಿಯಿತು; ಆದರೆ ಅವಳು ಅರಿಯದವಳಂತೆ—"ಬಾಯಿಸಾಹೇಬರ! ನೀವು ಸ್ವಾಮಿನಿಯರು; ನಾನು ಸೇವಕಳು. ನಿಮ್ಮ ಕಾರ್ಯಗಳನ್ನು ಮನಸ್ಸುಗೊಟ್ಟು ಮಾಡುವದರಲ್ಲಿ ಅಭ್ಯಂತರವುಂಟಾದರೆ ಬೇಕಾದಂತಹ ದಂಡನೆಗಳನ್ನು ವಿಧಿಸಿರಿ. ಹಿಂದೆ ಆದದ್ದು ಆಗಿ ಹೋಯಿತು. ಮೊದಲು ಘಟಿಸಿದ ಪಾಪವು ಹೃದಯವನ್ನು ಸುಡುತ್ತಿರುವದು. ಇಂಥ ಸ್ಥಿತಿಯಲ್ಲಿ ಹೊಸದಾಗಿ ಪಾಪಸಂಚಯವಾಗದಂತೆ ನಾನು ಜಾಗ್ರತೆಗೊಂಡಿರುವೆನು ನಾನು ನಿಮ್ಮ ದಾಸಿಯಾಗಿದ್ದರೂ, ಗುಣಗ್ರಾಹಿಗಳಾದ ನೀವು ನನ್ನನ್ನು ಸಹಚರಿಯಂತೆ ಕಾಣುತ್ತಿರುವಿರಿ ನಿಮ್ಮ ಈ ಘನವಂತಿಕೆಯು ಉಳಿದ ದಾಸಿಗಳಿಗೆ ಸೇರದೆ ಅವರು ಇಲ್ಲದ

ಸುದ್ದಿಗಳನ್ನು ಬೀರುತ್ತಿರುವರು. ಜನರು ಸಂದೇಹಕ್ಕೆ ಈಡಾಗುವಂತೆ ಪ್ರತಿನಿಧಿಸಾಹೇಬರು ಒಮ್ಮೊಮ್ಮೆ ನನ್ನೊಡನೆ ಸಲಿಗೆಯಾಡುತ್ತಿರುವರು. ಇಷ್ಟಕ್ಕಾಗಿ ನೀವು ವಿಪರೀತ ಭಾವನೆ ಮಾಡಿಕೊಳ್ಳಲಾಗದು" ಈ ವಿಷಯವನ್ನು ಇನ್ನು ಹೆಚ್ಚಿಗೆ ಬೆಳೆಸಬಾರದೆಂದು ರಾಧಾಬಾಯಿಯ ಮಾನಸವಿತ್ತು; ಆದ್ದರಿಂದ ಅವಳು ಆ ಮಾತನ್ನು ಅಲ್ಲಿಗೇ ನಿಲ್ಲಿಸಿದಳು. ಅಷ್ಟರಲ್ಲಿ ಹೊರಗಿನಿಂದ ಒಬ್ಬ ದಾಸಿಯು ಅಲ್ಲಿಗೆ ಬಂದು.—'ಬಾಯಿಸಾ-ಹೇಬರೆ, ಇವಳ ಸವಿ ಮಾತಿಗೆ ನೀವು ಮೋಸಹೋಗಬೇಡಿರಿ ಈ ಚದುರೆಯು ಸವಿಮಾತಿನ ಚತುರೆಯು ಇವಳು ದಾಸಿಯಲ್ಲ, ನಿಮ್ಮ ಸವತಿಯು!"

ಚದುರೆಯ ಏಳ್ಗೆಯನ್ನು ನೋಡಿ ಸಹಿಸಲಾರದೆ ಒಬ್ಬ ದಾಸಿಯು ರಾಧಾಬಾಯಿ ಚದುರೆಯರ ಭಾಷಣವನ್ನು ಮರೆಗೆ ನಿಂತು ಕೇಳ, ಇದೇ ಸಮಯವೆಂದು ನಿಜಸ್ಥಿತಿಯನ್ನು ಉಸುರಿಬಿಟ್ಟಳು. ಹೂರಣವು ಪೂರಾ ಹೊರಬಿದ್ದುದರಿಂದ ಚದುರೆಯು ಭಯಗೊಂಡಳು. ಆದರೂ ಅವಳು ಧೈರ್ಯ-ತಾಳಿ —' ಬಾಯಿಸಾಹೇಬರೆ, ನೋಡಿದಿರಾ, ಜನರು ಹೇಗೆ ಸಂದೇಹಗ್ರಸ್ತರಾಗಿರುವರು! ನಾನು ನಿಮಗೆ ಈ ಸಂಗತಿಯನ್ನು ಆಗಲೆ ಅರುಹಿರುವೆನು. ಜನರು ಬೇಕಾದ ಹಾಗೆ ಮಾತಾಡಲಿ ಅದರ ಪರಿವೆ ನನಗಿಲ್ಲ. ಪಾಪವಿಲ್ಲದಲ್ಲಿ ಭಯವೇನು?"

"ನೋಡಿದಿರಾ! ಹೇಗ ಗರ್ತಿಗಂಗವ್ವನಾಗಿ ಮಾತನಾಡುತ್ತಾಳೆ!" ಎಂದು ಹೊರಗಿನಿಂದ ಬಂದ ದಾಸಿಯು ನುಡಿದಳು.

"ನಾನು ಗರ್ತಿಗಂಗವ್ವನೆಂದು ಹೇಳುವದಿಲ್ಲ; ಆದರೆ ನಿನ್ನ ಆಕ್ಷೇಪಣೆಯು ಮಾತ್ರ ಸರಿಯಾದದ್ದಲ್ಲವೆಂದು ಹೇಳದಿರಲಾರೆನು ದಾಸಿಯು ದಾಸಿಯೇ! ಸವತಿ ಹೇಗಾದಾಳು'"

ಈ ವಿಷಯವನ್ನು ಬೆಳಿಸಲಿಕ್ಕೆ ರಾಧಾಬಾಯಿಯೇ ಹೇಸಿದಳು ಆಗ ಅವಳು ಚದುರೆಯನ್ನು ಕುರಿತು - 'ನೀನು ರೂಪಲಾವಣ್ಯಾದಿಗಳಿಂದಲೂ ತಂತ್ರಗಾರಿಕೆಯಿಂದಲೂ ದಾಸಿಯು ಹೋಗಿ ಸವತಿಯಾಗುವಷ್ಟು ಯೋಗ್ಯತೆಯವಳಿರುವೆ. ನೀನು ಮನುಷ್ಯ ಧರ್ಮವನ್ನು ಜ್ಞಾಪಕದಲ್ಲಿರಿಸಿ ನನ್ನ ಮೇಲೆ ಕೈಮಾಡಲಿಕ್ಕಿಲ್ಲೆಂದು ಭಾವಿಸಿರುವೆನು ಇಷ್ಟರ ಮೇಲೆಯೂ ನೀನು ನಿನ್ನ ಕಾಯಕವನ್ನು ಬಿಡದಿದ್ದರೆ, ನನ್ನ ಮನೆಗೆ ಹೊರತಾಗಬೇಕಾಗುವದೆಂಬದನ್ನು ಲಕ್ಷ್ಯದಲ್ಲಿಡು,"

ರಾಧಾಬಾಯಿಯು ಹೀಗೆ ನುಡಿಯುವಷ್ಟರಲ್ಲಿ ಪ್ರತಿನಿಧಿಯಾದ ಶ್ರೀಪತಿರಾಯನ ಆಗಮನವಾದ್ದರಿಂದ ಆ ವಿಷಯವು ಅಲ್ಲಿಗೇ ಮುಗಿಯಿತು.

---

# ಪ್ರೀತಿಸಂಗಮದಲ್ಲಿ.

ಸಾತಾರೆಯ ಛತ್ರಪತಿಯ ಪಂತಪ್ರತಿನಿಧಿಯು ಕರ್ಹಾಡಕ್ಕೆ ಬಂದಾಗಿನಿಂದ ಆ ಪಟ್ಟಣಕ್ಕೆ ಹೆಚ್ಚು ಮಹತ್ವವು ಪ್ರಾಪ್ತವಾಗಿತ್ತು. ಪ್ರತಿನಿಧಿಯು ಕರ್ಹಾಡದ ವಾಯುವ್ಯ ಮೂಲೆಗಿದ್ದ ಕೃಷ್ಣಾ-ಕೋಯನಾ ನದಿಗಳ ಸಂಗಮದ ಮೇಲಿನ ಪ್ರದೇಶದಲ್ಲಿ ತನ್ನ ವಾಡೆಯನ್ನೂ ನೆಲಕೋಟೆಯನ್ನೂ ಕಟ್ಟಿಸಿದ್ದನು. ಅವನು ನದಿಗಳ ಪ್ರೀತಿಸಂಗಮದ ಬಳಿಯಲ್ಲಿ ಸೋಪಾನಗಳನ್ನೂ, ಪುರಾತನ ದೇವಾಲಯಗಳನ್ನೂ ಜೀರ್ಣೋದ್ಧಾರ ಮಾಡಿಸಿದ್ದಲ್ಲದೆ, ಎಷ್ಟೋ ಹೊಸ ದೇವಾಲಯಗಳನ್ನು ಕಟ್ಟಿಸಿದ್ದನು. ಇವೆಲ್ಲ ವ್ಯವಸ್ಥೆಗಳಿಂದ ಪ್ರಾಚೀನ ಕ್ಷೇತ್ರವಾದ ಕರ್ಹಾಡಕ್ಕೆ ಹೆಚ್ಚು ಮಹತ್ವವುಂಟಾಗಿತ್ತು.

ಆಷಾಢ ಶುದ್ಧ ಏಕಾದಶಿಯ ದಿನವು. ಅಂದು ಪ್ರೀತಿಸಂಗಮದಲ್ಲಿ ಸ್ನಾನ ಮಾಡಲಿಕ್ಕೆ ಎಷ್ಟೋ ಜನ ಸ್ತ್ರೀ-ಪುರುಷರು ಬಂದಿದ್ದರು. ಪಂತಪ್ರತಿನಿಧಿಯಾದ ಶ್ರೀಪತಿರಾಯನೂ ತನ್ನ ಮನೆಯ ಜನರೊಡನೆ ಆ ತೀರ್ಥಸ್ನಾನಕ್ಕೆ ಬಂದಿದ್ದನು ಪ್ರತಿನಿಧಿಯೊಡನೆ ಅವನ ಮುತಾಲಿಕನಾದ ಯಮಾಜಿಶಿವದೇವನೂ ಇದ್ದನು. ಪ್ರತಿನಿಧಿಯು ಅಲ್ಲಿಗೆ ಬರುವದಕ್ಕಿಂತ ಸ್ವಲ್ಪ ಮುಂಚಿತವಾಗಿ ಒಬ್ಬ ಬೈರಾಗಿಯು ಒಬ್ಬ ಹುಡುಗನೊಡನೆ ನೌಕೆಯಲ್ಲಿ ಕುಳಿತುಕೊಂಡು ಬಂದಿದ್ದನು ಅವನು ಸಂಗಡ ಕರೆತಂದ ಹುಡುಗನನ್ನು ಅಲ್ಲಿಯೇ ಕೃಷ್ಣಾ ನದಿಯ ಉಸುಕಿನಲ್ಲಿ ಆಡಲಿಕ್ಕೆ ಬಿಟ್ಟು, ಪ್ರತಿನಿಧಿಯ ಸಮೀಪದಲ್ಲಿ ಸುಳಿದಾಡತೊಡಗಿದ್ದನು. ಆಗ ಶ್ರೀಪತಿರಾಯಪ್ರತಿನಿಧಿಯು ಮುತಾಲಿಕನಾದ ಯಮಾಜಿಯೊಡನೆ ಯಾವದೋ ಒಂದು ಮಹತ್ವದ ವಿಷಯದ ಬಗ್ಗೆ ಮಾತನಾಡತೊಡಗಿದ್ದನು

ಪ್ರತಿನಿಧಿ-ಮುತಾಲಿಕರಲ್ಲಿ ಇನ್ನೂ ಸಂಭಾಷಣವು ನಡೆದಿತ್ತು ರಾಧಾಬಾಯಿಯು ಸ್ನಾನವನ್ನು ತೀರಿಸಿಕೊಂಡು ತನ್ನ ದಾಸಿಯಾದ ಚದುರೆಯೊಡನೆ ಸೋಪಾನದ ಬಳಿಯಲ್ಲಿದ್ದ ಕೃಷ್ಣಾದೇವಿಯ ದೇವಾಲಯಕ್ಕೆ ಹೊರಟಳು. ಕರ್ಹಾಡದ ಪ್ರೀತಿಸಂಗಮದ ತೀರ್ಥಸ್ಥಾನದಲ್ಲಿ ಅನೇಕ ದೇವಸ್ಥಾನಗಳುಂಟು. ಅವುಗಳಲ್ಲಿ ಕಾಶೀವಿಶ್ವೇಶ್ವರ ಹಾಗು ಕೃಷ್ಣಾದೇವಿಯ ದೇವಸ್ಥಾನಗಳೇ ಪ್ರಮುಖವಾಗಿರುವವು. ರಾಧಾಬಾಯಿಯು ದೇವಸ್ಥಾನವನ್ನು ಪ್ರವೇಶಿಸಿ, ಕೃಷ್ಣಾದೇವಿಗೆ ಪ್ರದಕ್ಷಿಣೆಮಾಡಿ ಭಕ್ತಿಪೂರ್ವಕವಾಗಿ ಅಭಿವಂದಿಸಿದಳು. ಆಗ ಅವಳ ಬಳಿಯಲ್ಲಿದ್ದ ಚದುರೆಯು:—"ಬಾಯೀಸಾಹೇಬರೆ, ನನ್ನ ತಲೆಯಲ್ಲಿ ಒಂದು ವಿಚಾರವು ಬಂದಿದೆ. ಆಡಿತೋರಿಸಲೇನು?"

"ಓಹೋ! ಅವಶ್ಯವಾಗಿ ಹೇಳು. ಏನು ವಿಚಾರವದು?" ಎಂದು ರಾಧಾಬಾಯಿಯು ಆತುರದಿಂದ ನುಡಿದಳು.

"ನಾನು ಇಂದು ಕಾಶೀವಿಶ್ವೇಶ್ವರ ಹಾಗು ಕೃಷ್ಣಾದೇವಿಯರಿಗೆ ಹರಕೆ ಕಟ್ಟುವವಳಿರುತ್ತೇನೆ."

"ಯಾವ ಕಾಮನೆಯಿಂದ ಹರಕೆ ಹೊರುವವಳಿರುವೆ? ಗಂಡನ ಭೆಟ್ಟಿಯಾಗಬೇಕೆಂದೇನು?"

"ಪಿಸ್! ಆ ಹರಕೆಯನ್ನದೇಕೆ ಹೊರಲಿ? ಹಾದೀಹೋಗುವ ದೆವ್ವ ನನ್ನು ಮನೆಯಲ್ಲಿ ಹೊಗಿಸಿಕೊಂಡಂತಾದೀತು." ಎಂದು ಚದುರೆಯು ಮುರಕ ಮಾಡುತ್ತ ನುಡಿದಳು.

"ಹಾಗಾದರೆ ಸಂಭಾಜಿರಾಜರ ಪ್ರೇಮಲಾಭವಾಗಬೇಕೆಂದು ಹರಕೆ ಹೊರುವೆಯಾ?"

"ಛೀ! ಇದೇನು ಮಾತನಾಡುತ್ತೀರಿ ಬಾಯಿಸಾಹೇಬರೆ? ನಾನು ನಿಮ್ಮ ಕೃಪಾಛತ್ರದಲ್ಲ ಸುಖವಾಗಿರುವೆನು. ನಿಮ್ಮಲ್ಲಿ ನನಗೇನು ಕಡಿಮೆಯಾಗಿರುವದೆಂದು ರಾಜಾಶ್ರಯವನ್ನು ಬಯಸಲಿ?" ಎಂದು ಚದುರೆಯು ಹಸನ್ಮುಖಿಯಾಗಿ ನುಡಿದಳು.

ಚದುರೆಯ ಈ ಮಾತುಗಳು ರಾಧಾಬಾಯಿಯ ಮನಸ್ಸಿನ ಮೇಲೆ ವಿಪರೀತವಾದ ಪರಿಣಾಮವನ್ನುಂಟುಮಾಡಿದವು, ಆದರೆ ಅವಳು ಯಾವ ವಿಕಾರವನ್ನೂ ವ್ಯಕ್ತಪಡಿಸದೆ—"ಹಾಗಾದರೆ ನೀನು ಹರಕೆ ಹೊರುವ ಉದ್ದೇಶವಾವುದು?"

"ನಾನು ನಿಮ್ಮ ಸಲುವಾಗಿ ಹರಕೆ ಹೊರುವವಳಿರುವೆನು."

"ಯಾವ ಹರಕೆಯನ್ನು ಹೊರುವೆಯವ್ವಾ?"

"ನಿಮಗೆ ಪುತ್ರಲಾಭವಾಗಬೇಕೆಂದು!"

ರಾಧಾಬಾಯಿಯು ಮಾತನಾಡದೆ, ಮುಖವನ್ನು ಕೆಳಗೆ ಮಾಡಿದಳು.

"ಅದರಂತೆಯೇ ನಮ್ಮ ಧನೀಸಾಹೇಬರಿಗೆ ಶಾಹೂಮಹಾರಾಜರ ಓಲಗದಲ್ಲಿ ಸರ್ವಾಧಿಕಾರ ದೊರೆಯಬೇಕೆಂದು ಹರಕೆ ಹೊರುವವಳಿರುವೆನು."

ಈ ಮಾತಿಗೆ ರಾಧಾಬಾಯಿಯು ಪ್ರತಿಯಾಡಲಿಲ್ಲ.

"ಬಾಯಿಸಾಹೇಬರೇ, ಈ ಹರಕೆ ಹೊರಲಿಕ್ಕೆ ನಿಮ್ಮ ಸಮ್ಮತಿಯಿರುವದಷ್ಟೇ?"

"ಅವಶ್ಯವಾಗಿ ಹೊರು. ಪರಮಾತ್ಮನು ನಿನ್ನ ಬಾಯಲ್ಲಿ ನಿಲ್ಲಲಿ."

ಆಗ ಚದುರೆಯು ಪೂಜಾರಿಯನ್ನು ಕರೆದು, ಕೃಷ್ಣಾಬಾಯಿಯ ಮುಂದೆ

ಕೈ ಜೋಡಿಸಿ ಕುಳಿತುಕೊಂಡಳು. ರಾಧಾಬಾಯಿಯೂ ದೇವಿಯ ಸಮ್ಮುಖದಲ್ಲಿ ಕೈ ಜೋಡಿಸಿ ಕುಳಿತಳು. ಬಳಿಕ ಚದುರೆಯು:—"ದೇವಿ! ಬಾಯಿಸಾಹೇಬರಿಗೆ ಪುತ್ರಲಾಭವಾಗಬೇಕು; ಹಾಗು ನಮ್ಮ ಧನಿಯರ ಮೇಲೆ ಶಾಹೂ ಮಹಾರಾಜರ ಅನುಗ್ರಹವುಂಟಾಗಿ ಅವರಿಗೆ ಸರ್ವಾಧಿಕಾರವು ಪ್ರಾಪ್ತವಾಗಬೇಕು; ಅಂದರೆ ನಿನಗೆ ನಾವು ಬಂಗಾರದ ಕವಚವನ್ನು ಮಾಡಿಸಿ ಕೊಡುವೆವು."

ದೊಡ್ಡವರ ದೊಡ್ಡ ಹರಕೆಯನ್ನು ಕೇಳಿ ಪೂಜಾರಿಯು ಸಂತುಷ್ಟನಾದನು. ಅವರ ಹರಕೆಯನ್ನು ಪೂರೈಸಬೇಕೆಂದು ಅವನೂ ದೇವಿಗೆ ಬೇಡಿಕೊಂಡನು ರಾಧಾಬಾಯಿಯು ದೇವಿಗೆ ಕಾಯಿ-ಕರ್ಪೂರಗಳನ್ನು ಅರ್ಪಿಸಿದ ಮೇಲೆ ಪೂಜಾರಿಗೆ ದಕ್ಷಿಣೆ ಕೊಟ್ಟಳು ಅನಂತರದಲ್ಲಿ ಅವಳೂ ಚದುರೆಯೂ ಕಾಶೀವಿಶ್ವೇಶ್ವರನ ದೇವಾಲಯಕ್ಕೆ ಹೋದರು. ಚದುರೆಯು ಅಲ್ಲಿಯೂ ಮೊದಲಿನಂತೆಯೆ ಬೇಡಿಕೊಂಡು, ಕಾಮನೆಯು ಪೂರೈಸಿದ ಮೇಲೆ ನಂದಿಗೂ ಗರ್ಭಾಗಾರದ ಬಾಗಿಲಿಗೂ ಬೆಳ್ಳಿಯ ಮಡಾಸ ಮಾಡಿಸುವದಕ್ಕೆ ಒಪ್ಪಿದಳು. ಚದುರೆಯು ತನ್ನ ಸಲುವಾಗಿಯೂ ಏನೋ ಹರಕೆ ಹೊತ್ತಳು; ಆದರೆ ಅದು ರಾಧಾಬಾಯಿಗೆ ಚನ್ನಾಗಿ ಕೇಳಿಸದಿದ್ದರೂ, 'ನನ್ನ ಶಿವಾಜಿಯು ನನಗೆ ದೊರೆಯುವಂತೆ ಮಾಡು' ಎಂಬ ಮಾತು ಅಸ್ಪಷ್ಟವಾಗಿ ಕೇಳಿತು. ಚದುರೆಯ ಶಿವಾಜಿಯು ಯಾರಿರಬಹುದು? ಶಿವಾಜಿಯು ಅವಳಿಗೆ ಪತಿಯೋ, ಸುತನೋ, ಜೀವದ ಸ್ನೇಹಿತನೋ, ಆಪ್ತಸ್ವಕೀಯನೋ? ಅವನು ಯಾರಾಗಿರಬಹುದು? ಮೊದಲಾದ ವಿಚಾರಗಳು ಅವಳಲ್ಲಿ ಹುಟ್ಟಿದವು, ಆದರೆ ನಿನ್ನ ಶಿವಾಜಿಯು ಯಾರೆಂದು ಚದುರೆಯನ್ನು ಕೇಳಲಿಕ್ಕೆ ಅವಳಿಗೆ ಧೈರ್ಯವಾಗಲಿಲ್ಲ. ಅನಂತರದಲ್ಲಿ ರಾಧಾಬಾಯಿಯು ಕಾಶೀವಿಶ್ವೇಶ್ವರನಿಗೆ ಕೈಜೋಡಿಸಿ ಹರಕೆ ಹೊತ್ತಳು:—"ಈ ಗಯ್ಯಾಳಿದಾಸಿಯು ನನಗೆ ಸವತಿಯಾಗಿ ಕುಳಿತಿರುವಳು. ಇವಳು ಬೇಗನೆ ನನ್ನನ್ನು ಬಿಟ್ಟು ಹೋಗುವಂತೆ ಮಾಡು ಶೂಲಪಾಣಿ ಶಂಕರಾ!"

ರಾಧಾಬಾಯಿಯ ಈ ಪ್ರಾರ್ಥನೆಯು ದಾಸಿಯಾದ ಚದುರೆಗೆ ಎಷ್ಟೂ ಕೇಳಿಸಲಿಲ್ಲ ತನ್ನಂತೆಯೇ ಅವಳು ಹರಕೆ ಹೊತ್ತಿರಬಹುದೆಂದು ಚದುರೆಯ ಕಲ್ಪನೆಯಾಯಿತು. ದೇವದರ್ಶನ ಮುಗಿದ ಮೇಲೆ ರಾಧಾಬಾಯಿಯೂ ದಾಸಿಯೂ ವಾಡೆಗೆ ಬಂದರು. ರಾಧಾಬಾಯಿಯನ್ನು ಮನೆಗೆ ಕಳುಹಿಸಿದ ಮೇಲೆ ಚದುರೆಯು ತನ್ನ ಸ್ನಾನವನ್ನು ತಿರಿಸಲಿಕ್ಕೆಂದು ಮತ್ತೆ ನದಿಗೆ ಬಂದಳು. ಶ್ರೀಪತಿರಾಯನೂ ಯುವರಾಜಿರಾಯನೂ ಅದೇ ಸ್ನಾನಮಾಡಿ

ವ್ಯೈಬರಸಿಕೊಳ್ಳಹತ್ತಿದ್ದರು. ಅವರಲ್ಲಿ ಬಹಳ ವೇಳೆಯವರೆಗೆ ವಾದ-ವಿವಾದವು ನಡೆದಿತ್ತು. ಇಷ್ಟು ಹೊತ್ತಿನವರೆಗೆ ಚದುರೆಯು ರಾಧಾಬಾಯಿಯ ಸೇವೆಯಲ್ಲಿ ತೊಡಗಿದ್ದರಿಂದ ಅವಳಿಗೆ ಆ ಮಾತುಗಳನ್ನು ಕೇಳಲಿಕ್ಕೆ ಅವಕಾಶ ದೊರೆತಿದ್ದಿಲ್ಲ. ಚದುರೆಯು ಪ್ರತಿನಿಧಿ-ಮುತಾಲಿಕರ ಸಂಭಾಷಣವನ್ನು ಕೇಳಬೇಕೆಂದು ಬದಿಗೆ ಸರಿದು ನಿಂತಳು ಶ್ರೀಪತಿರಾಯನು ಮನೆಯಲ್ಲಿ ಯಾರೊಡನೆಯಾದರೂ ಮಾತಾಡುತ್ತ ಕುಳಿತಿದ್ದರೆ, ಮರೆಗೆ ನಿಂತು ಕೇಳುವದೊಂದು ಚಟವೇ ಅವಳಿಗೆ ಬಿದ್ದಿತ್ತು. ಬೇರೆಯವರ ಮಾತುಗಳನ್ನು ಹೀಗೆ ಕದ್ದು ಕೇಳುವದರಿಂದ ಯಾವ ಬಗೆಯ ಲಾಭವಿದ್ದಿತೋ ಅವಳಿಗೇ ಗೊತ್ತು! ನೌಕೆಯಿಂದ ಬಂದ ಬೈರಾಗಿಯಾದರೂ ಸ್ನಾನದ ನಿಮಿತ್ತದಿಂದ ಶ್ರೀಪತಿರಾಯ-ಯಮಾಜಿರಾಯರ ಸಮೀಪದಲ್ಲಿಯೇ ಕುಳಿತು ಅವರ ಸಂಭಾಷಣ ಕೇಳತೊಡಗಿದ್ದನು. ಅವನ ಕಡೆಗೆ ಯಾರ ಲಕ್ಷ್ಯವೂ ಇರಲಿಲ್ಲ.

ಕೆಲಹೊತ್ತಿನ ಮೇಲೆ ಶ್ರೀಪತಿರಾಯ-ಯಮಾಜಿಶಿವದೇವರು ವಾಡೆಗೆ ನಡೆದರು. ಬೈರಾಗಿಯು ಅವರಿಂದ ಕೆಲ ಅಂತರದ ಮೇಲೆ ಅವರ ಹಿಂದೆ ಹಿಂದೆಯೇ ಹೋಗಹತ್ತಿದನು. ಆಗ ಮಾತ್ರ ಅವನು ಚದುರೆಯ ದೃಷ್ಟಿಗೆ ಬಿದ್ದನು. ಈ ಬೈರಾಗಿಯು ನಿಜವಾದ ಬೈರಾಗಿಯಿರಲಿಕ್ಕಿಲ್ಲ. ಸಂಭಾಜಿರಾಜ-ಶಾಹೂಮಹಾರಾಜರ ಕಡೆಯ ಇಲ್ಲವೆ ಪೇಶವೆಯ ಕಡೆಯ ಗುಪ್ತಚರನಾಗಿರಬಹುದು ಮೊದಲಾದ ವಿಚಾರಗಳು ಅವಳಲ್ಲಿ ಹುಟ್ಟಿದವು. ಕೂಡಲೆ ಅವಳು ನಾಲ್ಕು ಹೆಜ್ಜೆ ಮುಂದೆ ಸಾಗಿದಳು. ಅಷ್ಟರಲ್ಲಿ ನದಿಯ ಸೋಪಾನದ ಮೇಲೆ ಆಡ್ಯಾಡುತ್ತಿದ್ದ ನಾಲ್ಕೈದು ವರ್ಷದ ಹುಡುಗನೊಬ್ಬನು ಜೋಲಿಹೋಗಿ ನದಿಯಲ್ಲಿ ಬಿದ್ದನು. ಕೂಡಲೆ ಅಲ್ಲಿ ನೆರೆದಿದ್ದ ಜನರು "ಅಯ್ಯೋ! ಯಾವನೋ ಒಬ್ಬ ಹುಡುಗನು ನದಿಯಲ್ಲಿ ಬಿದ್ದುಬಿಟ್ಟನು!" ಎಂದು ಕೂಗಹತ್ತಿದರು. ಸೋಪಾನದ ಬಳಿಯಲ್ಲಿ ನದಿಯ ಪ್ರವಾಹವು ಆಳವೂ ವೇಗವುಳ್ಳದ್ದೂ ಇದ್ದುದರಿಂದ, ನದಿಯಲ್ಲಿ ಹಾರಿ ಆ ಹುಡುಗನನ್ನು ಮೇಲೆ ತೆಗೆಯಲಿಕ್ಕೆ ಯಾರೂ ಮುಂದುವರಿಯಲಿಲ್ಲ. ಹುಡುಗನು ಗುಟುಕು ನೀರು ಕುಡಿಯುತ್ತ ತೇಲುತ್ತ ಮುಳುಗುತ್ತ ಪ್ರವಾಹದ ಕೂಡ ಹೊರಟಿದ್ದನು. ಚದುರೆಯು ಈ ದೃಶ್ಯವನ್ನು ನೋಡಿದ ಕೂಡಲೆ, ಬೈರಾಗಿಯ ಬೆನ್ನಹತ್ತಿ ಹೋಗುವದನ್ನು ಬಿಟ್ಟು, ಧಾವಿಸಿ ಬಂದು ನದಿಯಲ್ಲಿ ದುಮುಕಿದಳು; ಹಾಗು ವೇಗದಿಂದ ಈಸುತ್ತ ಹೋಗಿ, ದೂರಹೋಗಿದ್ದ ಆ ಹುಡುಗನನ್ನು ಹಿಡಿದಳು ಆ ಹುಡುಗನು ಬಹಳ ಅಂಜಿದ್ದರಿಂದ ಅವಳ ಕೊರಳಿಗೆ ತನ್ನ ಎರಡೂ ಕೈಗಳನ್ನು ಹಾಕಿ ತೆಕ್ಕೆಬಿದ್ದನು. ಆಗ ಮಾತ್ರ ಅವಳಿಗೆ ಈಸುವದಕ್ಕೆ ಆತಂಕ

ವಾಗ ತೊಡಗಿತು. ಅವಳು ಆ ಹುಡುಗನ ಕೈಗಳನ್ನು ಬಿಡಿಸಲಿಕ್ಕೆ ಮಾಡಿದ ಪ್ರಯತ್ನಗಳು ನಿಷ್ಫಲವಾದವು ಆಗ ಅವಳು —"ಬಾಲಕಾ, ಕೊರಳಿಗೆ ತೆಕ್ಕೆ ಹಾಕಿದ ಕೈಗಳನ್ನು ತೆಗೆ ನೀನು ಹೆದರಬೇಡ ನಾನು ನಿನ್ನನ್ನು ಈಗಲೇ ದಂಡೆಗೆ ಮುಟ್ಟಿಸುವೆನು" ಎಂದು ಬಹು ಪರಿಯಾಗಿ ಹೇಳಿದಳು; ಆದರೆ ಹುಡುಗನು ಪ್ರಾಣಭಯದಿಂದ ಬಹಳವಾಗಿ ಹೆದರಿದ್ದನು ಆದ್ದರಿಂದ ಅವನು ಕೊರಳಿಗೆ ಹಾಕಿದ ಕೈಗಳನ್ನು ತೆಗೆದುಕೊಳ್ಳಲಿಲ್ಲ ಇಷ್ಟೇ ಅಲ್ಲ, ಚದುರೆಯು ಕೈ ತೆಗೆಯಲಿಕ್ಕೆ ಹೇಳಿದ ಹಾಗೆ ಹಾಗೆ ಅವನು ಮತ್ತಿಷ್ಟು ಬಿಗಿಹಿಡಿದು ಗಟ್ಟಿಯಾಗಿ ಅಪ್ಪತೊಡಗಿದನು ಚದುರೆಯು ಅವಸರದಿಂದ ನೀರಲ್ಲಿ ಬಿದ್ದುದರಿಂದ ವಸ್ತ್ರಗಳನ್ನು ಸಾವರಿಸಿ ಕಟ್ಟಿಕೊಂಡಿದ್ದಿಲ್ಲ ಅವಳ ಸೆರಗು ನೀರಲ್ಲಿ ತೊಯ್ದು ಅದರಲ್ಲಿ ಗಾಳಿಯು ತುಂಬಿದ್ದರಿಂದ ಅವಳು ಪ್ರವಾಹದ ಕೂಡ ಹರಿಯುತ್ತ ನಡೆದಳು ಅಲ್ಲಿ ಪ್ರವಾಹದ ವೇಗವು ಬಹಳ ಇದ್ದಿತು. ಮುಂದೆ ಸ್ವಲ್ಪ ದೂರದಲ್ಲಿಯೇ ಕೋಯನಾ ನದಿಯು ಕೃಷ್ಣೆಗೆ ಕೂಡಿತ್ತು ಎರಡೂ ನದಿಗಳ ಸಂಗಮದಲ್ಲಿ ನೀರು ಬಹಳೇ ಆಳವಿದ್ದು ಅಲ್ಲಿ ತಿರುಗಣೆಮಡುವಾಗಿತ್ತು ಮನುಷ್ಯರು ಅಲ್ಲಿಗೆ ಹೋದರೆಂದರೆ ತಿರುಗುತ್ತಿದ್ದಿಲ್ಲ. ಆ ಸ್ಥಳದಲ್ಲಿ ದೊಡ್ಡ ದೊಡ್ಡ ಮೊಸಳೆಗಳೂ ಮೀನಗಳೂ ವಾಸವಾಗಿದ್ದವು ಈ ಎಲ್ಲ ಸಂಗತಿಯು ಚದುರೆಗೆ ಗೊತ್ತಿದ್ದುದರಿಂದಲೂ, ಆ ಸ್ಥಳವು ಸಮೀಪದಲ್ಲಿಯೇ ಬಂದುದರಿಂದಲೂ ಅವಳು ಬೆದರಿದಳು. ಎಷ್ಟು ರೀತಿಯಿಂದ ಹೇಳಿದರೂ ಹುಡುಗನು ಅವಳ ಕೊರಳು ಬಿಡಲೊಲ್ಲನು. ತಿರುಗಣೆಯ ಮಡುವು ಪ್ರತಿಯೊಂದು ಕ್ಷಣಕ್ಕೆ ಸಮೀಪವಾಗಹತ್ತಿತು. ಚದುರೆಯು ಈಸುವ ಕಲೆಯಲ್ಲಿ ನಿಷ್ಣಾತಳಿದ್ದಳೇನೋ ನಿಜವು ವಸ್ತ್ರಗಳಿಂದಲೂ ಹುಡುಗನಿಂದಲೂ ಅವಳಿಗೆ ಬಹಳೇ ಆತಂಕವಾಗಿತ್ತು ಅವಳು ಅಂಥ ಸ್ಥಿತಿಯಲ್ಲಿಯೆ ತನ್ನ ವಸ್ತ್ರಗಳನ್ನು ಸಾವರಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡಿದಳು; ಆದರೆ ಅದು ಅವಳಿಗೆ ಸಾಧಿಸಲಿಲ್ಲ ತಿರುಗಣೆಮಡುವು ತೀರ ಸಮೀಪಕ್ಕೆ ಬಂದುದರಿಂದ ದಂಡೆಯಲ್ಲಿದ್ದ ಜನರು:—"ಹುಡುಗನನ್ನು ತೆಗೆಯಲಿಕ್ಕೆ ಹೋಗಿ ಆ ಸ್ತ್ರೀಯೂ ತಿರುಗಣೀಮಡುವನ್ನು ಸೇರಿದಳು!" ಎಂದು ಕೂಗಹತ್ತಿದರು

ಚದುರೆಯು ನದಿಯಲ್ಲಿ ಬೀಳುವಾಗ ಕೆಲವರು ಅವಳನ್ನು ನೋಡಿದ್ದರು. ಅವಳು ದೊಡ್ಡ ಮನೆತನದ ಸ್ತ್ರೀಯಾಗಿರಬಹುದೆಂದು ತರ್ಕಿಸಿದ್ದರು. ಅವರೊಳಗಿನ ಕೆಲವು ಜನರು ಪ್ರತಿನಿಧಿಯ ಮನೆಯ ಸ್ತ್ರೀಯಾಗಿರಬಹುದೆಂದು ತಿಳಿದಿದ್ದರು. ಇಷ್ಟು ಜನ ಮೀಸೆಹೊತ್ತ ಗಂಡಸರು ದಂಡೆಗಿದ್ದರೂ ಹುಡುಗ

ನನ್ನೂ ಸ್ತ್ರೀಯನ್ನೂ ನದೀಪಾಲು ಮಾಡಿದರೆಂಬ ಅಪಕೀರ್ತಿಯು ಬರುವದೆಂದು ದಂಡೆಯಲ್ಲಿದ್ದ ಪುರುಷವೃಂದವು ಕ್ಲೇಶಪಡತೊಡಗಿತು ಈಗ ಮಾತು ಮಿಂಚಿಹೋಗಿತ್ತು. ಇನ್ನು ಮೇಲೆ ಎಂಥವನಿಂದಾದರೂ ತೆಗೆಯಲಿಕ್ಕೆ ಬಾರದಂಥ ಸ್ಥಳಕ್ಕೆ ಆ ಹುಡುಗನೂ ಸ್ತ್ರೀಯೂ ಹೋಗಿದ್ದರು. ಧೈರ್ಯ ಮಾಡಿ ಬಿದ್ದರೆ ತಮ್ಮ ಗತಿಯಾದರೂ ಹಾಗಯೇ ಆಗುವದೆಂದು ಎಲ್ಲರೂ ತಿಳಿದರು. ಆಗ ಅವರು — ಕೃಷ್ಣಾಬಾಯಿ! ಆ ಎರಡೂ ಜೀವಗಳನ್ನು ಬದುಕಿಸು!'' ಎಂದು ನದಿಯನ್ನೂ ಪ್ರತಿಸಂಗಮನಿವಾಸಿಯಾದ ಕೃಷ್ಣಾಬಾಯಿಯನ್ನೂ ಪ್ರಾರ್ಥಿಸತೊಡಗಿದರು.

ಕೊನೆಗೆ ಧೈರ್ಯವೇ ಚದುರೆಯ ಕೈಹಿಡಿಯಿತು ಅವಳು ವಸ್ತ್ರದ ಪರಿವೆ ಬಿಟ್ಟಳು ಹುಡುಗನು ತನ್ನನ್ನು ಬಿಟ್ಟು ಪ್ರವಾಹಕ್ಕೆ ಹೋಗುವನೆಂಬ ಭಯವೂ ಅವಳಿಗಿದ್ದಿಲ್ಲ. ಅವಳು ಎರಡೂ ಕೈಗಳಿಂದ ನೀರು ಬಗೆಯುತ್ತ ದಂಡೆಯ ಕಡೆಗೆ ಸಾಗಿದಳು ಅಲ್ಪಾವಧಿಯಲ್ಲೇ ಅವಳು ದಂಡೆಯ ಸಮೀಪಕ್ಕೆ ಬಂದಳು ಜನರು ಆನಂದಭರಿತರಾದರು ಈಸುವ ಭರದಲ್ಲಿ ಅವಳ ಮೈಮೇಲಿನ ವಸ್ತ್ರವು ಕೆಳಗೆ ಬಿದ್ದಿತ್ತು. ಉಟ್ಟ ಸೀರೆಯ ಬಹುಭಾಗವು ಬಿಚ್ಚಿಹೋಗಿತ್ತು. ಆದ್ದರಿಂದ ಒಮ್ಮೆಲೆ ನೀರುಬಿಟ್ಟು ದಂಡೆಗೆ ಹೋಗಲಿಕ್ಕೆ ಅವಳಿಗೆ ಲಜ್ಜೆಯಾಗತೊಡಗಿತು. ಅವಳು ಎದೆಮಟ್ಟ ನೀರಲ್ಲಿ ನಿಂತು ತನ್ನ ವಸ್ತ್ರವನ್ನು ಸಾವರಿಸಿಕೊಂಡಳು. ಅನಂತರ ಅವಳು ಬಾಲಕನೊಡನೆ ದಂಡೆಗೆ ಬಂದಳು. ಅವಳು ಆ ಹುಡುಗನನ್ನು ಕೆಳಗಿಳಿಸಿ ದಂಡೆಗಿಟ್ಟಿದ್ದ ತನ್ನ ಒಣ ಸೀರೆಯನ್ನು ತರಲಿಕ್ಕೆ ಅಲ್ಲಿದ್ದ ಒಬ್ಬ ಸ್ತ್ರೀಯಳಿಗೆ ಹೇಳಿದಳು. ಆ ಸ್ತ್ರೀಯು ಅವಳ ಸೀರೆಯನ್ನು ತಂದುಕೊಟ್ಟಳು. ಚದುರೆಯು ತನ್ನ ಸೀರೆಯಿಂದ ಆ ಹುಡುಗನ ಮೈ ಒರೆಸಿ, ಸಮಾಧಾನ ಮಾಡತೊಡಗಿದಳು. ಆ ಹುಡುಗನು ಒಂದೇಸವನೆ "ಅವ್ವಾ, ಅವ್ವಾ!" ಎಂದು ಅಳತೊಡಗಿದ್ದನು.

ಚದುರೆಯು ಸೀರೆಯನ್ನುಟ್ಟುಕೊಂಡು ಆ ಹುಡುಗನ ಬಳಿಗೆ ಬಂದು: ‟ಮಗೂ, ಅಳಬೇಡ. ನಿಮ್ಮ ಅವ್ವನು ಎಲ್ಲಿರುವಳು ಹೇಳು. ನಾನು ಅವಳ ಬಳಿಗೆ ನಿನ್ನನ್ನು ಕಳುಹಿಸುವೆನು.'' ಎಂದು ಹೇಳಿದಳು. ಬಾಲಕನು ಅವಳ ಮಾತಿಗೆ ಉತ್ತರ ಕೊಡದೆ ಒಂದೇಸವನೆ ಅಳುತ್ತಲಿದ್ದನು. ಆಗ ಅವಳು ಅಲ್ಲಿಯ ಜನರನ್ನು ಕುರಿತು:—"ಈ ಹುಡುಗನ ತಾಯಿ-ತಂದೆಗಳು ಇಲ್ಲಿ ಇಲ್ಲವೇನು?" ಎಂದು ವಿಚಾರಿಸಿದಳು.

ಆ ಹುಡುಗನು ಚದುರೆಯ ಮಗನೆಂದೇ ಆ ಜನರ ಗ್ರಹಿಕೆಯಾಗಿತ್ತು;

ಆದರೆ ಅವಳೇ ಈ ಪ್ರಶ್ನೆ ಮಾಡಿದ್ದರಿಂದ ಆ ಹುಡುಗನು ಅವಳ ಮಗನಲ್ಲ ವೆಂದು ಎಲ್ಲರಿಗೂ ನಂಬಿಗೆಯಾಯಿತು. ಸಣ್ಣ ಹುಡುಗನನ್ನು ನದಿಗೆ ಕಳು ಹಿಸಿ ಮನೆಯಲ್ಲಿ ಕುಳಿತ ತಾಯಿ-ತಂದೆಗಳನ್ನು ಅವರೆಲ್ಲರೂ ಆಡಿಕೊಳ್ಳ ತೊಡಗಿದರು

"ಈ ಹುಡುಗನು ನಿಮ್ಮ ಮಗನೆಂದೇ ನಾವು ತಿಳಿದಿದ್ದೆವು." ಎಂದು ನೆರೆದ ಸ್ತ್ರೀಯರಲ್ಲೊಬ್ಬಳು ನುಡಿದಳು.

"ಛೀ! ಇವನು ನನ್ನ ಮಗನಲ್ಲ. ನೋಡಿದಿರಾ? ಈ ಸಣ್ಣ ಮಗುವನ್ನು ನದಿಗೆ ಬಿಟ್ಟು ಇವನ ತಾಯಿ-ತಂದೆಗಳು ಮನೆಯಲ್ಲಿ ಹೇಗೆ ಸ್ವಸ್ಥವಾಗಿ ಕುಳಿ ತಿರುವರು! ಹುಡುಗರನ್ನು ಜತನ ಮಾಡುವ ರೀತಿಯೇ ಇದು?" ಎಂದು ಚದುರೆಯು ನುಡಿದು, ಆ ಹುಡುಗನನ್ನು ಕುರಿತು;—"ಬಾಲಕಾ, ನೀನು ಯಾರ ಮಗನು?"

"ನಾನು ನನ್ನ ಅಪ್ಪನ ಮಗನು" ಎಂದು ಆ ಹುಡುಗನು ಉತ್ತರ ವಿತ್ತನು.

"ನೀನು ಇಲ್ಲಿ ಯಾರೊಡನೆ ಬಂದೆ?"

"ಅಪ್ಪನೊಡನೆ."

"ನಿನ್ನ ತಂದೆಯು ಎಲ್ಲಿರುವನು?" ಎಂದು ಚದುರೆಯು ನುಡಿಯುವಷ್ಟ ರಲ್ಲಿ ವಾಡೆಯ ಕಡೆಗೆ ಹೋದ ಬೈರಾಗಿಯು ಓಡುತ್ತ ಅಲ್ಲಿಗೆ ಬಂದನು ಕೂಡಲೆ ಆ ಹುಡುಗನು ಬೈರಾಗಿಗೆ ತೆಕ್ಕೆ ಬಿದ್ದು ಬೋರಾಡಿ ಅಳತೊಡ ಗಿದನು. ಕೂಡಿದ ಜನರು ಆ ಬೈರಾಗಿಯೇ ಆ ಹುಡುಗನ ತಂದೆಯೆಂದು ತಿಳಿದರು ಸಣ್ಣ ಹುಡುಗನನ್ನು ನದಿಯಲ್ಲಿ ಬಿಟ್ಟು ಹೋದವನ್ನಕ್ಕಾಗಿ ಜನರು ಅವನನ್ನು ಹಳಿಯತೊಡಗಿದರು.

"ಇವನು ನಿಮ್ಮ ಮಗನೇನು?" ನೆರೆದವರಲ್ಲೊಬ್ಬನು ಬೈರಾಗಿಯನ್ನು ಕೇಳಿದನು.

'ಹೌದು.' ಎಂದು ಬೈರಾಗಿಯು ಹೇಳಿದನು.

"ಎದೆಗಾರ್ತಿಯಾದ ಈ ಸ್ತ್ರೀಯು ಜೀವದ ಹಂಗುದೊರೆದು ನದಿ ಯಲ್ಲಿ ಬಿದ್ದು, ತಿರುಗುಣಿಮುಡುವನ್ನು ಸಮೀಪಿಸಿದ್ದ ನಿನ್ನ ಮಗನನ್ನು ತಂ- ದಳು.' ಎಂದು ಒಬ್ಬ ಸ್ತ್ರೀಯು ನುಡಿದು, ಚದುರೆಯನ್ನು ಅಂಗುಲೀನಿರ್ದೇಶ ಮಾಡಿ ತೋರಿಸಿದಳು. ಬೈರಾಗಿಯು ಮುಖವೆತ್ತಿ ಚದುರೆಯನ್ನು ಕೃತಜ್ಞತಾ ಪೂರ್ಣ ದೃಷ್ಟಿಯಿಂದ ನೋಡತೊಡಗಿದನು. ವಾಡೆಯ ಕಡೆಗೆ ಹೋದ ಬೈರಾಗಿಯೇ ಇವನೆಂದು ಚದುರೆಯೂ ಗುರುತಿಸಿದಳು ಅವಳು ಆ ತರುಣ

ಬೈರಾಗಿಯ ಮುಖವನ್ನು ದಿಟ್ಟಿಸಿ ನೋಡಹತ್ತಿದಳು. ಬೈರಾಗಿಯ ದೃಷ್ಟಿಯಾದರೂ ಅವಳ ಮುಖದಲ್ಲಿ ನಟ್ಟಿತ್ತು. ಕೆಲವು ವೇಳೆಯಲ್ಲಿ ಕೃತಜ್ಞತೆಯಿಂದೊಡಗೂಡಿದ ಅವನ ದೃಷ್ಟಿಯು ವಿಪರ್ಯಸ್ತವಾಯಿತು. ಕಣ್ಣುಗಳು ಆರಕ್ತವಾದವು. ಮುಖವು ಕ್ರೂರಚರ್ಯೆಯುಳ್ಳದ್ದಾಯಿತು. ಧರಣೀಕಂಪದ ಬಲವಾದ ಧಕ್ಕೆಹತ್ತಿದೊಡನೆಯೆ ಆ ಪ್ರದೇಶದೊಳಗಿನ ಭೂಮಿಯು ವಿಪರ್ಯಸ್ತವಾಗಿ, ಸರೋವರಗಳಿದ್ದಲ್ಲಿ ಮರಡಿಗಳೂ, ಮರಡಿಗಳಿದ್ದಲ್ಲಿ ಕೊಳ್ಳಗಳೂ ಉತ್ಪನ್ನವಾಗುವಂತೆ ಆ ತರುಣ ಬೈರಾಗಿಯ ಮನಃಸ್ಥಿತಿಯು ಅತಿರೇಕವಾದ ಅಭ್ಯಂತರ ಹೊಂದಿತು. ಪುತ್ರನಿಗೆ ಜೀವದಾನ ಮಾಡಿದ ಚದುರೆಯು ಮೊದಲು ಆ ಬೈರಾಗಿಗೆ ದೇವತಾಸ್ವರೂಪಳಾಗಿ ಕಾಣುತ್ತಿದ್ದಳು; ಆದರೆ ಈಗ ದುಷ್ಮನಳಾಗಿ ತೋರಹತ್ತಿದಳು. ಸಂತಾಪಾತಿಶಯದಿಂದ ಅವನ ಕಣ್ಣುಗಳು ಕಿಡಿಗಳನ್ನು ಕಾರುತ್ತಿರುವಂತೆ ಭಾಸವಾಗತೊಡಗಿತು ಹೀಗೆ ಅವನ ಮನೋವೃತ್ತಿಯು ವಿಪರ್ಯಸ್ತ ಹೊಂದಲಿಕ್ಕೆ, ಯಾವದೊಂದು ಬಲವತ್ತರವಾದ ಕಾರಣವಿರಬಹುದು. ಹಾಗಿರದಿದ್ದರೆ ಉಪಕೃತಿ ಮಾಡಿದವಳ ಮೇಲೆ ಅವನು ಸಂತಪ್ತನಾಗುವ ಕಾರಣವೇನು? ಆ ಬೈರಾಗಿಯು ಚದುರೆಯನ್ನು ತಿರಸ್ಕಾರ ಪೂರ್ಣ ದೃಷ್ಟಿಯಿಂದ ನೋಡುತ್ತ, ತನ್ನ ಮಗನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ನೌಕೆಯ ಕಡೆಗೆ ತೆರಳಿದನು; ಹಾಗು ಅವನು ಮಗನೊಡನೆ ನೌಕೆಯಲ್ಲಿ ಕುಳಿತು, ಅಲ್ಪಾವಧಿಯಲ್ಲೇ ದೃಷ್ಟಿಕ್ಷೇತ್ರವನ್ನು ಮೀರಿ ಹೊರಟು ಹೋದನು.

ಉಪಕಾರ ಮಾಡಿದವಳನ್ನು ಕೊಂಡಾಡುವದನ್ನು ಬಿಟ್ಟು, ಸಂತಾಪದಿಂದ ನೋಡತೊಡಗಿದ್ದ ಆ ಬೈರಾಗಿಯ ವಿಚಿತ್ರ ಮನೋವೃತ್ತಿಯು ನೆರೆದ ಜನರಲ್ಲಿ ಸೋಜಿಗವನ್ನುಂಟುಮಾಡಿತು. ಅವನು ಬಹಳಮಾಡಿ ಚದುರೆಯ ಗುರುತಿನವನಿರಬಹುದೆಂದೂ, ಅವಳಿಂದ ಏನಾದರೊಂದು ನಷ್ಟಾನಿಷ್ಟ ಹೊಂದಿದವನಿರಬಹುದೆಂದೂ ಜನರ ಭಾವನೆಯಾಯಿತು. ರೂಪವತಿಯೂ ಚಂಚಲೆಯೂ ಆದ ಚದುರೆಯ ಪ್ರಣಯಭಂಗದಿಂದ ಅವನ ಮನಃಸ್ಥಿತಿಯು ಹೀಗಾಗಿರಬಹುದೆಂದೂ, ಮೊದಲು ಇವಳು ಅವನನ್ನು ಪ್ರಣಯಜಾಲದಲ್ಲಿ ತೊಡಗಿಸಿಕೊಂಡವಳಿರಬಹುದೆಂದೂ ಕೆಲವರು ತರ್ಕಮಾಡಿದರು. ಹೀಗೆ ಜನರು ತಮ್ಮ ತಮ್ಮ ಬುದ್ಧಿ-ಶಕ್ತಿಗಳಂತೆ ತರ್ಕ-ವಿತರ್ಕ ಮಾಡುತ್ತ ನಿಂತರು. ಅವರು ಚದುರೆಯನ್ನು ಗುರುತಿಸಿದರು; ಯಾಕಂದರೆ, ಆ ಜನರಲ್ಲಿ ಕೆಲವು ಜನರು ಅವಳನ್ನು ನೋಡಿದ್ದರು. ಪ್ರತಿನಿಧಿಯ ಮನೆಯಲ್ಲಿ ಚದುರೆಯೆಂಬ ದಾಸಿಯಿರುವಳೆಂಬ ಹೆಸರನ್ನಷ್ಟು ಕೇಳಿದವರು ಇಂದು ಅವಳನ್ನು ಪ್ರತ್ಯಕ್ಷ

ನೋಡಿ ಮುಖಪರಿಚಯ ಮಾಡಿಕೊಂಡರು. ಪರಿಚಯದ ಸ್ತ್ರೀಯರು ಅವಳ ಬಳಿಗೆ ಹೋಗಿ:—"ಆ ಬೈರಾಗಿಯು ಯಾರು? ಅವನು ಉಪಕಾರ ಕರ್ತಳಾದ ನಿನ್ನನ್ನು ಕಿಡಿಗಣ್ಣಿನಿಂದ ನೋಡುತ್ತ ಹೋದ ಕಾರಣವೇನು?" ಮೊದಲಾದ ಪ್ರಶ್ನೆ ಮಾಡಿದರು. ಚದುರೆಗಾದರೂ ಆ ಬೈರಾಗಿಯ ಪರಿಚಯವಾಗಿದ್ದಿಲ್ಲ. ಅವನ ವಿಚಿತ್ರ ವರ್ತನವನ್ನು ನೋಡಿ ಉಳಿದವರಂತೆ ಆಕೆಯೂ ಬೆರಗಾಗಿದ್ದಳು; ಆದ್ದರಿಂದ ಜನರ ಪ್ರಶ್ನೆಗೆ ಅವಳು ಕಿವಿಯ ಮೇಲೆ ಕೈಯಿರಿಸಿಕೊಂಡಳು. ಅವಳು ಬುದ್ಧಿಪೂರ್ವಕವಾಗಿ ನಿಜಸ್ಥಿತಿಯನ್ನು ಒಚ್ಚಿಡುವಳೆಂದೂ, ಬೈರಾಗಿಯ ಹಾಗು ಚದರೆಯ ನಡುವೆ ಏನಾದರೂ ಸೂಕ್ಷ್ಮಸಂಬಂಧವಿರಲಿಕ್ಕೆಬೇಕೆಂದೂ ಜನರು ಊಹಿಸಿದರು.

ಜನರ ಪ್ರಶ್ನೆಪರಂಪರೆಗಳಿಗೆ ಉತ್ತರಕೊಡಲಿಕ್ಕೆ ಬೇಸತ್ತು, ಚದುರೆಯು ಅಲ್ಲಿ ನಿಲ್ಲಲಾರದೆ ಲಗುಬಗೆಯಿಂದ ವಾಡೆಯ ಕಡೆಗೆ ತೆರಳಿದಳು.

---

## ಒಡಕೇ ಕೆಡಕಿನ ಮೂಲ.



ಪ್ರಭಾವಶಾಲಿಯಲ್ಲದ ಮನುಷ್ಯನು ಮಹತ್ವಾಕಾಂಕ್ಷಿಯಾಗಿದ್ದರೆ, ಕುಮಾರ್ಗಗಾಮಿಯಾಗಿ ತನ್ನ ಅಭ್ಯುದಯವನ್ನು ಮಾಡಿಕೊಳ್ಳಲಿಕ್ಕೆ ಸಾಹಸ ಮಾಡುವನು. ಸಾತಾರೆಯ ಛತ್ರಪತಿಯ ಪಂತಪ್ರತಿನಿಧಿಯು ಇಂಥ ವರ್ಗದವನೇ ಆಗಿದ್ದನು. ಅವನು ಮಹತ್ವಾಕಾಂಕ್ಷಿಯಾಗಿದ್ದನೇನೋ ನಿಜವು! ಆದರೆ ಆ ಕಾಂಕ್ಷೆಗೆ ಸರಿಯಾಗಿ ಆತ್ಮವಿಶ್ವಾಸ, ಕರ್ತೃತ್ವಶಕ್ತಿ, ಕರ್ತವ್ಯತತ್ಪರತೆ ಮೊದಲಾದ ಸದ್ಗುಣಗಳು ಅವನಲ್ಲಿದ್ದಿಲ್ಲ. ಇಂದಿಗೆ ಸುಮಾರು ಹದಿನಾಲ್ಕು ವರ್ಷಗಳಿಂದ ಅವನು ಪ್ರತಿನಿಧಿಪದದ ಮೇಲಿದ್ದರೂ ಅವನಿಂದ ಒಂದಾದರೂ ರಾಷ್ಟ್ರಹಿತದ ಕಾರ್ಯಗಳಾಗಿದ್ದಿಲ್ಲ. ಅದಕ್ಕೆ ವಿಪರೀತವಾಗಿ ಅವನಿಂದ ರಾಷ್ಟ್ರವಿಘಾತಕ ಕೃತ್ಯಗಳು ಮಾತ್ರ ಹೇರಳವಾಗಿ ಜರುಗಿದ್ದವು ಸ್ವರಾಜ್ಯದ ಉಪ್ಪು ಉಣ್ಣುತ್ತಿದ್ದ ಅವನು, ಸ್ವರಾಜ್ಯಘಾತ ಮಾಡಿ ತನ್ನ ವೈಭವದ ಹೆಚ್ಚಳಮಾಡಿಕೊಳ್ಳಬೇಕೆಂದು ಕಾರಸ್ಥಾನ ನಡೆಯಿಸಿದ್ದನು. ಇವನ ತಂದೆಯಾದ ಪರಶುರಾಮಪಂತನು ಶ್ರೀಪತಿರಾಯನ ಪೂರ್ವದಲ್ಲಿ ಪ್ರತಿನಿಧಿಯಾಗಿದ್ದನು. ಇವನಾದರೂ ಮಗನಂತೆ ಸ್ವಾರ್ಥಪರಾಯಣನೇ ಆಗಿದ್ದನು; ಆದರೆ ಅವನಲ್ಲಿ ಕರ್ತೃತ್ವಶಕ್ತಿ, ಮುತ್ಸದ್ದಿತನ ಮೊದಲಾದ ಅಲೌಕಿಕ ಗುಣಗಳಾದರೂ ಇದ್ದವು. ಯಾವ ಹಿಂದುಪದಪಾತಶಾಹಿಯು ತನ್ನ ಭಾಗ್ಯೋದಯಕ್ಕೆ ಕಾರಣವಾಯಿತೋ, ಅದರ ಕಲ್ಯಾಣಕ್ಕಾಗಿ ಅವನ

ಕರ್ತವ್ಯಪ್ರಭಾವವು ಬಹಳವಾಗಿ ವೆಚ್ಚವಾಗಲಿಲ್ಲ. ಶ್ರೀಪತಿರಾಯನಲ್ಲಿ ತಂದೆಯಲ್ಲಿಯ ಯಾವ ಉತ್ತಮ ಗುಣಗಳೂ ಇದ್ದಿಲ್ಲ; ಆದರೆ ರಾಷ್ಟ್ರವಿಘಾತಕ ಉದ್ಯೋಗ-ವ್ಯವಸಾಯಗಳಿಂದ ತನ್ನ ದೈವವನ್ನು ಸರ್ವೋತ್ಕೃಷ್ಟ ಮಾಡಲಾರಂಭಿಸಿದ್ದನು.

ವಾಸ್ತವವಾಗಿ ಪಂತಪ್ರತಿನಿಧಿಪದವು ಪೇಶವೆ ಪದಕ್ಕಿಂತ ಹೆಚ್ಚು ಗೌರವದ್ದೂ ಹೆಚ್ಚು ವೇತನದ್ದೂ ಆಗಿತ್ತು; ಆದರೆ ಬಾಳಾಜಿ ವಿಶ್ವನಾಥ ಭಟ್ಟನು ಪೇಶ್ವೆಯಾದ ಮೇಲೆ ಪ್ರತಿನಿಧಿಪದಕ್ಕೆ ಇಳಿಕೆಯ ಕಾಲವು ಪ್ರಾಪ್ತವಾಯಿತು. ಬಾಳಾಜಿ ವಿಶ್ವನಾಥನ ತರುವಾಯ ಅವನ ಹಿರಿಯ ಮಗನಾದ ಬಾಜೀರಾಯನಿಗೆ ಪೇಶವಾಯಿಯು ದೊರೆಯಬಾರದೆಂದು ಶ್ರೀಪತಿರಾಯನು ಬಲವಾಗಿ ವಿರೋಧವನ್ನುಂಟು ಮಾಡಿದನು. ಶಾಹೂಮಹಾರಾಜನು ಗುಣಗ್ರಾಹಿಯಿದ್ದುದರಿಂದ ಇವನ ಆಟವೇನೂ ನಡೆಯದೆ, ಬಾಜೀರಾಯನಿಗೆ ಪೇಶವಾಯಿಯ ವಸ್ತ್ರಗಳು ಕೊಡಲ್ಪಟ್ಟವು. ಅಂದಿನಿಂದಲೆ ಪ್ರತಿನಿಧಿಯು ಪೇಶವಾಯಿಯ ಕಟ್ಟಾ ವಿರೋಧಿಯಾದನು; ಹಾಗು ಮೊದಲಿನಿಂದಲೇ ಅವನಲ್ಲಿ ವಾಸಿಸಿದ್ದ ಮಾತ್ಸರ್ಯ ಮೊದಲಾದ ದುರ್ಗುಣಗಳಿಗೆ ಏರಿಕೆಯುಂಟಾಯಿತು. ಪೇಶವೆಯ ವೈರ ಬಳೆಯಿಸದೆ ಒಂದು ದಿನವನ್ನಾದರೂ ಅವನು ಕಳೆಯುತ್ತಿದ್ದಿಲ್ಲ. ವೀರೋಚಿತವಾದ ಗುಣಗಳಿಂದ ಖ್ಯಾತಿ ಹೊಂದುವಂತಹ ವ್ಯಕ್ತಿಯು ಅವನಿರಲಿಲ್ಲ; ಆದ್ದರಿಂದ ಅವನು ಇತ್ತೀಚೆಗೆ ಕುಮಾರ್ಗಗಾಮಿಯಾಗಿ ತನ್ನ ಅಭ್ಯುದಯ ಮಾಡಿಕೊಳ್ಳುವ ಹವಣಿಕೆ ಹಾಕಿದ್ದನು. ಶ್ರೀಪತಿರಾಯನು ತಂದೆಯಿಂದ ನಡೆದು ಬಂದ ಪೇಶವೆದ್ರೋಹ ಪರಂಪರೆಯನ್ನು ಒಳ್ಳೆಯ ಆಸಕ್ತಿಯಿಂದ ನಡೆಯಿಸ ಹತ್ತಿದನು. ಅವನು ಅಂತರಂಗದಲ್ಲಿ ಶತ್ರುಪಕ್ಷಕ್ಕೆ ಕೂಡಿ ಬಾಜೀರಾಯನ ವಿರುದ್ಧವಾಗಿ ಶಾಹೂರಾಜನ ಮುಂದೆ ಇಲ್ಲದ್ದೊಂದು ಚಾಡೀ ಹೇಳತೊಡಗಿದನು ನಿಜಾಮ, ಚಂದ್ರಸೇನ ಜಾಧವ, ತಾರಾಬಾಯಿ ಮೊದಲಾದ ಜನರೊಡನೆ ಅವನು ಯಾವಾಗಲೂ ಕಾರಸ್ಥಾನ ನಡೆಯಿಸಿ, ಶಾಹೂರಾಜನ ಮೇಲೆ ದಂಡೆತ್ತಿ ಬರಲಿಕ್ಕೆ ಅವರಿಗೆ ಪ್ರೋತ್ಸಾಹನೆ ಕೊಡುತ್ತಿದ್ದನು. ಬಾಜೀರಾಯನೇ ಶತ್ರುಪಕ್ಷವನ್ನು ಸೇರಿ ಗೊಂದಲವೆಬ್ಬಿಸುವನೆಂದು ಶಾಹೂರಾಜನ ಕಿವಿಯಲ್ಲಿ ಊದಿ, ಅವನ ಮನಸ್ಸನ್ನು ಕಲುಷಿತಗೊಳಿಸಲಿಕ್ಕೆ ಸಾಧ್ಯವಾದ ಮಟ್ಟಿಗೂ ಸಾಹಸ ಮಾಡುತ್ತಿದ್ದನು; ಆದರೆ ಸ್ವಾಮಿನಿಷ್ಠನೂ ಪ್ರಭಾವಶಾಲಿಯೂ ಪ್ರತಾಪನಿಧಿಯೂ ಆದ ಬಾಜೀರಾಯನ ಯಶಸ್ವಿಯಾದ ಕಾರಭಾರಕ್ಕೆ ಇವನ ಕೃತ್ಯಗಳು ಯಾವ ಅಪಶಕುನವನ್ನೂ ಮಾಡುತ್ತಿರಲಿಲ್ಲ. ಪ್ರತಿನಿಧಿಯು ಬೇರೆಯವರ ಸಲು

ವಾಗಿ ಅಗಿದ ತಗ್ಗಿನಲ್ಲಿ ಮೇಲಿಂದ ಮೇಲೆ ತಾನೇ ಬಿದ್ದು ಮುಖಭಂಗಿತ ನಾಗತೊಡಗಿದನು. ಅವನು ಸಾತಾರೆಯ ಸಿಂಹಾಸನದ ಸೇವಕನಾಗಿದ್ದರೂ ಗುಪ್ತರೀತಿಯಿಂದ ನಿಜಾಮು, ಸಂಭಾಜಿರಾಜ ಮೊದಲಾದ ಶತ್ರುಗಳ ಕಡೆಗೆ ಒಡೆದು, ಉಂಡಮನೆಯ ಗಳ ಎಣಿಸುವ ವ್ಯವಸಾಯದಲ್ಲಿ ಮೈಯುಂಡಿದ್ದನು; ಆದರೆ ಬಾಜೀರಾಯನು ಇಂತಹ ಗೊಂಬೆಗಳನ್ನು ಕುಣಿಸುತ್ತ, ಹಿಂದುಪದ ಪಾತಶಾಹಿಯನ್ನು ಮುಳುಗಿಸಬೇಕೆಂದು ಕಂಕಣ ಕಟ್ಟಿದ ನಿಜಾಮನನ್ನು ಪಾಲಖೇಡದ ಒಳಿಯಲ್ಲಿ ಸೋಲಿಸಿ ಜರ್ಜರಿತನನ್ನಾಗ ಮಾಡಿದನು. ಆಗ ನಿಜಾಮನು ಮೂಗನ್ನು ಕೈಯಲ್ಲಿ ಹಿಡಿದುಕೊಂಡು, ಪೇಶವೆಗೆ ಶರಣು ಬಂದು ಒಪ್ಪಂದ ಮಾಡಿಕೊಂಡನು. ಈಗ ಮಾತ್ರ ಕೊಲ್ಹಾಪುರದ ಸಂಭಾಜಿರಾಜನು ನಿರಾಧಾರಿಯಾದನು. ಅಂತರಂಗದಲ್ಲಿ ಶತ್ರುಗಳ ಕಡೆಗೆ ಒಡೆದು, ಬಾಜೀ ರಾಯನನ್ನು ನಿಸ್ತೇಜನನ್ನಾಗಮಾಡಬೇಕೆಂದು ಹವಣಿಸುತ್ತಿದ್ದ ಶ್ರೀಪತಿ ರಾಯನ ಕಾರಸ್ಥಾನವೂ ಮಹತ್ವಾಕಾಂಕ್ಷೆಯೂ ನಿಷ್ಫಲವಾದವು. ಕಡೆಗೆ ಈ ತನ್ನ ಕೃಷ್ಣಕೃತ್ಯಕ್ಕಾಗಿ ಶಾಹೂರಾಜನೆದುರಿಗೆ ಶ್ರೀಪತಿರಾಯನೇ ಮಾನ ಭಂಗಿತನಾಗಬೇಕಾಯಿತು. ಈ ಮೇರೆಗೆ ಎಲ್ಲ ಬಗೆಯಿಂದಲೂ ಹತಪ್ರಭ ನಾದ ಪ್ರತಿನಿಧಿಯು ತನ್ನ ರಾಕ್ಷಸೀ ಮಾನ-ಧನ ಲಾಲಸೆಯನ್ನು ಪೂರ್ತಿ ಮಾಡಿಕೊಳ್ಳುವದಕ್ಕಾಗಿ ವಾಮ ಮಾರ್ಗಾವಲಂಬಿಯಾಗಬೇಕೆಂದು ಯೋ ಚಿಸಿದನು. ಅವನಿಗೆ ಈ ಕಾರ್ಯದಲ್ಲಿ ಯಮಾಜಿ ಶಿವದೇವನಂತಹ ಸಂ- ಗಡಿಗನೂ ದೊರೆತಿದ್ದನು. ಈಗ ಅವನು ದೇವರನ್ನು ಬಿಟ್ಟು, ಭೂತಪಿಶಾಚಿ ಗಳ ಭಜನೆ ಮಾಡಹತ್ತಿದ್ದನು. ಪಾಲಿಯ ಖಂಡೋಬ, ತಾರಳೀತೀರದ ವಿಂಧ್ಯವಾಸಿನಿ, ಉಂಬ್ರಜ-ಮಸೂರಗಳಲ್ಲಿಯ ಮಾರುತಿ, ಸಾತಾರೆಯೊಳಗಿನ ಗಣಪತಿ-ಕೋಟೇಶ್ವರ, ಮಚ್ಛೇಂದ್ರಗಡದೊಳಗಿನ ಮಚ್ಛೇಂದ್ರನಾಥಹಾಗು ಗೋ- ರಖನಾಥ, ನರಸಿಂಹಪುರದ ನಾರಸಿಂಹ, ಬಹೇಬೋರಗಾಂವದ ರಾಮಲಿಂಗ ಮೊದಲಾದ ದೇವತೆಗಳೂ ಸಾಧುಸತ್ಪುರುಷರ ಸಮಾಧಿಗಳೂ ಭಾವಿಕರ ಕೂಗಿಗೆ ನಿಶ್ಚಯವಾಗಿ ಫಲದಾಯಿಗಳಾಗಿದ್ದರೂ, ಇಂಥ ಸಾಕ್ಷಾತ್ಕಾರೀ ಸ್ಥಾನ ಗಳ ಅಭಿಲಾಷೆಯು ಶ್ರೀಪತಿರಾಯನಿಗಾಗಲಿ, ಅವನ ಮುತಾಲಿಕನಾದ ಯಮಾಜಿರಾಯನಿಗಾಗಲಿ ಇದ್ದಿಲ್ಲ. ಈ ದೇವತೆಗಳು ಭಕ್ತಿಪೂರ್ಣರಾದ ಭಕ್ತರ ಕೂಗನ್ನು ಮಾತ್ರ ಕೇಳುವವು. ನಿಜವಾದ ಭಕ್ತರು ತಮ್ಮ ದುಷ್ಟ ಮನೋರಥಗಳನ್ನು ಪೂರ್ತಿಗೊಳಿಸಿಕೊಳ್ಳಲಿಕ್ಕೆ ದೇವರನ್ನು ಎಂದೂ ದಾ- ಕ್ಷಿಣ್ಯಕ್ಕೊಳಪಡಿಸುವದಿಲ್ಲ. ಸ್ವಾರ್ಥೀ ಭಕ್ತರಿಂದ ಕೊಬ್ಬರಿ-ಬೆಲ್ಲದ ಇಲ್ಲವೆ ಕುರಿ-ಕೋಳಿಗಳ ನೈವೇದ್ಯ ಹೊಂದಿ, ಅವರ ದುಷ್ಟ ಮನೋರಥಗಳನ್ನು

ಈಡೇರಿಸಲಿಕ್ಕೆ ಯಾವ ದೇವರೂ ಸಿದ್ಧರಾಗುವದಿಲ್ಲ; ಆದ್ದರಿಂದಲೇ ಪ್ರತಿನಿಧಿ-ಮುತಾಲಿಕರಿಗೆ ಇಂತಹ ದೇವರ ಅವಶ್ಯಕತೆಯೆನಿಸಿದ್ದಿಲ್ಲ. ಬಾಯಿಂದಾಡುವದೊಂದೇ ತಡ, ಆ ಮಾತನ್ನು ಸಕ್ರಿಯ ಸಾಫಲ್ಯಗೊಳಿಸುವ ಅದ್ಭುತವಾದ ಶಕ್ತಿಯ ಆರಾಧನೆ ಮಾಡುವದು ಅವರಿಗೆ ಬೇಕಾಗಿತ್ತು. ಅಂತಹ ಶಕ್ತಿಯು ಪಿಶಾಚಿ ಶಕ್ತಿಯೇ ಎಂಬದು ಅವರಿಗೆ ಕೆಲವು ವಾಮಮಾರ್ಗೀಯ ಸಾಧು-ಬೈರಾಗಿಗಳಿಂದ ಗೊತ್ತಾಗಿತ್ತು. ಅಂತಹ ಸಾಧುಗಳಲ್ಲಿ ರಾಮದಾಸನೆಂಬವನು ಇತ್ತೀಚೆಗೆ ಅತ್ಯಂತ ಪ್ರಖ್ಯಾತನಾಗಿದ್ದನು. ಅವನನ್ನು ಕರ್ನಾಡಕ್ಕೆ ಕರೆಯಿಸಿ ಕಾರ್ಯ ಸಾಧನೆ ಮಾಡಿಕೊಳ್ಳಬೇಕೆಂದು ಯಮಾಜಿರಾಯನು ಶ್ರೀಪತಿರಾಯನಿಗೆ ಬೋಧಿಸತೊಡಗಿದ್ದನು. ಆಷಾಢ ಶುದ್ಧ ಏಕಾದಶಿಯ ಪರ್ವಕಾಲದಲ್ಲಿ ಅವರು ಇದೇ ವಿಷಯವಾಗಿ ಪ್ರಾತಃಕಾಲದಿಂದ ಘನವಾದ ವಿಚಾರ ಮಾಡಹತ್ತಿದ್ದರು.

"ಶ್ರೀಮಂತರೇ!" ಯಮಾಜಿರಾಯನು ಗಂಭೀರವಾಣಿಯಿಂದ—"ನೀವು ಆ ದೇವರ್ಷಿಗಳನ್ನು ಕರೆಯಿಸಿದರೆ ನಿಮ್ಮ ಮನೋಭಿಲಾಷೆಯು ಪೂರೈಸುವದೆಂದು ಖಂಡಿತವಾಗಿ ಹೇಳುವೆನು"

"ಕರೆಯಿಸಲಿಕ್ಕೆ ಅಡ್ಡಿಯಿಲ್ಲ." ಎಂದು ಹೇಳಿ ಶ್ರೀಪತಿರಾಯನು ಸ್ವಲ್ಪಹೊತ್ತು ವಿಚಾರಮಾಡಿ—"ಯಾವದೊಂದು ಕಾರ್ಯಕ್ಕೆ ಕೈ ಹಾಕಿದ ಮೇಲೆ ಅಯಶಸ್ವಿಗಳಾದರೆ ಒಳಿತಲ್ಲ."

"ನೀವು ಯೋಚನೆ ಮಾಡಬೇಡಿರಿ. ನನಗೆ ಅವರ ಬಗ್ಗೆ ಚನ್ನಾಗಿ ನಂಬಿಗೆಯಾಗಿದೆ. ವಿರೂಬಾಯಿಯ ಮಗನು ಎತ್ತಿಕೊಂಡು ಹೋದಂತೆ ಹೇಗೆ ಹೊದನೆಂಬದು ನಿಮಗೆ ಗೊತ್ತಿಲ್ಲವೆ? ಚಿಮಣಾಜಿ ಅಪ್ಪಾನ ಹೆಂಡತಿಯಾದ ರಖಮಾಬಾಯಿಯು ಮೃತಳಾದದ್ದನ್ನು ನೀವು ಕೇಳಿಲ್ಲವೆ? ಶಾಹೂರಾಜನ ವಂಶವು ಅಭಿವೃದ್ಧಿಯಾಗದಿದ್ದುದನ್ನು ನೀವು ಬಲ್ಲಿರಿ. ಇವೆಲ್ಲವುಗಳಿಗೆ ಯಾರು ಕಾರಣರು? ದೇವರ್ಷಿ ರಾಮದಾಸರು ಬೇಕಾದಂಥ ಕಾರ್ಯಗಳನ್ನು ಈಡೇರಿಸುವರು. ಅವರು ತಮ್ಮ ಅಭಿಲಾಷೆಯನ್ನು ಧ್ಯಾನಿಸಿ ಅನುಷ್ಠಾನಮಾಡತೊಡಗಿದರೆಂದರೆ, ಅಲ್ಪಾವಧಿಯಲ್ಲಿ ಎಂಥ ಕಾರ್ಯಗಳಾದರೂ ಈಡೇರುವವು. ಇತ್ತೀಚೆಗೆ ಶಾಹೂರಾಜರ ರಾಣಿಯರಾದರೂ ರಾಮದಾಸರ ಸೇವೆಗೆ ತೊಡಗಿರುವರು. ಕೊಲ್ಹಾಪುರದ ಅರಮನೆಯಲ್ಲಿ ಸಹ ಆ ದೇವರ್ಷಿಗಳು ತಮ್ಮ ವರ್ಚಸ್ಸು ಕೆಡಹಿರುವರೆಂದು ಚಂದ್ರಸೇನ ಜಾಧವನು ಹೇಳಿದನು. ಅವನಾದರೂ ಆ ಸಾಧುಗಳ ಪರಮ ಶಿಷ್ಯನಾಗಿರುವನಂತೆ! ನೀವು ರಾಮದಾಸರನ್ನು ಕರೆಯಿಸಿರಿ. ಮೊದಲು ಪೇಶವಾಯಿಯನ್ನು

ವಿಧ್ವಂಸಗೊಳಿಸಬೇಕು. ಅನಂತರದಲ್ಲಿ ಛತ್ರಪತಿಯ ಸಿಂಹಾಸನಕ್ಕೆ ಕೈ ಹಚ್ಚಬೇಕು.''

ಶ್ರೀಪತಿರಾಯನು ಯಮಾಜಿರಾಯನ ಈ ಮಾತುಗಳನ್ನು ಕೇಳಿ ಬೆರಗಾದನು. ಆಗ ಅವನು ವಿಸ್ಮಯವಾಣಿಯಿಂದ:—''ಯಮಾಜಿರಾಯರೇ, ಹಾಗಾದರೆ ಆ ದೇವರ್ಷಿಗಳು ಕರ್ತುಮಕರ್ತುಮನ್ಯಥಾಕರ್ತುಂ ಶಕ್ತಿಯವರಿರುವರೆಂದಂತಾಯಿತು!''

"ನಿಸ್ಸಂದೇಹ, ನಿಸ್ಸಂದೇಹ!" ಯಮಾಜಿಯು ಒಳ್ಳೇ ಆಢ್ಯತೆಯಿಂದ ನುಡಿದನು

ಶ್ರೀಪತಿರಾಯನು ಏನು ಮಾಡಬೇಕು, ಹೇಗೆ ಮಾಡಬೇಕು ಎಂಬ ಯೋಚನೆಗೊಳಗಾದನು. ಆಗ ಯಮಾಜಿರಾಯನು:—''ಶ್ರೀಮಂತರೇ, ಇಷ್ಟೇಕೆ ಯೋಚಿಸುವಿರಿ? ಕೆಲಸವು ಇಡೇರಿದ ಮೇಲೆ ಅವರಿಗೆ ಸಂಭಾವನೆ ಕೊಡಬಹುದು. ನೀವು ಆ ದೇವರ್ಷಿಗಳನ್ನು ಕರಯಿಸಿದರೆ ನಿಶ್ಚಯವಾಗಿ ವೈಭವಸಂಪನ್ನರಾಗುವಿರಿ.''

ಯಮಾಜಿರಾಯನು ಈ ಮಾತಾಡುವಾಗ ರಾಧಾಬಾಯಿಯು ಅವರು ಕುಳಿತ ಸ್ಥಳದಿಂದ ಸ್ವಲ್ಪ ಅಂತರದ ಮೇಲಿದ್ದ ದೇವರ ಮನೆಗೆ ಬಂದಿದ್ದಳು. ದೇವರ್ಷಿಯ ವಿಷಯವು ಅವಳ ಕಿವಿಗೆ ಬಿದ್ದಕೂಡಲೆ ಅವಳು ಯಮಾಜಿರಾಯನನ್ನು ಕುರಿತು:—''ಮುತಾಲಿಕ ಸಾಹೇಬರೆ, ದೇವರ್ಷಿಗಳನ್ನು ಯಾತಕ್ಕೆ ಕರಯಿಸುವಿರಿ?'' ಎಂದು ನುಡಿಯುತ್ತ ಹೊರಗೆ ಬಂದಳು.

"ಯಾತಕ್ಕೆಂದರೆ? ನಮ್ಮ ಶ್ರೀಮಂತರು ಶಾಹೂರಾಜರ ಸಿಂಹಾಸನಕ್ಕೆ ಅಧಿಕಾರಿಗಳಾಗಬೇಕೆಂದು; ಈಗ ಒಳ್ಳೇ ಆಢ್ಯತೆಯಿಂದ ಮೆರೆಯುತ್ತಿರುವ ಬಾಜೀರಾಯನ ನಾಶವಾಗಬೇಕೆಂದು! ರಾಧಾಬಾಯಿಯವರೇ, ಹಿಂದುಪದಪಾತಶಾಹಿಯ ಮಹಾರಾಣಿಯರಾಗುವ ಸುಯೋಗವು ಆ ದೇವರ್ಷಿಗಳಿಂದ ನಿಮಗೊದಗುವದಿರುವದು. ಒಮ್ಮೆ ನಾನು ನಿಮ್ಮ ಕೈನೋಡಿ ಭವಿಷ್ಯ ಹೇಳಿದ್ದೆನು. ಅದು ನಿಮ್ಮ ಲಕ್ಷ್ಯದಲ್ಲಿರಬಹುದಲ್ಲವೆ?" ಯಮಾಜಿರಾಯನು ರಾಧಾಬಾಯಿಯನ್ನು ಕೇಳಿದನು.

''ಏನೆಂದು ಭವಿಷ್ಯ ಹೇಳಿದ್ದಿರಿ?'' ನಡುವೇ ಶ್ರೀಪತಿರಾಯನು ಕೇಳಿದನು.

"ಬಾಜಿ ರಾಯನಿಗೆ ಪೇಶವಾಯಿಯನ್ನು ಕೊಡುವ ಗೊಂದಲವೆದ್ದಿತ್ತು. ಕೊನೆಗೆ ಬಾಜೀರಾಯನು ಈ ಕೆಲಸದ ಸಲುವಾಗಿ ಪ್ರಯತ್ನ ಮಾಡಲಿಕ್ಕೆ

ಪುಣೆಯಿಂದ ಬಂದನು. ಅಂದೇ ಶಾಹೂಮಹಾರಾಜರ ಮೇಲೆ ಕೊಲೆಗಡಕರು ಬಿದ್ದರು ಆ ದಿವಸ ನಾನು ಬಾಯಿಸಾಹೇಬರ ಕೈನೋಡಿ ಭವಿಷ್ಯ ಹೇಳಿದೆನು ಇವರು ಬೇಗನೆ ಛತ್ರಪತಿ ಸಿಂಹಾಸನದ ಅನಭಿಷಿಕ್ತ ರಾಜ್ಞಿಯರಾಗುವರು ಇವರ ಕೈಯಲ್ಲಿ ರಾಜಚಿಹ್ನದ ರೇಷೆಯು ಬಹಳೇ ನಿಚ್ಚಳವಾಗಿರುವದು"

"ನಿಜವೇ?" ಶ್ರೀಪತಿರಾಯನು ಕುತೂಹಲದಿಂದ ಕೇಳಿದನು

"ಸಂದೇಹವಿಲ್ಲ"

"ಯಮಾಜಿರಾಯರ, ನೀವು ಆ ದೇವರ್ಷಿಯ ಸಹಾಯದಿಂದ ರಾಜ್ಯೈಶ್ವರ್ಯವನ್ನು ದೊರಕಿಸಿ ಕೊಡುವಿರೆಂದಂತಾಯಿತು! ಇಂತಹ ಅಭದ್ರ ಮಾತುಗಳನ್ನಾಡಲಿಕ್ಕೆ ಇಂದಿನ ಏಕಾದಶಿಯ ಮುಹೂರ್ತವು ನಿಮಗೆ ಬಹಳೇ ಅನುಕೂಲವಾದಂತೆ ತೋರುವದು"

"ಇವು ಅಭದ್ರ ಮಾತುಗಳೆ?" ಯಮಾಜಿರಾಯನು ಬೆರಗಾಗಿ ಕೇಳಿದನು

"ನೀವಿಬ್ಬರೂ ದೇವರ್ಷಿಯ ದೆವ್ವ ಬಡಿದು ಹುಚ್ಚರಾಗಿರುವಿರೆಂಬದನ್ನು ಅಲ್ಪಸ್ವಲ್ಪ ಕೇಳಿದ್ದೆನು ನಿಮಗೆ ಬಡಿದ ದೆವ್ವವು ಇಂದಿನ ಮಹಾಪರ್ವದ ದಿನ ಕೃಷ್ಣಾದೇವಿಯಲ್ಲಿ ಸ್ನಾನ ಮಾಡಿ ನಹ ಪೂರ್ವಸ್ಥಿತಿಯಲ್ಲಿಯೇ ಉಳಿದಿರುವದು ಯಮಾಜಿರಾಯರೆ, ನೀವು ಆರಾಧಿಸುತ್ತಿರುವ ದೇವರ್ಷಿಗಳ ಹಾಗು ಭೂತ-ಪಿಶಾಚಿಗಳ ನಲುವಾಗಿ ನನ್ನಲ್ಲಿ ಆಸ್ಪದ ದೊರೆಯಲಿಲ್ಲೆಂದು ಈ ಸಾಧು ಸಾಂಬನ ಮೇಲೆ ಪ್ರಯೋಗ ನಡೆಯಿಸಿರುವಿರೆಂದಂತಾಯಿತು."

ರಾಧಾಬಾಯಿಯ ಮಾತಿನಿಂದ ಯಮಾಜಿರಾಯನು ಖಿನ್ನನಾದನು. ಅವಳ ಮಾತಿನ ಮರ್ಮವು ಶ್ರೀಪತಿರಾಯನಿಗೆ ತಿಳಿಯದಿದ್ದರೂ, ಯಮಾಜಿರಾಯನಿಗೆ ಚನ್ನಾಗಿ ತಿಳಿಯಿತು. ರಾಧಾಬಾಯಿಯ ಕಕ್ಕುಲತೆಯ ಒಬ್ಬನೇ ಒಬ್ಬ ಮಗನಾದ ಪರಶುರಾಮನು ಮರಣ ಹೊಂದಿದ ಮೇಲೆ, ಪುತ್ರಪ್ರಾಪ್ತಿಗಾಗಿ ಇಂತಹದೇ ಒಂದು ಉಪಾಯ ಮಾಡಲು ಯಮಾಜಿಯು ಆಕೆಗೆ ಸೂಚಿಸಿದ್ದನು ಅವೇ ವೇಳೆಯಲ್ಲಿ ಅವನು ಪೇಶವೆಯ ವಿರುದ್ಧವಾಗಿ ಅವಳ ಮನಸ್ಸಿನಲ್ಲಿ ವಿಷವನ್ನು ಸುರುವಲಿಕ್ಕೆ ಹಿಂದೆ ಮುಂದೆ ನೋಡಲಿಲ್ಲ ಪೇಶವೆಯು ಪರಶುರಾಮನಿಗೆ ಮಾಟ ಮಾಡಿಸಿ ಕೊಲ್ಲಿಸಿದನೆಂದು ಅವನು ರಾಧಾಬಾಯಿಗೆ ಹೇಳಿದ್ದನು. ಶ್ರೀಪತಿರಾಯನ ಕಿವಿಯಲ್ಲಾದರೂ ಅವನು ಇದೇ ವಿಷವನ್ನು ಎರೆದಿದ್ದನು. ಈ ವಿಷದ ಪರಿಣಾಮವು ಶ್ರೀಪತಿರಾಯನ ಮೇಲೆ ಚನ್ನಾಗಿ ಆಗಿತ್ತು; ಆದರೆ ರಾಧಾಬಾಯಿಯು ಮಾತ್ರ ಈ ವಿಷಯದಲ್ಲಿ ಯಮಾಜಿ

ರಾಯನನ್ನು ಸಾಕುಸಾಕೆಂದೆನಿಸಿಬಿಟ್ಟಿದ್ದಳು. ದೇವರ್ಷಿಯನ್ನು ಕರೆಯಿಸುವ ಬಗ್ಗೆ ಶ್ರೀಪತಿರಾಯನು ಒಪ್ಪಿಗೆ ಕೊಡುವ ಲಕ್ಷಣವು ತೋರಿದ್ದರಿಂದ ಇದೇ ಸಮಯದಲ್ಲಿ ರಾಧಾಬಾಯಿಯ ಮನಸ್ಸು ಒಲಿಸಿಕೊಳ್ಳಬೇಕೆಂದು ಅವನು ಯೋಚಿಸಿದನು ಅವನು 'ರಾಧಾಬಾಯಿಯನ್ನು ಕುರಿತು — "ಬಾಯಿಯವರೆ, ಸಾಧುಭಾವಕ್ಕೆ ಸಿದ್ಧಿಯುಂಟು"

"ನಿಮ್ಮ ಸಾಧುಭಾವವು ನನಗೆ ಗೊತ್ತಿದೆ ನಿಮ್ಮ ಸಿದ್ಧಿಯ ತಂತ್ರವನ್ನೂ ಬಲ್ಲೆನು. ಪೇಶವೆಯ. ಹಾಗು ಛತ್ರಪತಿಯ ಅಹಿತ ಚಿಂತನ ಮಾಡುವದೇ ನಿಮ್ಮ ಸಿದ್ಧಿಯಲ್ಲವೆ? ಇದಕ್ಕಾಗಿಯೇ ನೀವು ಪಿಶಾಚಿ ಸಿದ್ಧಿ ಮಾಡಿಕೊಳ್ಳಲುದ್ಯುಕ್ತರಾಗಿರುವಿರಿ"

"ಬಾಯಿಯವರೆ, ಪೇಶವೆಯು ನಿಮಗೆ ವಿರೋಧಿಯಾಗಿದ್ದಾನೆ" ಎಂದು ಯಮಾಜಿರಾಯನು ನುಡಿದು ಶ್ರೀಪತಿರಾಯನನ್ನು ಕುರಿತು — "ಶ್ರೀಮಂತರೆ, ನನ್ನ ಮಾತು ನಿಜವಲ್ಲವೆ?"

"ಈ ಮಾತಿನಲ್ಲಿ ಸಂಶಯವಿಲ್ಲ." ಶ್ರೀಪತಿರಾಯನು ನುಡಿದನು.

"ಅಖಂಡ ಸುಳ್ಳು! ಪೇಶವೆಯ ಮನೆತನದವರೆಲ್ಲರೂ ಸಜ್ಜನರಿರುವರು ಬಾಜೀರಾವನಂತಹ ಸರ್ವೋತ್ಕೃಷ್ಟ ಮನುಷ್ಯನು ತ್ರಿಖಂಡಗಳಲ್ಲಿ ಶೋಧಿಸಿದರೂ ದೊರೆಯಲಿಕ್ಕಿಲ್ಲ" ಎಂದು ರಾಧಾಬಾಯಿಯು ಅಭಿಮಾನದಿಂದ ನುಡಿದಳು.

"ಹೆಂಗಸರ ಬುದ್ಧಿಯು ಇಷ್ಟೇ ಸರಿ ರಾಜಕಾರಣದಲ್ಲಿ ನಿನಗೆ ಹೇಗೆ ತಿಳಿಯಬೇಕು?" ಶ್ರೀಪತಿರಾಯನು ನಗುತ್ತ ನುಡಿದನು.

"ಸ್ತ್ರೀಬುದ್ಧಿಯು ಎಷ್ಟೇ ಇರಲಿ. ದ್ವೇಷ ಮಾಡುವಂಥ ದುರ್ಗುಣಗಳು ಪೇಶವೆಯಲ್ಲಿರುವವೆಂಬದು ನಿಮ್ಮ ಪುರುಷೀಬುದ್ಧಿಗಾದರೂ ತೋಚುತ್ತಿರುವದೇನು? ರಾಜಕಾರಣದಲ್ಲಿ ಸ್ತ್ರೀಯರಾದ ನಮಗೆ ಏನೊಂದು ತಿಳಿಯಲಿಕ್ಕಿಲ್ಲ; ಆದರ ಜಗತ್ತು ಏನು ಅನ್ನುತ್ತಿರುವದೆಂಬದನ್ನು ಕೇಳಿ ತಿಳಿಯಲಿಕ್ಕಾದರೂ ನಮಗೆ ಕಿವಿಗಳಿಲ್ಲವೇನು?"

"ಜಗತ್ತು ಬೇಕಾದಂತೆ ಅನ್ನುತ್ತದೆ ಅಂಥ ಜಗತ್ತು. ಆಡಂಬರದ ಜಗತ್ತು. ಜಗತ್ತಿನಗೊಡವೆ ನಮಗೇನು?" ಎಂದು ಯಮಾಜಿರಾಯನು ರೊಚ್ಚಿಗೆದ್ದು ಮಾತಾಡಿದನು.

"ಹಾಗಾದರ ಮಾತೇ ಮುಗಿಯಿತು" ಎಂದು ರಾಧಾಬಾಯಿಯು ನುಡಿದು ಪತಿಯನ್ನು ಕುರಿತು.— 'ನೀವು ಹೆಂಗಸರ ಮಾತೆಂದು ಉಪೇಕ್ಷಿಸುತ್ತಿದ್ದರೂ, ನಾನು ಕರ್ತವ್ಯವೆಂದು ಎರಡು ಮಾತು ಹೇಳುತ್ತೇನೆ. ನೀವು

ದುರಾಶೆಗೆ ಒಳಗಾಗಬೇಡಿರಿ; ಪೇಶವೆಯು ವೈರ ಬಳೆಯಿಸಬೇಡಿರಿ. ನಿಮ್ಮ ಈ ವರ್ತನದಿಂದ ಲಾಭವಾಗಲಾರದು. ಗೃಹಭೇದಕರ ಬೆರಗು-ಬಿನ್ನಾಣ ಗಳಿಗೆ ಒಳಗಾದರೆ ನೀವು ಆತ್ಮನಾಶ ಮಾಡಿಕೊಳ್ಳುವಿರಿ. ಪೇಶವೆಯು ಸಜ್ಜನನಿರುವನು.''

''ಪೇಶವೆಯು ನಿನ್ನಂಥವಳಿಗೆ ಸಜ್ಜನನಂತೆ ಕಾಣುತ್ತಿರಬಹುದು. 'ಮಧುತಿಷ್ಠತಿ ಜಿಹ್ವಾಗ್ರೇ ಹೃದಯೇತು ಹಾಲಾಹಲಂ' ಎಂಬಂತೆ ಬಾಜೀ ರಾಯನ ವೃತ್ತಿಯಿರುವದೆಂಬದನ್ನು ನೀನೇನು ಬಲ್ಲೆ?''

''ಶ್ರೀಮಂತರ ಮಾತುಗಳು ಸರಿಯಾಗಿರುವವು.'' ಎಂದು ಯಮಾಜಿ ರಾಯನು ಒಡೆಯನ ಮಾತಿಗೆ ಅನುಮೋದನೆ ಕೊಟ್ಟನು.

''ಪೇಶವೆಯು ಪ್ರಭಾವಶಾಲಿಯಿರುವನು.''

''ಕುತ್ತಿಗೆ ಕೊಯ್ಯುವವರನ್ನು ಪ್ರಭಾವಶಾಲಿಗಳೆಂದು ತಿಳಿದುಕೊಂಡರೆ, ಮಾಂಸವಿಕ್ರೇತರು ಸಹ ಅದೇ ವರ್ಗದಲ್ಲಿ ಬರಬಹುದು.''

''ಪೇಶವೆಯು ಯಾರ ಕೊರಳು ಕೊಯ್ದಿರುವನು?''

''ಪ್ರತ್ಯಕ್ಷ ಕೊಯ್ಯದಿದ್ದರೂ ಅಪ್ರತ್ಯಕ್ಷವಾಗಿ ಕೊಯ್ದಿರುವನು ಅವನು ಕೂದಲೆಳೆಯಿಂದ ಕುತ್ತಿಗೆ ಕೊಯ್ಯುವವನಿದ್ದಾನೆ''

''ಯಾರ ಕೊರಳು ಕೊಯ್ದಿರುವನು ಹೇಳಿರಿ ನೋಡೋಣ?''

''ಪೇಶವೆಯುರು ಯಾರ ಕೊರಳು ಕೊಯ್ದಿಲ್ಲ? ಬಾಳಾಜಿ ವಿಶ್ವನಾಥನು ತಾರಾಬಾಯಿಯ ವಿರುದ್ಧವಾಗಿ ನಿಂತು ಅವಳ ಕೊರಳುಕೊಯ್ದನು. ತನ್ನ ಪ್ರತಿಷ್ಠೆಯನ್ನೇ ಬೆಳಿಸಿ, ರಾಜಕರ್ಮಚಾರಿಗಳನ್ನು ಕನಿಷ್ಠ ತರಗತಿಗೆ ನೂಕಿ ಅವರ ಕೊರಳು ಕೊಯ್ದನು ಧನಾಜಿ ಜಾಧವನು ಬಾಳಾಜಿ ವಿಶ್ವನಾಥನ ಅನ್ನದಾತನು. ಹೀಗಿದ್ದರೂ ಧನಾಜಿಯು ತರುವಾಯ ಅವನ ಶೂರ ಪುತ್ರನಾದ ಚಂದ್ರಸೇನನ ಕೊರಳು ಕೊಯ್ಯಲಿಕ್ಕೆ ಅವನು ಹಿಂದೆಮುಂದೆ ನೋಡಲಿಲ್ಲ. ನಮ್ಮ ಮನೆತನಕ್ಕಂತು ಅವನು ಹೇಳಕೂಡದಷ್ಟು ಹಾನಿ ಮಾಡಿರುವನು. ಬಾಜೀರಾಯನಂತು ತಂದೆಗಿಂತ ಹೆಚ್ಚಿನವನಿರುವನು ತಂದೆ ಗುಡಿ ಕಟ್ಟಿ ದರೆ ಮಗ ಶಿಖರ ಹಚ್ಚುವನು. ಪೇಶವೆಯು ಹಿಂದುಪದಪಾತಶಾಹಿಯನ್ನು ಯಾವ ವೇಳೆಯಲ್ಲಿ ನುಂಗಿ ನೀರು ಕುಡಿಯುವನೋ ನಿಯಮವಿಲ್ಲ. ಕೊಲ್ಹಾಪುರದ ಛತ್ರಪತಿ, ನಿಜಾಮು, ದಾಭಾಡೆ ತ್ರ್ಯಂಬಕರಾಯ, ನಾಗ ಪುರದ ಫತ್ತೆಸಿಂಗ ಭೋಸಲೆ ಮೊದಲಾದವರು ಪೇಶವೆಯ ವಿಷಯಕ್ಕೆ ತೆಗೆದುಕೊಂಡಿರುವ ಆಕ್ಷೇಪಣೆಯು ಸುಳ್ಳಲ್ಲ. ಸಾತಾರೆಯ ಸಿಂಹಾಸನಕ್ಕೆ ಪೇಶವೆಯು ಹೆಗ್ಗಣದಂತಿರುವನೆಂದು ಅವರು ಅನ್ನುತ್ತಾರೆ.''

ಶ್ರೀಪತಿರಾಯನ ಮಾತುಗಳ ಮತಿತಾರ್ಥವು ರಾಧಾಬಾಯಿಗೆ ತಿಳಿಯದೇ ಇರಲಿಲ್ಲ. ಕೇವಲ ಮಾತ್ಸರ್ಯದಿಂದ ಪತಿಯು ಹೀಗೆ ಆಡುತ್ತಿರುವನೆಂಬದು ಅವಳಿಗೆ ಗೊತ್ತಾಯಿತು. ಬಾಳಾಜಿ ವಿಶ್ವನಾಥನು ಎಂಥವನಿದ್ದನು, ಬಾಜೀರಾಯನು ಹೇಗಿರುವನು, ತಾರಾಬಾಯಿ-ಚಂದ್ರಸೇನರು ಎಂಥವರಿದ್ದರು ಮೊದಲಾದ ಸಂಗತಿಗಳನ್ನು ಅವಳು ಪೂರಾ ಅರಿತಿದ್ದಳು; ಇಷ್ಟಲ್ಲದೆ ಪತಿಯು ಹಾಗು ಯಮಾಜಿರಾಯನು ಎಂಥ ಮನುಷ್ಯರಿರುವರೆಂಬದಾದರೂ ಅವಳಿಗೆ ಅರಿಯದೆ ಇರಲಿಲ್ಲ. ಅವಳು ವಂದನೀಯ ಪತಿವ್ರತೆಯಿದ್ದುದರಿಂದ ಪತಿಯ ದ್ರೋಹಚಿಂತನೆ ಮಾಡುತ್ತಿರಲಿಲ್ಲ; ಆದರೂ ಅವನು ದುರ್ವಿಚಾರಪ್ರವೃತ್ತನಾಗಬಾರದೆಂದು ಯಥಾಶಕ್ತಿ ಸಾಹಸ ಮಾಡುವದನ್ನು ಬಿಡುತ್ತಿದ್ದಿಲ್ಲ. ಪತಿಯ ಮಾತುಗಳಿಗೆ ಪ್ರತಿಮಾತಾಡಲಿಕ್ಕೆ ಅವಳಲ್ಲಿ ಸಾಮರ್ಥ್ಯವಿದ್ದಿಲ್ಲವೆಂತಲ್ಲ; ಆದರೆ ಪ್ರತಿಯೊಂದು ಮಾತಿನ ಖಂಡನೆ ಮಾಡಲಿಕ್ಕೆ ಮನಸ್ಸಿಲ್ಲದವಳಾಗಿ ವಿನಯದಿಂದ:—"ರಾಜಕಾರಣದಲ್ಲಿ ಸ್ತ್ರೀಯರಿಗೆ ಹೇಗೆ ತಿಳಿಯಬೇಕು?" ಎಂದು ನುಡಿದಳು.

"ತಮಗೆ ತಿಳಿಯದ ವಿಷಯದಲ್ಲಿ ಬಾಯಿಹಾಕಬಾರದು." ಇದೇ ಹೊತ್ತು ಎಂದು ಶ್ರೀಪತಿರಾಯನು ಹೀಗೆ ಗರ್ಜಿಸಿದನು.

"ರಾಜಕಾರಣದ ವಿಷಯವು ಈಗೆಲ್ಲಿ ನಡೆದದೆ? ನೀವು ರಾಜಕಾರಣದಲ್ಲಿ ಹೋರಾಡಿ ಮುಂದಾಗುವ ವಿಚಾರವನ್ನು ಬದಿಗಿರಿಸಿ, ಭೂತ-ಪಿಶಾಚಿ-ಮಾಟ ಮದ್ದುಗಳ ಬೆನ್ನುಹತ್ತಿರುವಿರಲ್ಲ?"

"ನಾವು ಈ ವಾಮಮಾರ್ಗದಿಂದಲೇ ರಾಜಕಾರಣವನ್ನು ಸಾಧಿಸಬೇಕಾಗಿದೆ. ಈಗಿನ ಕಾಲದಲ್ಲಿ ಸರಳ ದಾರಿಗೆ ಸೌಖ್ಯವಿಲ್ಲ ಬಾಯಿಸಾಹೇಬರ!" ಎಂದು ರಾಧಾಬಾಯಿಯ ಮಾತಿಗೆ ಯಮಾಜಿರಾಯನು ಉತ್ತರವಿತ್ತದ್ದಲ್ಲದೆ:—"ಶಾಹೂ ಮಹಾರಾಜರಿಗೆ ಪುತ್ರಲಾಭವಾದದ್ದು ಯಾತರಿಂದ?" ಎಂದು ಪ್ರಶ್ನೆಮಾಡಿದನು.

"ನಿಮ್ಮ ದೇವರ್ಷಿ ಭೂತಪಿಶಾಚಿಗಳೇ ಅವರಿಗೆ ಪುತ್ರಲಾಭ ಮಾಡಿಕೊಟ್ಟವೇನು?" ಎಂದು ರಾಧಾಬಾಯಿಯು ಕೇಳಿದಳು.

"ಮತ್ತೇನು? ಅವನ ಇಬ್ಬರೂ ರಾಣಿಯರು ದೇವರ್ಷಿಗಳಿಂದ ಅನುಷ್ಠಾನ ಮಾಡಿಸಿದ್ದರಿಂದಲೇ ರಾಜಪುತ್ರನು ಜನಿಸಿದನು."

"ನಿಮ್ಮಿಬ್ಬರ ಗುರಿಯನ್ನು ನಾನು ಚನ್ನಾಗಿ ತಿಳಿದಿರುವೆನು. ನೀವು ಮಾಡುವ ಪ್ರಯತ್ನವು ಹೊಳೆಯಲ್ಲಿ ಹುಳಿತೊಳೆದಂತಾಗುವದೆಂದು ನಾನು ಸ್ಪಷ್ಟವಾಗಿ ಹೇಳುವೆನು. ನಿಮ್ಮ ದೇವರ್ಷಿಯಲ್ಲಿ ಅಂಥ ಯೋಗ್ಯತೆಯಿದ್ದರೆ

ತನ್ನ ಮಂತ್ರಬಲದಿಂದ ತಾನೇ ಏಕಛತ್ರಾಧಿಪತಿಯಾಗುತ್ತಿದ್ದನು. ಜನರಿಗೆ ಅಷ್ಟೈಶ್ವರ್ಯಗಳನ್ನೂ ರಾಜ್ಯಸಂಪತ್ತನ್ನೂ ದೊರಕಿಸಿ ಕೊಡುವ ಯೋಗ್ಯತೆಯುಳ್ಳವನು ನೀವು ಕೊಡುವ ಸಂಭಾವನೆಗಾಗಿ ಇಷ್ಟೇಕೆ ಬಾಯಿತೆರೆದು ಕುಳಿತುಕೊಳ್ಳಬೇಕು? ಇಷ್ಟುದಿನ ನಿಮ್ಮ ದೇವರ್ಷಿಯು ಎತ್ತ ಮಾಯವಾಗಿದ್ದನು? ಇಷ್ಟರೊಳಗೆ ಶಾಹೂ ಮಹಾರಾಜರ ಎಷ್ಟು ಅಪತ್ಯಗಳು ಮೃತ್ಯುಮುಖಕ್ಕೀಡಾಗಿಲ್ಲ! ಆಗ ನಿಮ್ಮ ದೇವರ್ಷಿಯು ಜನ್ಮತಾಳಿದ್ದಿಲ್ಲವೇನು? ದೇವರ್ಷಿಯು ಸಂಭಾಜಿರಾಜನ ಅರಮನೆಯಲ್ಲಿ ಸಹ ಪ್ರತಿಷ್ಠೆ ಹೊಂದಿರುವನೆಂದು ಹೇಳುವಿರಿ. ಹಾಗಿದ್ದರೆ ಅವನು ಶಾಹೂ ಮಹಾರಾಜರನ್ನು ಸೋಲಿಸಿ, ಅವರ ರಾಜ್ಯವನ್ನು ಸಂಭಾಜಿ ಮಹಾರಾಜರಿಗೇಕೆ ಕೊಡಿಸಲೊಲ್ಲನು? ಇಂಥ ದೇವರ್ಷಿ ಭೂತ ಪಿಶಾಚಿಗಳ ಬೆನ್ನುಹತ್ತಿದರೆ ನೀವು ಯಶೋಮಂದಿರವನ್ನೆಂದೂ ತಲುಪಲಾರಿರಿ. ನೀವು ಛತ್ರಪತಿಯ ಅನ್ನ ಉಂಡು ಅವನ ಮೇಲೆ ತಿರುಗಿ ಬೀಳತೊಡಗಿರುವಿರಿ. ಹಿಂದಪದಪಾತಶಾಹಿಯ ಅಭ್ಯುದಯಚಿಂತನೆ ಮಾಡುತ್ತಿರುವ ಪೇಶವೆಯ ದ್ರೋಹಬಳೆಯಿಸುತ್ತಿರುವಿರಿ. ನೀವಿಬ್ಬರೂ ಹಿಂದುಪದಪಾತಶಾಹಿಯ ವಿರುದ್ಧವಾಗಿ ವೈರಿಗಳ ಕಡೆಗೆ ಗುಪ್ತವಾಗಿ ಒಡೆದಿರುವಿರಿ. ಯಾರ ಅನ್ನವನ್ನು ಉಣ್ಣುತ್ತಿರುವಿರೋ ಅವರ ದ್ರೋಹಚಿಂತನೆ ಮಾಡಿದರೆ ನಿಮಗೆ ಕಲ್ಯಾಣವಾಗಲಾರದು. ಪ್ರತಿನಿಧಿಗಳೆಂದರ ಛತ್ರಪತಿ ಸಿಂಹಾಸನದ ಆಧಾರಸ್ತಂಭವು. ಇಂಥವರು ಒಡೆದು ಹೋದರೆ ರಾಜ್ಯಕ್ಕೆ ದಕ್ಕೆ ತಗಲದೆ ಇರುವದೆ? ಒಡಕಿನಿಂದ ಬಳಲುವ ರಾಷ್ಟ್ರವನ್ನು ಒಟ್ಟುಮಾಡಿ ಸ್ಥಾಪಿಸಿದ ಹಿಂದುಸ್ವರಾಜ್ಯವನ್ನು ಮತ್ತೆ ಒಡೆಯುವ ನೀಚಕೃತಿಯು ನಿಮ್ಮಿಂದ ಘಟಿಸಿದರೆ ನೀವು ನಿಜವಾಗಿಯೂ ಅಧೋಗತಿಯನ್ನು ಹೊಂದುವಿರಿ. 'ಒಡಕೇ ಕೆಡಕಿನ ಮೂಲ'ವೆಂಬದನ್ನು ಇಬ್ಬರೂ ಲಕ್ಷ್ಯದಲ್ಲಿಡಿರಿ." ಎಂದು ರಾಧಾಬಾಯಿ ನುಡಿಯುವಷ್ಟರಲ್ಲಿ ಚದುರೆಯು ಅಲ್ಲಿಗೆ ಬಂದು:— ' ದಿವಾಣಖಾನೆಯಲ್ಲಿ ಜಗಜೀವನರಾಯರು ಬಂದಿರುವರು.'' ಎಂದು ಹೇಳಿದಳು. ಆದ್ದರಿಂದ ರಾಧಾಬಾಯಿಯ ಭಾಷಣವು ಅಷ್ಟಕ್ಕೆ ಮುಗಿಯಿತು.

———

# ದುರ್ಜನ ಸಂಕೇತ.

ರಾಧಾಬಾಯಿಯು ಜಗಜೀವನರಾಯನನ್ನು ಒಳಗೆ ಕಳಿಸಬೇಕೆಂದು ಚದುರೆಗೆ ಹೇಳಿದಳು. ಅಷ್ಟರಲ್ಲಿ ಜಗಜೀವನರಾಯನು ತನ್ನ ವಸ್ತ್ರಗಳನ್ನು ದಿವಾಣಖಾನೆಯಲ್ಲಿ ತೆಗೆದಿಟ್ಟು ಒಳಗೆ ಬಂದನು. ಆಗ ರಾಧಾಬಾಯಿಯು ಜಗಜೀವನರಾಯನನ್ನು ಕುರಿತು:—"ಮೈದುನರೆ, ನಿಮ್ಮ ಸ್ನಾನವಾಗಿರುವದೇನು? ಆಗಿದ್ದರೆ ಉಪಾಹಾರವನ್ನು ತರುತ್ತೇನೆ"

"ಇನ್ನೂ ನನ್ನ ಸ್ನಾನವಾಗಿಲ್ಲ." ಎಂದು ಜಗಜೀವನರಾಯನು ನುಡಿದು, ಅಲ್ಲಿಯೇ ರಾಧಾಬಾಯಿಯು ಮಂಡಿಸಿದ ಆಸನದ ಮೇಲೆ ಕುಳಿತನು.

ಆಗ ಶ್ರೀಪತಿರಾಯ-ಯಮಾಜಿರಾಯರು ಏಕಾದಶಿಯ ಉಪಾಹಾರಕ್ಕೆ ಕುಳಿತಿದ್ದರು. ಜಗಜೀವನರಾಯನನ್ನು ಉಪವಾಸ ಕುಳ್ಳಿರಿಸುವದು ಅವರಿಗೆ ಸರಿದೋರಲಿಲ್ಲ ಆಗ ಯಮಾಜಿರಾಯನು:—"ಬೇಗನೆ ಸ್ನಾನ ತೀರಿಸಿರಿ; ಅಂದರೆ ಎಲ್ಲರೂ ಕೂಡಿಯೆ ಉಪಾಹಾರಮಾಡಲಿಕ್ಕೆ ವಿಹಿತವಾಗುವದು."

"ನಿಮ್ಮ ಉಪಾಹಾರವು ಸಾಗಲಿ. ನಾನು ಸ್ವಲ್ಪ ತಡೆದು ಸ್ನಾನ ಮಾಡುವೆನು." ಎಂದು ಜಗಜೀವನರಾಯನು ಹೇಳಿದನು.

"ಒಳ್ಳೇದು; ಹಾಗೆಯೇ ಮಾಡು" ಎಂದು ಶ್ರೀಪತಿರಾಯನು ನುಡಿದು: "ಉದಾಜಿ ಚವ್ಹಾಣನ ಕಡೆಯಿಂದ ಏನು ವಾರ್ತೆ ತಂದಿರುವೆ?"

"ಅಣ್ಣಾ, ಚವ್ಹಾಣನೂ ಸಂಭಾಜಿರಾಜರೂ ನಾವು ತಿಳಕೊಂಡಂತೆ ತಟಸ್ಥವೃತ್ತಿಯನ್ನವಲಂಬಿಸಿಲ್ಲ. ನಿಜಾಮ-ಚಂದ್ರಸೇನ ಜಾಧವರಂತು ಪೇಶವೆಯ ಬೆನ್ನು ಬಿಟ್ಟಿಲ್ಲ. ರಾಜರಿಗೆ ಅವರ ಬೆಂಬಲವಿರುವದು. ಚವ್ಹಾಣನು ಬೇಗನೆ ಶಾಹೂಮಹಾರಾಜರ ಕೂಡ ಯುದ್ಧವನ್ನು ಪ್ರಾರಂಭಿಸುವವನಿರುವನು."

"ಚವ್ಹಾಣನ ದಾಳಿಗೆ ಸಂಭಾಜಿರಾಜನ ಅನುಮತಿಯಿರುವದೇ?"

"ರಾಜರ ಸಮ್ಮತಿ-ಅಸಮ್ಮತಿಗಳನ್ನು ಚವ್ಹಾಣನು ಲಕ್ಷಿಸುವದಿಲ್ಲ. ಸಂಭಾಜಿರಾಜರ ಆಲಸೀ-ವಿಲಾಸೀ ಸ್ವಭಾವದ ಬಗ್ಗ ನಿಮಗೆ ಪರಿಚಯವಿದ್ದೇ ಇರುವದು. ಅವರಂಥ ಆಲಸಿಗರು ಎಲ್ಲಿಯೂ ದೊರೆಯಲಿಕ್ಕಿಲ್ಲ. ತುಟಿಯ ಮೇಲಿನ ನೀರಲ ಹಣ್ಣನ್ನು ನಾಲಿಗೆಯ ಮೇಲೆ ದಬ್ಬಲಿಕ್ಕೆ ಅವರಿಗೊಬ್ಬ ಸಹಾಯಕರು ಬೇಕಾಗುವದು. ಅವರೇ ಚವ್ಹಾಣನ ಹೇಳಿಕೆಯಂತೆ ನಡೆಯುತ್ತಲಿರುವರು."

"ಸಂಭಾಜಿರಾಜರು ಈ ಬಗೆಯಾಗಿ ಚವ್ಹಾಣನ ಕೈಯಲ್ಲಿ ಸಿಲುಕಿದ ಕಾರಣವೇನೆಂಬದನ್ನು ಬಲ್ಲಿರಾ?" ಎಂದು ಯಮಾಜಿಯು ವಿಚಾರಿಸಿದನು.

"ಯಾವ ಕಾರಣವಿರುವದೋ ಏನೋ!" ಎಂದು ಶ್ರೀಪತಿರಾಯನು ನುಡಿದನು.

"ಕಾರಣವುಂಟು. ಏಳಿರಿ, ದಿವಾಣಖಾನೆಯಲ್ಲಿ ಕುಳಿತು ಮಾತಾಡೋಣ." ಎಂದು ಯಮಾಜಿಯು ಹೇಳಿದನು.

ಅಷ್ಟು ಹೊತ್ತಿಗೆ ಅವರ ಉಪಾಹಾರವೂ ಮುಗಿದಿತ್ತು. ಶಾಹೂರಾಜನ ಹಾಗು ಪೇಶವೆಯ ಪಕ್ಷದ ರಾಧಾಬಾಯಿಯ ಮುಂದೆ ಅವರ ವಿರುದ್ಧವಾಗಿದ್ದ ಕಾರಸ್ಥಾನದ ವಿಷಯವಾಗಿ ಮಾತಾಡಲಿಕ್ಕೆ ಯಮಾಜಿಯು ಮನಸ್ಸು ಹಿಂಜರಿಯತೊಡಗಿದ್ದರಿಂದ ಶ್ರೀಪತಿರಾಯನನ್ನೂ ಜಗಜೀವನರಾಯನನ್ನೂ ದಿವಾಣಖಾನೆಗೆ ಕರೆದೊಯ್ದನು. ಯಮಾಜಿರಾಯನ ಮನೋಗತವು ರಾಧಾಬಾಯಿಗೆ ತಿಳಿಯದಿರಲಿಲ್ಲ. ರಾಜಕೀಯ ಗುಪ್ತಕಾರಸ್ಥಾನಗಳನ್ನು ಕೇಳುವದರಿಂದ ತನಗೇನೂ ಲಾಭವಿಲ್ಲೆಂದು ಮನಸ್ಸಿನಲ್ಲಿ ಅಂದುಕೊಂಡು ಅವಳು ಒಳಗೆ ಹೋದಳು.

ದಿವಾಣಖಾನೆಯಲ್ಲಿ ಬಂದ ಮೇಲೆ ಶ್ರೀಪತಿರಾಯನು—"ಯಮಾಜಿರಾಯರೆ, ಸಂಭಾಜಿರಾಜರು ಉದಾಜಿಯ ಸೂತ್ರದ ಗೊಂಬೆಯಾದ ಕಾರಣವೇನು?"

"ಸಂಭಾಜಿರಾಜರು ಜಿಜಾಬಾಯಿಯ ಸೂತ್ರದ ಗೊಂಬೆಯಾಗಿರುವರೆಂಬುದನ್ನು ನೀವು ಬಲ್ಲಿರಿ"

"ಓಹೋ! ಬಲ್ಲೆನು. ಅಂತೆಯೇ ಅವರನ್ನು ಸತೀಭ್ರಾಂತರೆಂದು ಸಂಬೋಧಿಸುತ್ತಿರುವರು."

"ಈಗ ಜಿಜಾಬಾಯಿಯೇ ಸರ್ವಾಧಿಕಾರಿ ಯಾದಂತಾಗಿರುವಳು. ಚವ್ಹಾಣನು ಜಿಜಾಬಾಯಿಯ ಸ್ನೇಹಿತನಾಗಿರುವನು. ಸರ್ವಾಧಿಕಾರಿಯಾಗಿದ್ದ ಜಿಜಾಬಾಯಿಯೇ ಚವ್ಹಾಣನ ಸೂತ್ರದ ಗೊಂಬೆಯಾಗಿರುವಾಗ ರಾಜನನ್ನು ಯಾರು ಕೇಳಬೇಕು?"

"ಚವ್ಹಾಣನು ಜಿಜಾಬಾಯಿಯನ್ನು ಈ ರೀತಿಯಾಗಿ ಒಲಿಸಿಕೊಳ್ಳಲಿಕ್ಕೆ ಒಂದು ಕಾರಣವುಂಟೆಂದು ನಾನು ಕೇಳುತ್ತೇನೆ. ರಾಣಿಗೆ ದುರ್ಗೆಯೆಂಬ ರೂಪವತಿಯಾದ ಭಗಿನಿಯಿದ್ದು, ಅವಳನ್ನು ವಿವಾಹವಾಗಬೇಕೆಂದು ಚವ್ಹಾಣನ ಅಭಿಲಾಷೆಯುಂಟು. ಅದಕ್ಕಾಗಿಯೆ ಅವನು ರಾಣಿಗೆ ಈ ಪರಿಯಾಗಿ ಜೀ ಜೀ' ಅನ್ನುತ್ತಾನೆಂದು ಜನರಾಡುವದನ್ನು ಕೇಳಿದ್ದೇನೆ."

"ಜನವೋ, ವನವೋ!" ಜಗಜೀವನರಾಯನಾಡಿದ ಮಾತಿಗೆ ಶ್ರೀಪತಿ ರಾಯನು ತಿರಸ್ಕಾರದಿಂದ ಹೀಗೆ ನುಡಿದು:—"ಜಿಜಾಬಾಯಿಯು ಮೇಲಿನ ಸವಿಮಾತುಗಳಿಗೆ ಮರುಳಾಗುವವಳಲ್ಲ. ಅವಳು ಧೂರ್ತಳಿರುವಳು. ಚವ್ಹಾಣನು ಕರ್ತೃತ್ವಶಾಲಿಯಿರುವನೆಂಬದನ್ನು ಕಂಡು ಹಿಡಿದು, ಅವನಿಗೆ ಮಾನಮನ್ನಣೆ ಕೊಡುತ್ತಿರುವಳಾಗಿದ್ದೀತು. ರಾಣಿಯು ರಾಜಕಾರಣದಲ್ಲಿ ಕಡಿಮೆಯಿಲ್ಲ ಸಂಭಾಜಿರಾಜನು ದಂಡಯಾತ್ರೆಗೆ ಹೋದಾಗ ಅವಳೇ ರಾಜ್ಯಸೂತ್ರಗಳನ್ನು ತೆಗೆದುಕೊಂಡು ಉತ್ಕೃಷ್ಟವಾದ ರೀತಿಯಿಂದ ಆಡಳಿತ ನಡೆಯಿಸುತ್ತಲಿರುವಳು. ರಾಜರು ಇದ್ದಾಗ ಸಹ ರಾಣಿಯು ಎಷ್ಟು ರಾಜ ಕಾರಣಗಳನ್ನು ನಡೆಯಿಸುವದಿಲ್ಲ? ಕೆಲವು ವಿಘ್ನಸಂತೋಷಿಗಳಾದ ರಾಜ್ಯ ಕರ್ತರು ಜಿಜಾಬಾಯಿಯಲ್ಲಿ ಮಾತ್ಸರ್ಯವುಳ್ಳವರಾಗಿ ಮನಬಂದಂತೆ ಆಕ್ಷೇ ಪಣೆ ಮಾಡುತ್ತಿರಬಹುದು. ಅತ್ತಕಡೆಗೆ ನಮ್ಮಂಥ ಸೂಜ್ಞರು ಲಕ್ಷ್ಯಕೊಡ ಬಾರದು. ಯಾವದೊಂದು ವಿಷಯದ ಬಗ್ಗೆ ರಾಜಮನೆತನದ ವಿಷಯಕ್ಕೆ ಜನರ ಆಕ್ಷೇಪಣೆಯಿರುತ್ತಿದ್ದರೂ, ಬೈಲಿಗೆಳೆಯದೆ ಅದನ್ನು ಬಚ್ಚಿಡಲಿಕ್ಕೆ ಯತ್ನಿಸಬೇಕು. ಸಾತಾರೆಯವರೇನು, ಕೊಲ್ಹಾಪುರದವರೇನು, ಇಬ್ಬರೂ ನಮಗೆ ವಂದ್ಯರೇ. ತಿರುಗಿ ಕೇಳದರೆ ಸಾತಾರೆಯವರಿಗಿಂತಲೂ ಕೊಲ್ಹಾ ಪುರದವರು ನಮಗೆ ನಿಕಟಸಂಬಂಧಿಗಳೆಂದು ಹೇಳಬಹುದು. ಪರಿಸ್ಥಿತಿಯಿಂದ ನಾವು ಕೊಲ್ಹಾಪುರದವರ ಸೇವೆಬಿಟ್ಟು ಸಾತಾರೆಯವರ ಸೇವೆ ಮಾಡುತ್ತಿ ದ್ದರೂ, ಕೊಲ್ಹಾಪುರದವರು ನಮಗೆ ಪರಕೀಯರೆಂದು ತಿಳಿಯಲಿಕ್ಕೆ ಬರುವ ದಿಲ್ಲ. ಸದ್ಯದಲ್ಲಿ ಸಹ ಸಾತಾರೆಯವರ ಸೇವೆಬಿಟ್ಟು ಕೊಲ್ಹಾಪುರದವರ ಸೇವೆಗೆ ನಿಲ್ಲಬೇಕೆಂದು ಮನಸ್ಸಿನಲ್ಲಿ ಹುಟ್ಟುತ್ತದೆ; ಆದರೆ ಸದ್ಯದ ಸ್ಥಿತಿಯು ವಿಪರೀತವಿದೆ. ತಾರಾಬಾಯಿ ರಾಣೀಸಾಹೇಬರೊಡನೆ ಹೇಗೆ ನಿಷ್ಠೆಯಿಂದ ನಡೆದೆವೋ ಅದೇ ನಿಷ್ಠೆಯನ್ನು ಇಂದಿನ ಮಿತಿಯವರೆಗೆ ಸ್ಥಿರವಾಗಿರಿಸಿದ್ದರೆ, ಕೊಲ್ಹಾಪುರದವರ ಪಕ್ಷವು ಸದ್ಯದಂತೆ ದುರ್ಬಲವಾಗುತ್ತಿದ್ದಿಲ್ಲ. ನಮಗಾ ದರೂ ಪೇಶವೆಯ ಎದುರಿಗೆ ತಲೆಬಾಗಿಸಿ, ಅವನ ಎಡಿಯ ಬಳಿಯ ಚಿಕ್ಕಿ ನಂತಾಗಿ ಕಾಲಕಳೆಯುವ ಪ್ರಸಂಗ ಒದಗುತ್ತಿದ್ದಿಲ್ಲ. ಈಗ ಉಪಾಯವಿಲ್ಲ; ಮಾತು ಮಿಂಚಿಹೋಗಿದೆ."

"ಅಣ್ಣಾ, ನೀವು ಹೀಗೇಕೆ ಅನ್ನುವಿರಿ?" ಶ್ರೀಪತಿರಾಯನನ್ನು ಕುರಿತು ಜಗಜೀವನರಾಯನು ನುಡಿದನು

"ಸಂಭಾಜಿರಾಜರು ಇನ್ನು ನನ್ನಲ್ಲಿ ಮೊದಲಿನಂತೆ ನಂಬಿಗೆಯುಳ್ಳವ ರಾಗುವದು ಅಸಂಭವವು"

"ಛೀ! ಹೀಗೇಕೆ ಮಾತನಾಡುವಿರಿ? ನೀವು ಕೊಲ್ಲಾಪುರದವರಿಗೆ ನೆರವಾಗಲೊಪ್ಪಿದರೆ ಎಲ್ಲ ಕೆಲಸಗಳೂ ಸುಸೂತ್ರವಾಗುವವು."

"ನನಗಾದರೂ ಹಾಗೆಯೇ ತೋರುವದು; ಆದರೆ ಸಂಭಾಜಿರಾಜರು ನನ್ನ ಮೇಲೆ ವಿಶ್ವಾಸವಿಡದಿದ್ದರೆ ಅಧೋಭ್ರಷ್ಟಸ್ತಥೋಭ್ರಷ್ಟವಾಗಬೇಕಾದೀತು"

"ಹಾಗೆ ಆಗುವಂತಿಲ್ಲ ನಾನು ಸಂಭಾಜಿರಾಜರ ಹಾಗು ಚವ್ಹಾಣನ ಪ್ರತಿನಿಧಿಯಾಗಿ ಇಲ್ಲಿಗೆ ಬಂದಿರುವೆನು. ಬಾಜೀರಾಯನು ದಾಭಡೆ ಗಾಯಕವಾಡರ ಮೇಲೆ ದಂಡೆತ್ತಿ ಹೋಗುವವನಿರುವನು ಅವನು ಉತ್ತರಕ್ಕೆ ಹೋದನೆಂದರೆ ದಕ್ಷಿಣದಲ್ಲಿ ನಿಮ್ಮ ಹೊರತು ಕರ್ತೃತ್ವಶಾಲಿಗಳಾದ ಪುರುಷರು ಯಾರು ಉಳಿಯುವರು? ಈ ಸಂಧಿಯಲ್ಲಿ ನೀವು ಸಂಭಾಜಿರಾಜರಿಗೆ ನೆರವಾದಿರೆಂದರೆ ಅವರು ನಿಶ್ಚಯವಾಗಿ ವಿಜಯಿಗಳಾಗುವರು. ಆಗ ನಿಮ್ಮ ಮನೋದಯವು ಅನಾಯಾಸವಾಗಿ ಈಡೇರುವದು ಸಂಭಾಜಿರಾಜರೂ ಉದಾಜಿ ಚವ್ಹಾಣನೂ ಪೇಶವೆಯು ದಂಡಯಾತ್ರೆಗೆ ಹೊರಡುವ ದಾರಿಯನ್ನು ನೋಡುತ್ತಲಿರುವರು. ಅವನು ಅತ್ತ ಹೋದ ಕೂಡಲೆ ಕೊಲ್ಲಾಪುರದ ದಂಡು ಸಾತಾರೆಯ ಸೀಮೆಯನ್ನು ಸೇರಿತೆಂವೇ ತಿಳಿಯತಕ್ಕದ್ದು ನೀವು ಕೊಲ್ಲಾಪುರದವರಿಗೆ ನೆರವಾದರೆ ನಿಮ್ಮ ಅಭ್ಯುದಯವು ನಿಶ್ಚಯವಾಗಿಯೂ ಆಗುವದು."

"ಅವೆಲ್ಲವು ನಿಜವು" ಎಂದು ಶ್ರೀಪತಿರಾಯನು ನುಡಿದು, ಸ್ವಲ್ಪ ಯೋಚಿಸಿ—"ಶಾಹೂಮಹಾರಾಜರ ಒಣ ಸಂಭಾವನೆಗಳಿಂದ ನನಗೇನೂ ಲಾಭವಿಲ್ಲೆಂಬದನ್ನು ಬಲ್ಲೆನು ನಾನು ಶಾಹೂರಾಜರ ಪಕ್ಷವನ್ನು ಬಿಟ್ಟು ಸಂಭಾಜಿಮಹಾರಾಜರ ಕಡೆಗೆ ಒಡೆಯಲಿಕ್ಕೆ ಅನುಮಾನ ಮಾಡುವದಿಲ್ಲ; ಆದರೆ ಭಾವೀ ಸಂಗ್ರಾಮದಲ್ಲಿ ಸಂಭಾಜಿರಾಜರೇ ವಿಜಯಿಗಳಾಗುವರೆಂದು ಹೇಗೆ ನಂಬಬೇಕು? ಇತ್ತೀಚಿಗಿನ ನನ್ನ ಗ್ರಹಬಲವು ಚನ್ನಾಗಿಲ್ಲ ನಾನು ಒಳ್ಳೇ ಪರಿಶ್ರಮದಿಂದ ಮಾಡಿಸಿದ ಒಪ್ಪಂದವನ್ನು ಮುರಿದು, ಮಹಾರಾಜರ ವಿರುದ್ಧವಾಗಿ ನಿಜಾಮನು ಮತ್ತೆ ಯುದ್ಧವನ್ನು ಪ್ರಾರಂಭಿಸಲಿಲ್ಲವೆ? ಅವನ ಪಾರುಪತ್ಯಮಾಡಲಿಕ್ಕೆ ಮಹಾರಾಜರು ನನ್ನನ್ನು ಬಿಟ್ಟು ಬಾಜೀರಾಯನನ್ನು ಕಳುಹಿಸಿದರು ಬಾಜೀರಾಯನು ಪಾಲಖೇಡದ ಬಳಿಯಲ್ಲಿ ನಿಜಾಮನನ್ನು ಪರಾಭವಗೊಳಿಸಿದನು. ಮುಂಗಿಶೇವಗಾಂವದ ಒಪ್ಪಂದವಾಯಿತು. ಈ ಘಟನೆಯಿಂದ ಪೇಶವೆಗೂ ಮಹಾರಾಜರಿಗೂ ಲಾಭವಾಯಿತು; ಆದರೆ ಈ ಕಾರ್ಯದಿಂದ ಕೆಳಗಿನ ಭೂಮಿಯು ದ್ವಿಭಂಗವಾದಂತೆಯೂ ಮೇಲಿನ ಆಕಾಶವು ಕಳಚಿಬಿದ್ದಂತೆಯೂ ನನ್ನ ಅವಸ್ಥೆಯಾಯಿತು. ಪೇಶವೆಯು ನಿಜ

ಮನ ಮೇಲೆ ದಂಡೆತ್ತಿ ಹೋದಾಗ, ಚಂದ್ರಸೇನ ಜಾಧವ-ಸಂಭಾಜಿರಾಜರು ನಿಜಾಮುನಿಗೆ ಸಹಾಯ ಮಾಡುವದನ್ನು ಬಿಟ್ಟು ಓಡಿ ಹೋದರು. ಸಂಗ್ರಾಮದಲ್ಲಿ ನಿಜಾಮುನು ಪರಾಜಿತನಾದನು. ಪೇಶವೆಯ ಕರ್ತವ್ಯಪ್ರಭಾವವು ಮಹಾರಾಜರ ಮನಸ್ಸಿಗೆ ಒಡೆದು ಕಾಣಹತ್ತಿತು, ನಿಜಾಮುನೊಡನೆ ಒಪ್ಪಂದ ಮಾಡಿಸಿದ ಪ್ರತಿಸಿಧಿಯು ಮಾತ್ರ ಅವರ ದೃಷ್ಟಿಗೆ ಹೇಡಿಯಾಗಿ ಕಾಣಹತ್ತಿದನು. ಪುಣ್ಯಬಲವು ತೀರಿತೆಂದರೆ ಹಿಡಿದ ಚಿನ್ನವು ಮಣ್ಣಾಗುವದು; ಪುಣ್ಯದ ಬಲವಿದ್ದಾಗ ಮಣ್ಣು ಹಿಡಿದರೆ ಚಿನ್ನವಾಗುವದು. ಈಗ ನನ್ನ ಪುಣ್ಯಬಲವು ಮುಗಿದಿದೆ; ಪೇಶವೆಯ ಪುಣ್ಯವು ಬಲವತ್ತರವಿರುವದು. ಇಂತಹ ಪ್ರಸಂಗದಲ್ಲಿ ನಾನು ಸಂಭಾಜಿರಾಜರ ಕಡೆಗೆ ಒಡೆದರೆ ಹೇಗಾದೀತು? ಜಯಾಪಜಯಗಳು ದೈವಾಧೀನವಾದವುಗಳಾಗಿವೆ. ಸಂಭಾಜಿರಾಜನು ಅಪಜಯ ಹೊಂದಿದರೆ ಗೃಹಭೇದಿಗಳೂ ಸ್ವಾಮಿದ್ರೋಹಿಗಳೂ ಆದ ನಮ್ಮಂಥವರ ಗತಿ ಯೇನಾದೀತು?"

"ನಿಮ್ಮ ತಿಳುವಳಿಕೆಯು ತಪ್ಪಾಗಿದೆ. ಸಂಭಾಜಿರಾಜರು ಈಗ ಮೊದಲಿನಂತೆ ದುರ್ಬಲರಿಲ್ಲ." ಜಗಜೀವನರಾಯನು ಗಾಂಭೀರ್ಯದಿಂದ ನುಡಿದನು.

"ಯಮಾಜಿರಾಯರೆ, ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನಿರುವದು?" ಎಂದು ಶ್ರೀಪತಿರಾಯನು ಯಮಾಜಿರಾಯನನ್ನು ಕೇಳಿದನು.

"ನಿಮ್ಮ ಮತವೇ ನನ್ನ ಮತವು." ಯಮಾಜಿಯು ಅನುಮೋದನವಿತ್ತನು.

"ಸಂಭಾಜಿರಾಜರಿಗೆ ಚಂದ್ರಸೇನಜಾಧವ, ಉದಾಜಿ ಚವ್ಹಾಣ ಮೊದಲಾದ ವೀರಾಗ್ರಣಿಗಳ ಸಹಾಯವಿದ್ದೇ ಇರುವದು ಪ್ರಸಂಗವೊದಗಿದರೆ ನಿಜಾಮುನಾದರೂ ಕೊಲ್ಹಾಪುರದವರ ಪಕ್ಷಕ್ಕೇ ಸೇರುವನು ಪೇಶವೆಯು ಎಲ್ಲರಿಗೂ ತಲೆಭಾರಾಗಿರುವದರಿಂದ ಅವನ ಗರ್ವಭಂಗ ಮಾಡಬೇಕೆಂದು ಕಾರಸ್ಥಾನ ನಡೆದಿದೆ. ವಸ್ತುಸ್ಥಿತಿಯು ಹೀಗಿದ್ದರೂ, ನೀವು ಬಹಿರಂಗದಲ್ಲಿ ಕೊಲ್ಹಾಪುರದವರಿಗೆ ಸಹಾಯಮಾಡಬೇಕೆಂದು ಯಾರು ಅನ್ನುವರು? ನೀವು ಶಾಹೂ ಮಹಾರಾಜರ ಪಕ್ಷಕ್ಕೇ ಇದ್ದು, ಅಂತರಂಗದಲ್ಲಿ ಸಂಭಾಜಿರಾಜರಿಗೆ ಸಹಾಯ ಮಾಡುತ್ತಲಿದ್ದರಾಯಿತು."

"ಉತ್ತಮವಾದ ಹಂಚಿಕೆಯಿದು." ಯಮಾಜಿರಾಯನು ಗಹಗಹಿಸಿ ನಗುತ್ತ:—"ಈ ನಮ್ಮ ಸಣ್ಣ ಶ್ರೀಮಂತರು ಭಗವಾನ್ ಶ್ರೀಕೃಷ್ಣನಂತೆ ರಾಜಕಾರಣವನ್ನೇ ಆಡಿದರು."

ಒಟ್ಟಿನ ಮೇಲೆ ಗಜ್ಜರಿಯ ಪುಂಗಿ; ಊದಿದರೆ ಊದಿತು, ಇಲ್ಲದಿದ್ದರೆ

ಮುರಿದು ತಿಂದರಾಯಿತು. ಹೀಗೆಯೇ ನಿಮ್ಮ ಯುಕ್ತಿಯಲ್ಲವೆ?" ಎಂದು ಶ್ರೀಪತಿರಾಯನು ನಗುತ್ತ ನುಡಿದನು.

"ಹೌದು! ಸಂಭಾಜಿರಾಜರು ವಿಜಯಿಗಳಾಗುವ ಚಿಹ್ನವು ತೋರಿದರೆ ಬಹಿರಂಗವಾಗಿಯೇ ಅವರ ಪಕ್ಷಕ್ಕೆ ಸೇರಬಹುದು; ಹಾಗಾಗದಿದ್ದರೆ ನಾವು-ಮಹಾರಾಜರ ಏಕನಿಷ್ಠ ಸೇವಕರು-ಅವರ ಕೊರಳೊಳಗಿನ ತಾಯಿತದಂತೆ ಇದ್ದೇ ಇರುವೆವು." ಎಂದು ಯಮಾಜಿರಾಯನು ನಗುತ್ತಲೇ ಉತ್ತರಿಸಿದನು.

"ಯಮಾಜಿರಾಯರೆ, ನಿಮ್ಮ ಮಾತು ಸರಿಯಾದದ್ದು." ಎಂದು ಜಗಜೀವನರಾಯನು ನುಡಿದು, ಶ್ರೀಪತಿರಾಯನನ್ನು ಕುರಿತು—"ಅಣ್ಣಾ, ಸಂಭಾಜಿರಾಜರಿಗೆ ನೀವು ಅನುಕೂಲರಾಗುವಿರಾ?"

"ಯಮಾಜಿರಾಯರೆ, ಹೇಗೆ ಮಾಡೋಣ?" ಎಂದು ಶ್ರೀಪತಿರಾಯನು ಅನುಮಾನಗೊಂಡವನಾಗಿ ಕೇಳಿದನು.

"ಇನ್ನು ಅನುಮಾನವೇ ಬೇಡ. ದೈವವಿಕಾಸಗೊಳಿಸಲಿಕ್ಕೆ ಇದೊಂದು ರಾಜಮಾನ್ಯ ಮಾರ್ಗವಿರುವದು." ಎಂದು ಯಮಾಜಿರಾಯನು ನುಡಿದು: "ನಾವು ದೇವರ್ಷಿಗಳನ್ನು ಕರೆಯಿಸಿ ಅವರ ಪ್ರಭಾವವನ್ನು ಪರೀಕ್ಷಿಸಲಿಕ್ಕೆ ಮರೆಯಲಾಗದು. ಆ ಉಪಾಯದಿಂದ ಹೆಚ್ಚಿಗೇನೂ ಸಾಧ್ಯವಾಗದಿದ್ದರೂ ನಮ್ಮ ವಿರುದ್ಧವಾಗಿ ಯಾರಾದರೂ ಹಿತಶತ್ರುಗಳು ನಮ್ಮ ಅಭ್ಯುದಯಕ್ಕೆ ಅಡ್ಡಾದರೆ,ಅವರ ಅಡ್ಡಿಯನ್ನು ನಿವಾರಿಸಿಕೊಳ್ಳಲಿಕ್ಕೆ ಅನುಕೂಲವಾಗುವದು."

"ನಿಮ್ಮ ದೇವರ್ಷಿಗಳು ಯಾರು?" ಕುತೂಹಲದಿಂದ ಜಗಜೀವನರಾಯನು ಯಮಾಜಿರಾಯನನ್ನು ಕೇಳಿದನು.

"ಬಹೇಬೋರಗಾಂವದ ನಡುಗಡ್ಡೆಯಲ್ಲಿ ಇರುವವರೇ ನಮ್ಮ ದೇವರ್ಷಿಗಳು. ಅವರು ಒಮ್ಮೊಮ್ಮೆ ಶಿರಾಳೆಗೂ, ಒಮ್ಮೊಮ್ಮೆ ಕೊಲ್ಹಾಪುರಕ್ಕೂ, ಮತ್ತೊಮ್ಮೆ ಪನ್ಹಾಳಗಡಕ್ಕೂ ಹೋಗುತ್ತಿರುತ್ತಾರ, ಆದರೆ ಅವರ ಸ್ಥಿರವಾದ ವಸತಿಯು ಬಹೇಬೋರಗಾಂವದ ನಡುಗಡ್ಡೆಯಲ್ಲಿಯೇ ಇರುವದು"

"ತಿಳಿಯಿತು-ತಿಳಿಯಿತು ರಾಮದಾಸರೆಂದು ಸಂಬೋಧಿಸಿಕೊಳ್ಳುವವರೇ ನಿಮ್ಮ ದೇವರ್ಷಿಗಳಲ್ಲವೆ?"

"ಹೌದು." ಎಂದು ಯಮಾಜಿರಾಯನು ನುಡಿದನು.

"ಜನರು ಅವರ ಮಹಿಮೆಯನ್ನು ಬಣ್ಣಿಸುತ್ತಿರುವದನ್ನು ಕೇಳಿರುವೆನು. ನೀವಾದರೂ ಅವರಿಂದ ಉಪಾಯ ಮಾಡಿಸಲಿಕ್ಕೆ ಅಡ್ಡಿಯಿಲ್ಲ." ಎಂದು ಜಗಜೀವನರಾಯನು ನುಡಿದು ಶ್ರೀಪತಿರಾಯನನ್ನು ಕುರಿತು:—"ಉದಾಜಿ ಚವ್ಹಾಣನಿಗೆ ಏನೆಂದು ಹೇಳಲಿ?"

"ನಾವು ಅಂತರಂಗದಲ್ಲಿ ಸಂಭಾಜಿ ಮಹಾರಾಜರಿಗೆ ಅನುಕೂಲರಿರುವೆವೆಂದು ತಿಳಿಸು ಚವ್ಹಾಣನ ಭೆಟ್ಟಿಗೆ ಈಗಲೆ ಬರುತ್ತಿದ್ದೆನು; ಆದರೆ ಸಾತಾರೆಗೆ ಬರಬೇಕೆಂದು ಪೇಶವೆಯ ಕಡೆಯಿಂದ ಸ್ವಾರನು ಬಂದಿರುವನು. ಭೆಟ್ಟಿಯಾಗಿ ಹೋಗಬೇಕೆಂದು ಶಾಹೂರಾಜರ ಆಜ್ಞಾಪತ್ರವೂ ಬಂದಿದೆ. ಆದ್ದರಿಂದ ಈಗ ಶಿರಾಳೆಗೆ ಬರಲಿಕ್ಕೆ ಅನುಕೂಲವಿಲ್ಲ." ಎಂದು ಶ್ರೀಪತಿರಾಯನು ಹೇಳಿದನು.

"ನೀವು ಅತ್ತ ಹೋದರೆ ನಾನೊಬ್ಬನೇ ದೇವರ್ಷಿಗಳ ಕಡೆಗೆ ಹೋಗಬೇಕಾಗುವದು. ಸಣ್ಣ ಶ್ರೀಮಂತರನ್ನಾದರೂ ಸಂಗಡ ಕರೆದೊಯ್ಯಲೇನು?" ಎಂದು ಯಮಾಜಿರಾಯನು ಶ್ರೀಪತಿರಾಯನನ್ನು ಕೇಳಿದನು.

"ಅವನು ಶಿರಾಳೆಗೆ ಹೋಗುವವನಿರುವನು."

"ಬಹೇಬೋರಗಾಂವದ ಮೇಲಿಂದಲೇ ನಾನು ಶಿರಾಳೆಗೆ ಹೋಗುವೆನು." ಎಂದು ಜಗಜೀವನರಾಯನು ನುಡಿದನು.

"ಹಾಗಾದರೆ ನಾವು ಮೂವರೂ ಬಹೇಬೋರಗಾಂವಕ್ಕೆ ಹೋಗೋಣ. ಅಲ್ಲಿಂದ ನೀನು ಶಿರಾಳೆಗೆ ಹೋಗು, ನಾನು ಉಂಬ್ರಜಕ್ಕೆ ಮಹಾರಾಜರ ಕಡೆಗೆ ಹೋಗುತ್ತೇನೆ." ಎಂದು ಶ್ರೀಪತಿರಾಯನು ನುಡಿಯುವಷ್ಟರಲ್ಲಿ ದಿವಾಣಖಾನೆಯ ಒಳಿಯಲ್ಲಿಯ ನಡುಮನೆಯಲ್ಲಿ ಒಬ್ಬ ಸ್ತ್ರೀಯು ಕುಳಿತದ್ದು ಅವನ ಕಣ್ಣಿಗೆ ಬಿತ್ತು ಕೂಡಲೆ ಅವನು ಎದ್ದು ಅಲ್ಲಿಗೆ ಹೋಗಿ:— "ನೀವು ಯಾರು?" ಎಂದು ಕೇಳಿದನು.

"ಯಾರು! ಯಾಕೆ, ಗುರತು ಹತ್ತಲೊಲ್ಲದೇನು?"

"ಚದುರೆಯೇನು? ಚದುರ! ಇಲ್ಲಿ ನಿನ್ನ ಕೆಲಸವೇನಿದೆ?"

ಚದುರೆಯು ಮುಖವನ್ನು ಕೆಳಗ ಮಾಡಿ ಅನುರಾಗಪೂರ್ವಕವಾಗಿ:- "ಇಂದು ಆಶಾಢ ಏಕಾದಶಿ. ಬಹಳ ಮಾಡಿ ಪುರಾಣಿಕ ಶಾಸ್ತ್ರಿಗಳು ಪುರಾಣ ಹೇಳಲಿಕ್ಕೆ ಬರಬಹುದೆಂದು ತಿಳಿದು ಇಲ್ಲಿಗೆ ಬಂದು ಕುಳಿತೆನು. ಜನರು ಕೂಡಿದ ಮೇಲೆ ಬಂದರೆ ನನಗೆ ಯಾರು ಸ್ಥಳ ಕೊಡುವರು? ನಾನೇನು ನಿಮ್ಮ ರಾಜಕಾರಣವನ್ನು ಕೇಳಲಿಕ್ಕೆ ಬಂದವಳಲ್ಲ; ಪುರಾಣ ಕೇಳಲಿಕ್ಕೆ ಬಂದವಳು."

ಚದುರೆಯ ಧ್ವನಿಯನ್ನು ಕೇಳಿ, ಒಳಗಿದ್ದ ರಾಧಾಬಾಯಿಯು ಹೊರಗೆ ಬಂದು:—ಏನೇ ಚದುರೆ! ನೀನು ಇಲ್ಲಿ ಏಕೆ?

"ಎಲ್ಲರೂ ಹೀಗೇಕೆ ಮಾಡುವಿರಿ? ಶಾಹೂ ಮಹಾರಾಜ-ಪೇಶವೆ ನಿಂದಾ ಪುರಾಣ ಕೇಳಲಿಕ್ಕೆ ನನಗೇನು ದೈವ ಕಾಡುತ್ತಿರುವದು? ಪುರಾಣ ನಡೆಯಬಹುದೆಂದು ಇಲ್ಲಿಗೆ ಬಂದು ಕುಳಿತರೆ, ಎಲ್ಲರೂ ಹರಕೊಂಡು ತಿನ್ನುವವರಂತೆ

ಮಾಡುತ್ತಾರೆ!" ಎಂದು ಚದುರೆಯು ನುಡಿದವಳೇ ಅಲ್ಲಿಂದ ಹೊರಗೆ ಹೋದಳು.

"ನೋಡಿದಿರಾ, ಚದುರೆಯು ಎಷ್ಟು ಮೈಮೇಲೆ ಬಂದಿರುವಳು? ನೀವೇ ಅವಳನ್ನು ಏರಿಸಿರುತ್ತೀರಿ. ನಾನೇನು ಮಾಡಲಿ? ನಿಮಗೆ ಬೇಕಾದ ಮಾತು!"

"ನೀನು ಯಾವದಕ್ಕೊಂದು ಹೀಗೆಯೆ ಸಂಶಯ ತೆಗೆದುಕೊಳ್ಳುತ್ತೀ!" ಎಂದು ಶ್ರೀಪತಿರಾಯನು ನುಡಿದನು.

"ಸಂಶಯ ಹುಟ್ಟುವಂತೆ ಘಟನೆಗಳೊದಗಿದರೆ ಸಂಶಯ ಬರುತ್ತದೆ." ಹೊರಗೆ ದಿವಾಣಖಾನೆಯಲ್ಲಿ ಜಗಜೀವನರಾಯ-ಯಮಾಜಿರಾಯರಿದ್ದುದರಿಂದ ಈ ವಿಷಯದಲ್ಲಿ ಹೆಚ್ಚು ಮಾತು ಬೆಳೆಯಿಸದೆ ರಾಧಾಬಾಯಿಯು ಅಲ್ಲಿಂದ ಹೊರಡಬೇಕೆನ್ನುವಷ್ಟರಲ್ಲಿ ಪತಿಯ ಕೆಂಪಾದ ಬಾಯಿಯು ಅವಳ ಕಣ್ಣಿಗೆ ಬಿದ್ದಿತು. ಆಗ ಅವಳು:—"ಇದೇನು, ಇಂದು ದೊಡ್ಡ ಏಕಾದಶಿಯು. ಹೀಗಿದ್ದು ತಾಂಬೂಲವನ್ನು ಭಕ್ಷಿಸಿ ಉಪೋಷಣವನ್ನು ಮುರಿದಿರಲ್ಲ!"

"ಓಹೋ! ಲಕ್ಷ್ಯದಲ್ಲಿ ಬರಲಿಲ್ಲ. ನಿತ್ಯದಂತೆ ಇಂದು ತಬಕದಲ್ಲಿ ತಾಂಬೂಲವು ಇಡಲ್ಪಟ್ಟಿತ್ತು. ನೆನಪಿಗೆ ಬಾರದೆ ಎಲ್ಲರೂ ತಿಂದುಬಿಟ್ಟೆವು!"

ಹೀಗೆ ನುಡಿಯುತ್ತ ಶ್ರೀಪತಿರಾಯನು ದಿವಾಣಖಾನೆಯಲ್ಲಿ ಬಂದನು. ಅವನ ಹಿಂದೆ ರಾಧಾಬಾಯಿಯೂ ಬಂದಳು. ಎಲ್ಲರೂ ತಾಂಬೂಲ ಭಕ್ಷಣೆ ಮಾಡಿದ್ದನ್ನು ನೋಡಿ: —"ಯಾರಿಗೂ ಇಂದಿನ ಏಕಾದಶಿಯು ಲಕ್ಷ್ಯದಲ್ಲಿ ಬರಲಿಲ್ಲವೆ?"

"ಮಾತಿನ ಭರದಲ್ಲಿ ಲಕ್ಷ್ಯದಲ್ಲಿ ಬರಲಿಲ್ಲ. ನಿಮ್ಮ ದಾಸಿಯರು ತಾಂಬೂಲವನ್ನು ಇಲ್ಲಿಡತಕ್ಕದ್ದಿದ್ದಿಲ್ಲ" ಎಂದು ಯಮಾಜಿರಾಯನು ನುಡಿದನು.

ಇದು ಆ ಉನ್ಮತ್ತ ಚದುರೆಯ ಕೆಲಸವು. ಅವಳು ಯಾವ ಕೆಲಸಗಳನ್ನೂ ಮನಸ್ಸುಗೊಟ್ಟು ಮಾಡುವದಿಲ್ಲ. ಎಂದು ರಾಧಾಬಾಯಿಯು ನುಡಿದಳು.

"ಇಂಥ ದಾಸಿಯರನ್ನು ಮನೆಯಲ್ಲಿಟ್ಟುಕೊಳ್ಳಬಾರದು." ಎಂದು ಜಗಜೀವನರಾಯನು ಸೂಚಿಸಿದನು.

"ದಾಸೀ ಜನರಿಗೆ ಏಕಾದಶಿ ಮೊದಲಾದವುಗಳು ಹೇಗೆ ಗೊತ್ತಾಗಬೇಕು? ಈಗ ಆದದ್ದು ಆಗಿ ಹೋಯಿತು. ಉಪಾಧ್ಯಾಯರಿಂದ ಸಂಕಲ್ಪ ಹೇಳಿಸಿಕೊಂಡು ದಕ್ಷಿಣೆ ಕೊಟ್ಟರಾಯಿತು" ಎಂದು ಶ್ರೀಪತಿರಾಯನು ನುಡಿದು, ಆ ಮಾತನ್ನು ಅಲ್ಲಿಗೇ ಮುಗಿಸಿದನು.

ಏಕಾದಶೀ ದಿನದಲ್ಲಿ ತಾಂಬೂಲ ಭಕ್ಷಣ ಮಾಡಿದ ಪ್ರಾಯಶ್ಚಿತ್ತಾರ್ಥ ವಾಗಿ ಪುನಃ ಸ್ನಾನ-ಸಂಕಲ್ಪಗಳು ನೆರವೇರಿದವು. ಅನಂತರದಲ್ಲಿ ಶ್ರೀಪತಿ ರಾಯ, ಜಗಜೀವನರಾಯ, ಯವಾಜಿರಾಯರು ಬಹೇಬೋರಗಾಂವದಲ್ಲಿದ್ದ ದೇವರ್ಷಿ ರಾಮದಾಸರ ಭೆಟ್ಟಿಗಾಗಿ ಕರ್ಹಾಡವನ್ನು ಬಿಟ್ಟು ತೆರಳಿದರು.

---

## ಅದೇ ಬೈರಾಗಿ!

"ಏನೇ ಗಯ್ಯಾಳಿ! ಇಷ್ಟು ದಿನ ನಮ್ಮಲ್ಲಿ ಕಾಲಕಳೆದಿರುವೆ. ಏಕಾ ದಶಿಯ ದಿನ ತಾಂಬೂಲವನ್ನಿಡಬಾರದೆಂಬದು ಸಹ ನಿನಗೆ ಗೊತ್ತಾಗಲಿಲ್ಲ ವೇನು? ನೀನು ಎಲ್ಲರಿಗೂ ತಾಂಬೂಲವನ್ನು ತಿನ್ನಿಸಿ, ಉಪೋಷಣವನ್ನು ಭಂಗಗೊಳಿಸಿ ಬಿಟ್ಟೆ! ಇತ್ತೀಚೆಗೆ ನೀನು ಬಹಳೇ ಏರಿ ಕುಳಿತಿರುವೆ. ಶ್ರೀ-ಮಂತರೇ ನಿನ್ನನ್ನು ಏರಿಸಿ ಕುಳ್ಳಿರಿಸಿರುವರು. ಅವರೇ ನಿನ್ನ ಲಕ್ಷ್ಯದಲ್ಲಿಲ್ಲ ದಾಗ ನಮ್ಮಂಥವರ ಪಾಡೇನು?"

"ಬಾಯೀಸಾಹೇಬರೇ! ಇಂದು ನಾನು ತಾಂಬೂಲವಿಟ್ಟಿಲ್ಲ. ಏಕಾ ದಶಿಯು ಲಕ್ಷ್ಯದಲ್ಲಿಲ್ಲದ್ದಕ್ಕೆ ಯಾವ ದಾಸಿಯೋ ಇಟ್ಟಿರಬಹುದು."

"ನಾನು ಎಲ್ಲರನ್ನೂ ಕೇಳಿದೆನು. ಎಲ್ಲ ದಾಸಿಯರೂ ನಿನ್ನ ಮೇಲೆಯೇ ಹಾಕುತ್ತಾರೆ."

"ಹಾಕುತ್ತಿರಬಹುದು. ಶ್ರೀಮಂತರು ನನ್ನ ಮೇಲೆ ಮಮತೆಯುಳ್ಳವ ರಾಗಿದ್ದುದು ಅವರಿಗೆ ಸಹನವಿಲ್ಲ. ಅವರೆಲ್ಲರೂ ಒಂದಾಗಿ, ತಪ್ಪಿನ ಕೆಲಸಗಳ ನ್ನೆಲ್ಲ ನನ್ನ ಕೊರಳಿಗೇ ಕಟ್ಟತೊಡಗಿರುವರು. ನಿಜವಾಗಿ ಹೇಳುವೆನು; ನಾನು ಇಂದು ತಾಂಬೂಲವಿಟ್ಟಿಲ್ಲ."

"ನೀನು ಸುಳ್ಳಾಡುತ್ತಿರುವೆ ನನ್ನಂಥವಳಿಗೇ ಮೋಸಮಾಡಲೆಳೆ ಸುವ ನಿನ್ನ ಉನ್ಮತ್ತತನವಾದರೂ ಎಷ್ಟಿದ್ದೀತು!"

"ನನ್ನ ದುರ್ದೈವ! ಮತ್ತೇನು?"

"ನೀನು ದುರ್ದೈವಿಯಲ್ಲ; ಸುದೈವಿಯು! ಅಂತೆಯೇ ಶ್ರೀಮಂತರ ಮನೆಯಲ್ಲಿ ನಿನ್ನ ಅಟ್ಟಹಾಸವು ಇಷ್ಟು ಬೆಳೆದಿದೆ. ನೀನು ಒಬ್ಬ ದಾಸಿಯೆಂಬ ದನ್ನು ಎಂದೋ ಮರೆತಿರುವೆ. ನನ್ನ ಪ್ರೇಮಳ ಸ್ವಭಾವದ ಹಾಗು ಸಹಾನು ಭೂತಿಯ ದುರುಪಯೋಗವು ಈ ಬಗೆಯಿಂದಾಗುವದೆಂದು ನನ್ನ ಕಲ್ಪನೆ ಯಿರಲಿಲ್ಲ."

ರಾಧಾಬಾಯಿಯು ಕರ್ಕಶವಾಣಿಯಿಂದ ಚದುರೆಗೆ ಅಂದಳು. ಚದುರೆಯ ಕಣ್ಣುಗಳು ಅಶ್ರುಪೂರ್ಣವಾದವು. ಒಂದು ಸಣ್ಣ ತಪ್ಪಿನ ನೆವ ತೆಗೆದು ಈ ಬಗೆಯಾಗಿ ರಾಧಾಬಾಯಿಯು ಮಾತಾಡುತ್ತಿರುವದರ ಮರ್ಮವು ಅವಳಿಗೆ ತಿಳಿಯದೆ ಇರಲಿಲ್ಲ. ಆಗ ಅವಳು ವಿನಯದಿಂದ:––"ನಾನಂತು ತಪ್ಪು ಮಾಡಿಲ್ಲ. ನಿಮ್ಮ ಭಾವನೆಯಂತೆ ನಾನು ತಪ್ಪುಗಾರಳಾಗಿದ್ದರೂ, ದೈನ್ಯಾವಸ್ಥೆಗೀಡಾದ ಈ ಬಡವೆಯ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.'

"ಏನು! ನೀನು ದೈನ್ಯಾವಸ್ಥೆಗೀಡಾದ ಬಡವೆಯೆ? ನೀನೀಗ ನನ್ನ ಸರಿಸಮಾನಸ್ಕಂಧಳಾಗಿ ಕುಳಿತಿರುವೆ ಬರಬರುತ್ತ ನನ್ನ ಮೇಲೆ ನಿನ್ನ ಕೈಯಾಗಬಹುದು. ಜಿಜಾಬಾಯಿಯಂಥ ಪಾತಾಳಯಂತ್ರಿಯನ್ನೂ ಏಳುಕೆರೆಯ ನೀರು ಕುಡಿಸಿದ ಘನವಂತೆಯು ನೀನು! ನನ್ನಂಥವಳೆಂದರೆ ನಿನಗೆ ಹುಲ್ಲುಕಡ್ಡಿಯೇ ಸರಿ!"

"ನೀವು ಹೀಗೆ ಮಾತಾಡಿದ ಮೇಲೆ ಮಾತು ನಿಂತಿತು."

"ಮಾತಾಡದೆ ಇರಬೇಕೆಂದು ನೀನು ಇಚ್ಛಿಸುವೆಯಲ್ಲವೆ? ನನ್ನ ಸೌಜನ್ಯಕ್ಕೆ ತಕ್ಕ ಪ್ರತಿಫಲವನ್ನು ನೀನು ಕೊಟ್ಟಿರುವೆ. ಚದುರೆ, ಇಂದಿನಿಂದ ನೀನು ನನ್ನ ಮನೆಗೆ ಬರುವ ಕಾರಣವಿಲ್ಲ. ಒಂದು ವೇಳೆ ನಿನಗೆ ದೊರೆತಿರುವ ಅಧಿಕಾರದಿಂದ ಬಂದೆಯೆಂದರೆ, ಮಾನಗೇಡಾಗಿ ಹೊರಟು ಹೋಗಬೇಕಾದೀತು. ಕೊಲ್ಹಾಪುರದಲ್ಲಿ ಅನುಭವಿಸಿದ ದಂಡನೆಯನ್ನು ಮತ್ತೆ ಅನುಭವಿಸಬಾರದೆಂದು ನಿನ್ನ ಅಪೇಕ್ಷೆಯಿದ್ದರೆ, ಇದೇ ನನ್ನ ನಿನ್ನ ಕೊನೆಯ ಭೆಟ್ಟಿಯಾಗಬೇಕು. ಒಂದು ವೇಳೆ ಶ್ರೀಮಂತರ ಮುರುವತ್ತಿನಿಂದ ನೀನು ಇಲ್ಲಿಯೇ ಇರಲಿಕ್ಕೆ ಹವಣಿಸದರೆ ಪ್ರಸಂಗವು ವಿಪರೀತವಾಗುವದು. ಈ ಸ್ಥಳದಲ್ಲಿ ನೀನಿರಬೇಕು; ಇಲ್ಲವೆ ನಾನಿರಬೇಕು. ಇಬ್ಬರೂ ಇನ್ನು ಮೇಲೆ ಒಂದೇ ಸ್ಥಳದಲ್ಲಿ ವಾಸಿಸಿರುವಂತಿಲ್ಲ! ಇಷ್ಟರ ಮೇಲಿಂದ ನಿನ್ನ ಸದಸದ್ವಿವೇಕ ಬುದ್ಧಿಗೆ ತೋಚಿದ ಹಾಗೆ ಮಾಡು"

ಪ್ರಕರಣವು ಪ್ರಕೋಪಕ್ಕೆ ಮುಟ್ಟಿದ್ದರಿಂದ ಚದುರೆಯು ಭಯವಿಹ್ವಲಳಾದಳು ದೊಡ್ಡ ಆಶ್ರಯವು ತಪ್ಪುವದೆಂದೂ, ಮುಂದೆ ತನಗೆ ಆಧಾರವಿಲ್ಲದಾಗುವದೆಂದೂ ಅವಳು ಬಹುಪರಿಯಾಗಿ ಕ್ಲೇಶಪಡತೊಡಗಿದಳು. ಆಗ ಅವಳು ರಾಧಾಬಾಯಿಯ ಕಾಲುಗಳನ್ನು ಹಿಡಿದು:—"ಬಾಯಿಸಾಹೇಬರೆ, ನನ್ನಿಂದ ಅಪರಾಧವಾಗಿರುವದೆಂದು ನೀವು ತಿಳಿದುಕೊಂಡಿರುವಿರಿ ಅದಕ್ಕೆ ನನ್ನ ಉಪಾಯವಿಲ್ಲ. ಇನ್ನು ಮೇಲೆ ನಾನು ತುಂಬಾ ಎಚ್ಚರದಿಂದ ನಿಮ್ಮ

ಸೇವೆ ಮಾಡಿಕೊಂಡಿರುವೆನು ಬಡವೆಯನ್ನು ಉಪೇಕ್ಷಿಸಬೇಡಿರಿ. ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ. ಆಶ್ರಯದಾತರಾದ ನೀವು ಹೀಗೆ ನುಡಿದರೆ ನಾನು ಹೇಗೆ ಬದುಕಲಿ? ಬಡವೆಯ ಮೇಲೆ ನಿಷ್ಠುರತನ ಮಾಡ ಬೇಡಿರಿ."

"ನೀನು ಬಡವೆಯೆ? ನಿನಗೆ ಆಶ್ರಯವಿಲ್ಲವೆ? ನಿನ್ನ ಮುಂದೆ ನಾವೇ ಬಡವರು ನಿನ್ನಂಥವಳನ್ನು ಆಶ್ರಯದಲ್ಲಿರಿಸಿಕೊಂಡರ, ನಾವೇ ನಿನ್ನ ಆಶ್ರಯ ಹೊಂದುವ ಪ್ರಸಂಗಪ್ರಾದಗೀತು ನೀನು ದೊಡ್ಡವಳವ್ವಾ! ಘನ ವಂತಳವ್ವಾ! ಚತುರಯಾದ ಚದುರ! ಇನ್ನು ನಿನ್ನ ನೆರಳು ಸಹ ನಮಗೆ ಬೇಡ. ಈ ಕ್ಷಣದಲ್ಲಿ ನನ್ನ ಕಣ್ಮರೆಯಾಗಿ ಹೊರಟು ಹೋಗು ಹೋದ ವಳು ಮುಂದೆ ಎಂದೂ ನನ್ನ ಕಣ್ಣಿಗೆ ಸಹ ಬೀಳಬೇಡ ತಿಳಿಯಿತೇ!"

"ಇದು ಖಂಡಿತವಾದ ಮಾತೆ?"

"ಖಂಡಿತವು ನಿಶ್ಚಯವು!"

"ನನ್ನ ದುರ್ದೈವಕ್ಕೆ ಯಾರು ಮಾಡುವದೇನು?" ಎಂದು ಚದುರೆಯು ಕಣ್ಣೀರುದುರಿಸುತ್ತ ನುಡಿದು —"ಬಾಯಿಸಾಹೇಬರೆ, ಹೋಗಿಬರುವೆನು. ಅಪ್ಪಣೆ ಕೊಡಿರಿ." ಎಂದು ನಮಸ್ಕರಿಸಿದಳು.

"ಹೋಗು; ಆದರ ಅತ್ತವೇ ಹೋಗು ತಿರುಗಿ ಬರಬೇಡ!"

"ಆಗಲಿ, ಹೋಗಿಬರುವೆನು."

"ಹಾ! ಮತ್ತೆ ಅದೇ ಮಾತು! ಹೋಗಿಬರುವೆನೆನ್ನಬೇಡ; ಹೋಗುವೆ ನೆನ್ನು."

"ಆಗಲಿ. ಹೋಗುವೆನು, ಅಪ್ಪಣೆ ಕೊಡಿರಿ."

"ಅಪ್ಪಣೆ ಕೊಟ್ಟೇಬಿಟ್ಟಿರುವೆನು, ಹೊರಟು ಹೋಗು!"

ಚದುರೆಯು ರಾಧಾಬಾಯಿಯ ಮನೆ ಬಿಟ್ಟು ತೆರಳಿದಳು ಆಗ ಅವಳ ಸ್ಥಿತಿಯು ಪ್ರವಾಹಪತಿತಳಂತಾಗಿತ್ತು. ಇನ್ನು ಎಲ್ಲಿರಬೇಕು, ಯಾರ ಆಶ್ರಯದಲ್ಲಿ ಕಾಲಕಳೆಯಬೇಕು? ಮೊದಲಾದ ವಿಚಾರಗಳಿಂದ ಅವಳು ಮೂಢಳಾಗಿ ಹೋಗಿದ್ದಳು. ಅವಳ ಮೇಲೆ ಆಕಾಶವೇ ಕಳಚಿ ಬಿದ್ದಂತಾ ಯಿತು. ಆಗ ಅವಳು ಅದೇ ಊರಲ್ಲಿದ್ದ ತನ್ನ ಅಬಚಿಯ ಮನೆಗೆ ಹೋಗದೆ, ಪ್ರೀತಿಸಂಗಮದ ಬಳಿಯಲ್ಲಿದ್ದ ಕೃಷ್ಣಾದೇವಿಯ ಮಂದಿರದ ದಾರೀ ಹಿಡಿದಳು.

ಒಡತಿಯು ಹೊರಗೆ ಹಾಕಿದ್ದರಿಂದ ಚದುರೆಯು ಚಿಂತಾಕ್ರಾಂತಳಾಗಿ ದ್ದಳು ಅವಳು ಕೃಷ್ಣಾದೇವಿಯ ಮುಂದೆ ಕೈ ಜೋಡಿಸಿ—"ದೇವಿ, ಪೂರ್ವ ಜನ್ಮದಲ್ಲಿ ನಾನು ಯಾವ ಮಹತ್ತರವಾದ ಪಾಪ ಮಾಡಿರುವೆನೆಂದು ಈಗ

ಇಂಥ ವಿಪತ್ಪರಂಪರೆಗಳಿಗೆ ಈಡುಮಾಡುತ್ತಿರುವೆ? ನನಗೆ ಇಡೀ ಆಯುಷ್ಯದಲ್ಲಿ ಒಂದಾದರೂ ಸೌಖ್ಯದ ದಿನವಿರಬಾರದೆ? ನಾನು ಯಾವುದನ್ನು ಸೌಖ್ಯದ ಬೀಡೆಂದು ತಿಳಿದುಕೊಳ್ಳುವೆನೋ, ಅದು ದುಃಖದ ಆಗರವಾಗುವದು! ತವರು ಮನೆಯಲ್ಲಿ ಸುಖವು ದೊರೆಯಲಿಲ್ಲ; ಪತಿಯ ಮನೆಯ ಸೌಖ್ಯವು ಕರ್ರಗಿರ ಪಹೋ ಬೆಳ್ಳಗಿರುವನೋ ಎಂಬದನ್ನು ಕಾಣಲೇ ಇಲ್ಲ. ಕುಲಯುವತಿಯಾದ ನಾನು ಇತರರ ಬಲುಮೆಯಿಂದ ನನ್ನ ಕುಲ-ಶೀಲಗಳನು ಮಾರಿಕೊಂಡು ರಾಜಾಶ್ರಯ ಹೊಂದಿದೆನು ಅಲ್ಲಿಯಾದರೂ ಸುಖಬಡುವದು ನನ್ನ ಹಣೇಬರಹದಲ್ಲಿದ್ದಿಲ್ಲ. ರಾಜನ ರಾಣಿಯೆಂದು ಮೆರಯುವ ಅಟ್ಟಹಾಸದಲ್ಲಿದ್ದ ನಾನು, ಬೀದಿಯ ಭಿಕ್ಷುಕಿಯಾದೆನು ಅನಂತರದಲ್ಲಿ ಪ್ರತಿನಿಧಿಯ ಸೇವೆಗೆ ಬಂದೆನು ವೃದ್ಧನಿರಲಿ ವಯಾತೀತನಿರಲಿ ಬೇಕಾದಹಾಗಿದ್ದರೂ ನನ್ನ ಕಾರ್ಯವು ಸಾಧಿಸಿದರಾಯಿತೆಂದು ತಿಳಿದು ಶ್ರೀಮಂತನ ಪದರಿನಲ್ಲಿ ಬಿದ್ದೆನು ಶ್ರೀಮಂತನೇನೋ ನನ್ನನ್ನು ವಿವಾಹಿತ ಪತ್ನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು; ಆದರೆ ಮಾಡುವದೇನು? ಅವನ ಮೇಲೆ ಅವನ ಪತ್ನಿಯ ವರ್ಚಸ್ಸು ಬಹಳ ಹೀಗಾಗಿ ಅಲ್ಲಿ ನನ್ನ ಆಟವು ನಡೆಯಲಿಲ್ಲ. ಕಡೆಗೆ ನಾನು ಆ ಸ್ಥಳಕ್ಕೂ ಎರವಾಗಬೇಕಾಯಿತು ಮುಂದೆ ಎಲ್ಲಿಗೆ ಹೋಗಲಿ? ಯಾರ ಆಶ್ರಯವನ್ನು ಹೊಂದಲಿ? ಕಡೆಗೆ ಪಾವನಸಲಿಲೆಯಾದ ಕೃಷ್ಣೆಯನ್ನೇ ಆಶ್ರಯಿಸಬೇಕಾಗುವದೋ ಏನೋ! ದೇವೀ ಮುನಿಯಬೇಡ. ಪ್ರವಾಹಪತಿತಳಾದ ನನ್ನ ಮೇಲೆ ದಯೆಯಿಡು "

ಚದುರೆಯು ಕೃಷ್ಣಾದೇವಿಯನ್ನು ಪ್ರಾರ್ಥಿಸಿ, ದೇವಾಲಯದಲ್ಲಿಯೇ ಕುಳಿತುಕೊಂಡಳು ರಾತ್ರಿಯಾಯಿತು ಜನರ ಸದ್ದು ಅಡಗಿತು. ಅವಳು ಅಲ್ಲಿಯೇ ಅಡ್ಡಾದಳು. ಅನೇಕ ವಿಚಾರಗಳಿಂದ ಅವಳು ತ್ರಸ್ತಳಾದುದರಿಂದ ನಿದ್ದೆ ಬರಲಿಲ್ಲ. ಅವಳು ರಾತ್ರಿಯನ್ನು ಹೇಗಾದರೂ ಕಳೆದಳು. ಎದ್ದು ನೋಡಿದಳು; ಪೂರ್ವದಿಶೆಗೆ ಕೆಂಪಡರಿತ್ತು. ಅವಳು ಎದ್ದು ನದಿಯಲ್ಲಿ ಮುಖಮಾರ್ಜನಾದಿಗಳನ್ನು ತೀರಿಸಿ, ಕೃಷ್ಣಾದೇವಿಗೆ ನಮಸ್ಕಾರ ಮಾಡಿ, ಕಾಲುಗಳು ತೆರಳಿದತ್ತ ಹೊರಟಳು.

ತುಸ ದೂರ ಹೋಗುವಷ್ಟರಲ್ಲಿ ಒಬ್ಬ ಮುದುಕೆಯು ಅವಳಿಗೆ ಕೂಡಿದಳು. ಅವಳನ್ನು ಕುರಿತು ಚದುರೆಯು:—"ಅಮ್ಮಾ, ನೀವು ಎಲ್ಲಿಗೆ ಹೋಗುವಿರಿ?"

"ನದಿಯನ್ನು ದಾಟಿ ಹೋಗಬೇಕಾಗಿದೆ. ನೀನು ಎಲ್ಲಿಗೆ ಹೋಗುವೆ?" ಎಂದು ಆ ಮುದುಕೆಯು ಚದುರೆಯನ್ನು ಕೇಳಿದಳು.

ಇಂಥ ಸ್ಥಳಕ್ಕೇ ಹೋಗಬೇಕೆಂಬದನ್ನು ಚದುರೆಯು ಗೊತ್ತುಪಡಿಸಿರಲಿಲ್ಲ. ಅವಳು ಕರ್ನಾಡವನ್ನು ಬಿಡಬೇಕಾಗಿತ್ತು; ಎತ್ತ ಕಡೆಗಾದರೂ ಹೋಗಬೇಕಾಗಿತ್ತು. ಅವಳು ಮುದುಕೆಯನ್ನು ಕುರಿತು —"ನೀವು ಹೊಳೆಯಾಚೆಗೆ ಹೋಗುವಿರೇನು? ನೆಟ್ಟಗಾಯಿತು. ನಾನೂ ಅತ್ತ ಕಡೆಗೇ ಹೊರಟಿರುವೆನು. ಬೆಳಕು ಬೀಳುವವರೆಗೆ ಜೋಡು ದೊರೆತಂತಾಯಿತು," ಎಂದು ನುಡಿದಳು.

ಆಗ ಇನ್ನೂ ಚೆನ್ನಾಗಿ ಬೆಳಕು ಬಿದ್ದಿರಲಿಲ್ಲ; ಆದರೂ ಅರುಣಪ್ರಕಾಶದಿಂದ ಸಮೀಪದ ಪ್ರದೇಶವು ಮುಸಮುಸಕಾಗಿ ಕಾಣತೊಡಗಿತ್ತು. ಸ್ವಲ್ಪ ದೂರ ಹೋದ ಮೇಲೆ ಚದುರೆಯು -"ಈ ವೇಳೆಯಲ್ಲಿ ನದೀ ದಾಟಬಹುದೆ? ಮೊನ್ನೆ ನದಿಗೆ ಮಹಾ ಪ್ರವಾಹವು ಬಂದಿರುವದರಿಂದ ನಾಕೆಯ ಹೊರತು ನದೀಪಾರಾಗಲಿಕ್ಕೆ ಬರುವಂತಿಲ್ಲ."

"ನೀನು ಯೋಚನೆ ಮಾಡಬೇಡ. ನನ್ನ ಗುರುತಿನ ಅಂಬಿಗನೊಬ್ಬನಿಗೆ ಹೇಳಿರುವೆನು ಅವನು ಇಷ್ಟು ಹೊತ್ತಿಗ ನದಿಯಲ್ಲಿ ನಾಕೆಯನ್ನು ತಂದಿರಬಹುದು."

ಚದುರೆಯು ಯೋಚನೆಗೊಳಗಾದಳು ಇಂಥ ನಸುಕಿನಲ್ಲಿ ಈ ಮುದುಕೆಗೆ ನದಿಯನ್ನು ದಾಟುವಂಥ ಪ್ರಸಂಗವೇನಿರಬಹುದು? ಇವಳು ತನ್ನ ಆ ಗುರುತಿನ ಅಂಬಿಗನಿಗೆ ಯಾವಾಗ ಬರಹೇಳಿರಬಹುದು? ಇಷ್ಟು ಪ್ರಯತ್ನದಿಂದ ನದಿಯನ್ನು ದಾಟಲಿಕ್ಕೆ ಯಾವ ಅವಸರದ ಕಾರ್ಯವಿರಬಹುದು? ಇವಳು ಸರಳತನದವಳೋ, ಹಿಂದೆ ಗಂಟುಬಿದ್ದ ಮುದುಕೆಯಂಥ ಕಪಟತನದವಳೋ? ಎಂಬ ವಿಚಾರ ತರಂಗಗಳು ಅವಳ ಮನಸ್ಸಿನಲ್ಲಿ ಹುಟ್ಟಿ ಭಯವನ್ನುಂಟು ಮಾಡಿದವು ಚದುರಯು ಹಿಂದೆಯೊಮ್ಮೆ ಇಂಥ ಒಬ್ಬ ಮುದುಕೆಯಿಂದ ಗಂಡಾಂತರದಲ್ಲಿ ಬಿದ್ದಿದ್ದಳು ಅವಳು ಕರ್ನಾಡಕ್ಕೆ ಹೊಸದಾಗಿ ಬಂದಾಗ ಒಬ್ಬ ಮುದುಕೆಯು ಅವಳ ಬಳಿಗೆ ಬಂದು-'ನಿನ್ನ ಅಬಚಿಯು ಅಡವಿಯಲ್ಲಿ ಕಟ್ಟಿಗೆ ಕೂಡಿಸುವಾಗ ಬವಳಿ ಬಂದು ಬಿದ್ದಿರುವಳು' ಎಂದು ಹೇಳಿ ಅವಳನ್ನು ಅಡವಿಗೆ ಕರದೊಯ್ದಳು. ಅಲ್ಲಿ ಇಬ್ಬರು ಟೊಣಪರು ಚದುರೆಯನ್ನು ಹಿಡಿದು ಎಳಕೊಂಡು ಸಾಗಿದರು. ಕೊಲ್ಹಾಪುರದ ಜಿಜಾಬಾಯಿಯ ಅನುಚರರೇ ಅವರಾಗಿದ್ದರು. ಅವರು ಆ ಮುದುಕೆಯ ಮಧ್ಯಸ್ತಿಕೆಯಿಂದ ಚದುರಯನ್ನು ಸ್ವಾಧೀನಪಡಿಸಿಕೊಂಡಿದ್ದರು. ಇಷ್ಟರಲ್ಲಿ ಕರ್ನಾಡದ ನಿವಾಸಿಗಳು ಅದೇ ದಾರಿಯಿಂದ ಹೊರಟಿದ್ದರು. ಅವರು ಶ್ರೀಮಂತರ ದಾಸಿಯ ಮೇಲೆ ಬಂದ ಗಂಡಾಂತರವನ್ನು ದೂರ ಮಾಡುವದಕ್ಕಾಗಿ ಧಾವಿಸಿ ಬಂದರು.

ಅಂತೆಯೇ ಬಂದು ಅವಳು ಆ ಅತ್ಯಾಚಾರಿಗಳ ಕೈಯೊಳಗಿಂದ ಪಾರಾಗಿದ್ದಳು. ಇಂದಿನ ಪ್ರಸಂಗವಾದರೂ ಅಂತಹದರಲ್ಲೊಂದು ಇರಬಹುದೇನೆಂಬ ಆಶಂಕೆಯು ಮನಸ್ಸಿನಲ್ಲಿ ಹುಟ್ಟಿದ್ದರಿಂದ, ಅವಳು ಭಯವಿಹ್ವಲಳಾದಳು. ಆಗ ಅವಳು ಮುದುಕೆಯನ್ನು ಕುರಿತು --"ನೀನು ಹೋಗು. ನಾನು ಬೆಳಗಾದ ಮೇಲೆ ಬರುವೆನು"

"ಅದೇಕೆ? ನಿನಗೆ ಭಯವೆನಿಸುವದೆ?"

"ಹೌದು"

"ನಾನು ಜೊತೆಯಲ್ಲಿರಲಾಗಿ ಭಯಪಡುವೆಯೇಕೆ?"

"ನನಗೆ ನಿನ್ನ ಜೊತೆಯು ಬೇಕಾಗಿಲ್ಲ."

"ಬೇಕಾಗಿಲ್ಲವೆಂದರೆ ಕೇಳುವರಾರು?"

"ಇದೊಳ್ಳೇ ಒತ್ತಾಯವು!" ಎಂದು ಚದುರೆಯು ನುಡಿಯುವಷ್ಟರಲ್ಲಿ ಕರಿಯ ಬುರುಕೆಯನ್ನು ಹಾಕಿಕೊಂಡಿದ್ದ ಒಂದು ವ್ಯಕ್ತಿಯು ತನ್ನ ಎದುರಿಗೆ ಬರುತ್ತಿರುವದು ಚದುರೆಗೆ ಕಂಡಿತು. ಕೂಡಲೆ ಅವಳು --"ನೀವು ಯಾರು?" ಎಂದು ಕೇಳಿದಳು.

"ನಾನು ಇರುವೆನು." ಎಂದು ಕರಿಯ ಬುರುಕೆಯ ವ್ಯಕ್ತಿಯಿಂದ ಉತ್ತರ ಬಂದಿತು

"ನಾನು ಎಂದರೆ?" ಎಂದು ಚದುರೆಯು ಭಯಗೊಂಡು ನುಡಿದಳು ಉತ್ತರಬರಲಿಲ್ಲ, ಆದರೆ ಆ ವ್ಯಕ್ತಿಯು ಮಾತ್ರ ಸಮೀಪಕ್ಕೆ ಬರತೊಡಗಿತು ಭಯದಿಂದ ಚದುರೆಯ ಸರ್ವಾಂಗವು ಕಂಪಿಸತೊಡಗಿತು. ಓಡಿ ಹೋಗುವ ದೊತ್ತಟ್ಟಿಗಿರಲಿ, ಮುಂದೆ ಹೆಜ್ಜೆ ಇಡಲಿಕ್ಕೆ ಸಹ ಅವಳ ಕಾಲುಗಳು ಏಳದಾದವು. ನಸುಕಿನ ವೇಳೆಯಲ್ಲಿ ಪಿಶಾಚಿಗಳು ಮರಳಿ ಸ್ಮಶಾನಕ್ಕೆ ಹೋಗುವವೆಂದು ಅನ್ನುತ್ತಾರೆ. ಎದುರಿಗೆ ಬರುತ್ತಿರುವ ವ್ಯಕ್ತಿಯು ಮನುಷ್ಯನಾಗಿರದೆ, ಪಿಶಾಚಿಯೇ ಇರಬಹುದೆಂದು ಅವಳ ಗ್ರಹಿಕೆಯಾಯಿತು ಪಿಶಾಚಿಯ ವಿಚಾರವು ಮನದಲ್ಲಿ ಬಂದ ಮೇಲಂತೂ ಅವಳ ಧೈರ್ಯವು ಪೂರಾ ಹೋಯಿತು. ಆಗ ಅವಳು ನಡುಗುವ ಧ್ವನಿಯಿಂದ —"ಅಮ್ಮಾ, ಅಲ್ಲಿ ಬರುತ್ತಿರುವವರು ಯಾರಾಗಿರಬಹುದು?"

ಮುದುಕೆಯು ಚದುರೆಯ ಮಾತಿಗೆ ಉತ್ತರ ಕೊಡದೆ, ಮೊದಲಿನ ಗತಿಯಿಂದಲೇ ಮುಂದೆ ಹೊರಟಿದ್ದಳು. ಕೂಡಲೆ ಮುದುಕೆಗೆ ಆ ಪಿಶಾಚಿಯು ಬಡಕೊಂಡಿತೆಂದು ಅವಳ ಭಾವನೆಯಾಯಿತು. ತನ್ನ ಅವಸ್ಥೆಯಾದರೂ ಹಾಗೆಯೇ ಆಗುವದೆಂದು ತಿಳಿದು, ಅವಳು ಓಡಿ ಹೋಗುವ

ವಿಚಾರ ಮಾಡಿದಳು; ಆದರೆ ಓಡಲಿಕ್ಕೆ ಅವಳ ಕಾಲುಗಳಲ್ಲಿ ಶಕ್ತಿಯೆಲ್ಲಿತ್ತು? ಒಂದೆರಡು ಕ್ಷಣಗಳಲ್ಲಿ ಪಿಶಾಚಿಯ ಕಣ್ಣು ಮರೆಯಾಗುವಂತೆ ಓಡಬೇಕೆಂಬ ಕುತೂಹಲದಿಂದ ಅವಳು ಕಾಲ್ದೆಗೆದಳು ವಾಯುವೇಗದಿಂದ ಓಡಬೇಕೆಂದು ನಿರ್ಧಾರ ಮಾಡಿದ ಅವಳಿಂದ ನಾಲ್ಕು ಹೆಜ್ಜೆಸಹ ಕಿತ್ತಿಡುವದಾಗಲಿಲ್ಲ! ಅವಳ ಕಾಲುಗಳು ಭೂಮಿಯಲ್ಲಿ ಸಿಕ್ಕಂತಾಗಿದ್ದವು. ತನ್ನ ಅವಸ್ಥೆಯು ಹೀಗಾಗಲಿಕ್ಕೆ ಆ ಪಿಶಾಚಿಯೇ ಕಾರಣವೆಂದು ಅವಳು ತಿಳಿದಳು. ಅಷ್ಟರಲ್ಲಿ ದೊಡ್ಡಗಾಳಿಯು ಬಂದು ಸುತ್ತಮುತ್ತಲಿನ ಗಿಡಗಳನ್ನೆಲ್ಲ ಅಲ್ಲಾಡಿಸಿತು. ಈ ಘಟನೆಯಿಂದ ಎದುರಿಗೆ ಬರುತ್ತಿರುವ ವ್ಯಕ್ತಿಯು ಪಿಶಾಚಿಯೇ ಎಂಬದರ ಬಗ್ಗೆ ಅವಳಲ್ಲಿ ಯಾವ ಸಂಶಯುವೂ ಉಳಿಯಲಿಲ್ಲ. ಪಿಶಾಚಿಯೇ ಗಾಳಿಯ ರೂಪದಿಂದ ವಿಶ್ವವನ್ನು ಅಲ್ಲಾಡಿಸುತ್ತಿರುವದೆಂದು ಅವಳು ತಿಳಿದಳು. ಕಾಲು ಗಳು ಕಿತ್ತದಂತಾದವು, ಬಾಯಿಂದ ಮಾತುಗಳು ಹೊರಡದಾದವು. ಒಮ್ಮೆ ಗಟ್ಟಿ ಮನಸ್ಸುಮಾಡಿ ಚೀರಿಬಿಡಬೇಕೆಂಬ ವಿಚಾರವು ಅವಳಲ್ಲಿ ಹುಟ್ಟಿತು; ಯಾಕಂದರೆ, ತನ್ನ ಕೂಗಿಗೆ ಯಾರಾದರೂ ಧಾವಿಸಿ ಬಂದು, ಪಿಶಾಚಿಯ ದವಡೆಯೊಳಗಿಂದ ತನ್ನನ್ನು ಪಾರುಮಾಡಬಹುದೆಂದು ಅವಳು ತಿಳಿದಳು. ಈ ವಿಚಾರವು ಮನಸ್ಸಿನಲ್ಲಿ ಬರುವದೊಂದೇ ತಡ; ಅವಳು ತನ್ನಲ್ಲಿಯ ಶಕ್ತಿ ಯೆಲ್ಲವನ್ನೂ ಕಂಠದಲ್ಲಿ ತಂದು, ಒಳ್ಳೆಯ ಗಟ್ಟಿಯಾಗಿ "ಭೂ-ಭೂ-ಭೂ-ತ-ತ!" ಎಂದು ಕೂಗಿದಳು. ತನ್ನ ಈ ಕೂಗು ಕನಿಷ್ಠ ಪಕ್ಷಕ್ಕೆ ಎರಡು ಕೂಗಳತೆ ದೂರವಾದರೂ ಕೇಳರಬಹುದೆಂದು ಅವಳು ತಿಳಿದಿರಬಹುದು, ಆದರೆ ಅವಳ ಧ್ವನಿಯು ಪತ್ತಿಪ್ಪತ್ತು ಆಡಿ ಅಂತರದಲ್ಲಿದ್ದ ಮುದುಕೆಗೂ ಎದುರಿಗೆ ಬರುತ್ತಿ ರುವ ಆ ವ್ಯಕ್ತಿಗೂ ಸ್ಪಷ್ಟವಾಗಿ ಕೇಳಿಸಿತೋ ಇಲ್ಲವೋ ಎಂಬ ಸಂಶಯ ಬರುವಂತಿತ್ತು ಮುದುಕೆಯು ಮಾತ್ರ ಚದುರೆಯ ಲಘುಗರ್ಜನೆಯನ್ನು ಅನುಮಾನದಿಂದ ಗುರುತಿಸಿ. -"ಚದುರೆ! ಹೆದರಬೇಡ ಇಲ್ಲಿ ಭೂತಗಳಿಲ್ಲ."

ಮುದುಕೆಯು ಅಪರಿಚಿತಳಾದ ತನ್ನ ಹೆಸರು ಗುರುತಿಸಿದ್ದರಿಂದ ಚದು ರೆಯು ಮತ್ತಿಷ್ಟು ಬೆರಗಾದಳು. ಆಗ ಅವಳು ಮುದುಕೆಯನ್ನು ಕುರಿತು.- "ಹಾಗಾದರ ಎದುರಿಗೆ ಬರುತ್ತಿರುವವರು ಯಾರು?"

"ನಾನು ಪಿಶಾಚಿಯಲ್ಲ; ಮನುಷ್ಯನು!" ಎಂದು ಎದುರಿಗೆ ಬರುತ್ತಿರುವ ವ್ಯಕ್ತಿಯು ಮಾತಾಡಿತು. ಕೂಡಲೆ ಆ ವ್ಯಕ್ತಿಯು ಚದುರೆಯ ಬಳಿಗೆ ಧಾವಿಸಿ ಬಂದು ಅವಳ ಕೈಹಿಡಿದು:——"ಚದುರೆ! ನೀನು ಸುಮ್ಮನೆ ನನ್ನ ಹಿಂದೆ ಬರುವೆಯೋ? ಜೀವವನ್ನು ಕಳೆದುಕೊಳ್ಳುವೆಯೋ?" ಎಂದು ನುಡಿದು, ತನ್ನ ಬಳಿಯಲ್ಲಿ ಬಚ್ಚಿಟ್ಟಿದ್ದ ಕೈಗತ್ತಿಯನ್ನು ಹಿರಿಯಿತು.

ಆ ಧ್ವನಿಯೂ ಕೃತಿಯೂ ಮನುಷ್ಯನದೆಂದು ಚದುರೆಗೆ ತಿಳಿಯಿತು. ಈ ಮನುಷ್ಯನಿಗಿಂತ ಪಿಶಾಚಿಯೇ ಮೇಲು, ಎಂಬ ವಿಚಾರವು ಅವಳಲ್ಲಿ ಹುಟ್ಟಿತು. ಆಗ ಅವಳು:--"ನೀವು ಯಾರು?'' ಎಂದು ನಡುಗುತ್ತ ನುಡಿದಳು.

ಆ ಮನುಷ್ಯನು ಚದುರೆಯ ಕೈಯನ್ನು ಹಿಡಿದು ಎಳಕೊಂಡು ಹೋಗುತ್ತ:—''ಸುಮ್ಮನೆ ನನ್ನೊಡನೆ ಬಾ. ಒಂದಕ್ಕರವಾದರೂ ಮುಖದಿಂದ ಹೊರಟರೆ ನಿನ್ನ ರುಂಡವನ್ನು ತುಂಡರಿಸುವೆನು. ಎಚ್ಚರದಿಂದಿರು!''

ಚದುರೆಯು ಸುಮ್ಮನೆ ಅವನು ಎಳೆದತ್ತ ಹೋಗಹತ್ತಿದಳು. ಆ ಮನುಷ್ಯನು ನದಿಯ ಕಡೆಗೆ ನಡೆದಿದ್ದನು. ಸ್ವಲ್ಪ ವೇಳೆಯಲ್ಲಿ ನದೀತೀರವು ಬಂತು. ಅಲ್ಲಿ ಒಂದು ನೌಕೆಯು ಇತ್ತು. ಚದುರೆಯು ಸುತ್ತಮುತ್ತು ನೋಡಿದಳು; ಯಾರೂ ಇದ್ದಿಲ್ಲ. ಅವಳನ್ನು ಗಂಡಾಂತರದಲ್ಲಿ ಕೆಡಹಿದ್ದ ಆ ಮುದುಕೆಯು ಇಷ್ಟರಲ್ಲಿ ಎತ್ತೋ ಮಾಯವಾಗಿದ್ದಳು! ಅಷ್ಟು ಹೊತ್ತಿಗೆ ಕತ್ತಲೆಯು ಪೂರಾ ಹರಿದಿತ್ತು. ಅವಳು ತನ್ನನ್ನು ಹಿಡಿತಂದ ವ್ಯಕ್ತಿಯನ್ನು ದಿಟ್ಟಿಸಿ ನೋಡಿದಳು. ಕೂಡಲೆ ಅವಳ ಮುಖದಿಂದ.—''ಅದೇ ಬೈರಾಗಿ!'' ಎಂಬ ಉದ್ಗಾರವು ಹೊರಟಿತು!

''ಹೌದು, ನಾನು ಅದೇ ಬೈರಾಗಿ!'' ಎಂದು ನುಡಿದು, ಆ ಮನುಷ್ಯನು ಚದುರೆಯನ್ನು ತನ್ನ ನೌಕೆಯಲ್ಲಿ ಕುಳ್ಳಿರಿಸಿಕೊಂಡು ಸಾಗಿದನು.



# ದುರ್ಜನರು ಹಾವಿನಂತೆ.

"ಮಹಾರಾಜರೆ, ನೀವು ಏನೇ ಅನ್ನಿರಿ; ಹಾವನ್ನು ನಂಬಿ ಜೀವಂತವಾಗಿ ಬಿಡುವಂಥ ಭೂತದಯೆಯು ಅನುಚಿತವಾತದ್ದೆಂದು ನನಗೆ ತೋರುವದು."

"ಪೇಶವೆ, ನೀವು ಇನ್ನೂ ತರುಣರಿರುತ್ತೀರಿ. ಹೊಸ ರಕ್ತವು ನಿಮ್ಮ ಮೈಯಲ್ಲಿ ಉಕ್ಕುತ್ತಿರುವದು; ಆದರೆ ನೀವೂ ಇನ್ನು ಮೇಲೆ ಸದಸದ್ವಿವೇಕದಿಂದ ನಡೆಯಲಿಕ್ಕೆ ಕಲಿಯಲಿಕ್ಕೆ ಬೇಕು ಅಪಕಾರವನ್ನು ಅಪಕಾರದಿಂದ ಯಾರಾದರೂ ತೀರಿಸುವರು, ಆದರೆ ಉಪಕಾರದಿಂದ ಅಪಕಾರವನ್ನು ತೀರಿಸುವದೇ ನಿಜವಾದ ಪುರುಷಾರ್ಥವು. ನೀವು ಅನ್ನುತ್ತಿರುವಂತೆ ಉದಾಜಿ ಚವ್ಹಾಣನು ಸರ್ಪದಂತಿರುವನೆಂಬದು ನನಗೆ ಗೊತ್ತಿಲ್ಲವೇನು?"

"ಸರ್ಪ ವಿಂಚೂ ನಾರಾಯಣ; ಪರಿ ತೇ ವಂದಾವೇ ದುರೂನ' ಎಂದು ಸಾಧು ಸಂತರ ಉಪದೇಶವಿರುವದು. ಅಸ್ಥಾನದಲ್ಲಿ ದಯೆದೋರಬೇಕೆಂದು ಯಾವ ಸಾಧು-ಸಂತರೂ ಅನ್ನುತ್ತಿರುವದಿಲ್ಲ. ಚವ್ಹಾಣನು ಅನಾಯಾಸವಾಗಿ ನಿಮ್ಮ ಕೈಯಲ್ಲಿ ಸಿಕ್ಕಿದ್ದನು. ಅವನನ್ನು ಬಿಡುಗಡೆ ಮಾಡತಕ್ಕದ್ದಿದ್ದಿಲ್ಲ ಕಡೆಗೆ ಅವನಿಂದ ಶರಣು ಪತ್ರವನ್ನಾದರೂ ಬರೆಯಿಸಿಕೊಂಡು ಬಿಡಬೇಕಾಗಿತ್ತು. ಹಾವಿನ ಹಲ್ಲು ಮುರಿದೇ ಅವರೊಡನೆ ಆಟವಾಡಬೇಕು."

"ಚವ್ಹಾಣನಿಗೆ ನಾನು ಚನ್ನಾಗಿ ಉಪದೇಶಿಸಿರುವೆನು. ಅವನು ಬಹುಮಟ್ಟಿಗೆ ಕೊಟ್ಟವಚನವನ್ನು ಮುರಿಯಲಿಕ್ಕಿಲ್ಲ. ಸಂಭಾಜಿಗೆ ತಿಳಿಹೇಳಿ ಅವನನ್ನು ಅವಿಚಾರದಿಂದ ಪರಾವರ್ತನಗೊಳಿಸುವೆನೆಂದು ಚವ್ಹಾಣನು ನನಗೆ ಆಶ್ವಾಸನೆ ಕೊಟ್ಟಿರುವನು. ನಮ್ಮೊಡನೆ ಅಂತಹ ದ್ವೇಷ ಬಳೆಯಿಸಲಿಕ್ಕೆ ನಾವಾದರೂ ಅವನ ಅಹಿತವನ್ನೇನು ಮಾಡಿರುವೆವು? ಕೈಗೆ ಸಿಕ್ಕವನನ್ನು ಕೊಲ್ಲಲಿಕ್ಕೂ, ಸೆರೆಯಲ್ಲಿಡಲಿಕ್ಕೂ ನಮಗೆ ಸಾಧ್ಯವಿದ್ದಾಗ, ದೊಡ್ಡ ಮನಸ್ಸಿನಿಂದ ನಾವು ಆತನ ಅಪರಾಧವನ್ನು ಕ್ಷಮಿಸಿ, ಅವನನ್ನು ಋಣಿಯನ್ನಾಗಿ ಮಾಡಿರುವೆವು. ಇಂತಹನು ಎಂದೂ ತಿರುಗಿ ಬೀಳಲಾರನೆಂದು ನನ್ನ ಅತ್ಮ ವಿಶ್ವಾಸ. ಪೇಶವೆ! ಜಗತ್ತಿನಲ್ಲಿ ಪ್ರೇಮವಿಜಯವು ಶಕ್ತಿಯ ವಿಜಯಕ್ಕಿಂತಲೂ ಹೆಚ್ಚು ಚಿರಸಾಯಿಯಾಗಿಯಿರುತ್ತದೆ."

"ಮಹಾರಾಜರೇ, ಪರಿಣಾಮಾಂತ್ಯದಲ್ಲಿ ತಮಗೆ ಎಲ್ಲವೂ ತಿಳಿಯುವದು. ಅದರ ಬಗ್ಗೆ ಈಗ ಹೆಚ್ಚು ಮಾತಾಡಿ ಪ್ರಯೋಜನವಿಲ್ಲ."

ಈ ಮೇರೆಗೆ ಶಾಹೂ ಮಹಾರಾಜ-ಬಾಜೀರಾಯರಲ್ಲಿ ಸಂಭಾಷಣವು ನಡೆದಿತ್ತು. ಆಗ ಮಹಾರಾಜರ ವಸತಿಯು ಉಂಬ್ರಜದಲ್ಲಿತ್ತು. ಕೆಲವು ರಾಜಕಾರಣದ ವಿಷಯವಾಗಿ ಮಾತಾಡುವದಕ್ಕಾಗಿ ಅವನು ಬಾಜೀರಾಯ ನನ್ನು ಪುಣೆಯಿಂದ ಕರೆಯಿಸಿದ್ದನು; ಪಂತಪ್ರತಿನಿಧಿ ಶ್ರೀಪತಿರಾಯನನ್ನೂ ಕರೆಯಲಿಕ್ಕೆ ದೂತನು ಹೋಗಿದ್ದನು. ಬಾಜೀರಾಯನು ಬರುವಷ್ಟರಲ್ಲಿ ಶಾಹೂಮಹಾರಾಜನು ನಭೂತಪೂರ್ವವೆಂದು ಭಾವಿಸಿಕೊಂಡಿದ್ದ ಒಂದು ಕೆಲಸದಲ್ಲಿ ವಿಜಯಸಂಪಾದನೆ ಮಾಡಿದ್ದನು. ಅವನು ಉದಾಜಿ ಚವ್ಹಾಣ ನನ್ನು ಕರೆಯಿಸಿ, ಮುಂದೆ ಎರಡೂ ಸ್ವರಾಜ್ಯಗಳಲ್ಲಿ ಮೈತ್ರಿಯು ಸ್ಥಿರವಾಗುವ ದಕ್ಕೆ ಪ್ರಯತ್ನ ಮಾಡುವ ಬಗ್ಗೆ ಅವನಿಂದು ವಚನ ತಕ್ಕೊಂಡಿದ್ದನು ಛತ್ರ ಪತಿಯು ಇದೇ ವಿಷಯವನ್ನು ಬಾಜೀರಾಯನಿಗೆ ಹೇಳಿದನು ಚವ್ಹಾ ಣನು ಯಾವ ವಿಧದ ಮನುಷ್ಯನೆಂಬದು ಸಾಧುಭಾವದ ಶಾಹೂ ಮಹಾ ರಾಜನಿಗೆ ಅಷ್ಟು ಚೆನ್ನಾಗಿ ತಿಳಿಯುತ್ತಿದ್ದಿಲ್ಲ; ಆದರೆ ಬಾಜೀರಾಯನು ಅವನ ಸ್ವಭಾವವನ್ನು ಪೂರಾ ಅರಿತಿದ್ದನು. ಅಂತೆಯೇ ಕೈಗೆ ಸಿಕ್ಕಿದ್ದ ಚವ್ಹಾಣ ನನ್ನು ಬಿಡತಕ್ಕದ್ದಿದ್ದಿಲ್ಲೆಂಬ ಅಭಿಪ್ರಾಯ ಕೊಟ್ಟನು

ಬಾಜೀರಾಯನು ಉದಾಜಿ ಮೊದಲಾದ ಕೊಲ್ಹಾಪುರದ ಪಕ್ಷದ ಜನ ರನ್ನು ಮೆತ್ತಗೆ ಮಾಡುವದಕ್ಕಾಗಿ ಪ್ರಯತ್ನ ಮಾಡಿದ್ದಿಲ್ಲವೆಂತಲ್ಲ. ಉದಾ ಜಿಗೆ ಕೊಲ್ಹಾಪುರದ ಸಂಭಾಜಿ ರಾಜನ ಸಹಾಯವಿರುತ್ತಿತ್ತು ಸಾತಾರೆ ಯವರ ವಿರುದ್ಧವಾಗಿ ಯುದ್ಧಮಾಡಿ ದಕ್ಷಿಣದಲ್ಲಿ ತನ್ನ ಅಧಿಕಾರವನ್ನು ಅವನು ಪ್ರಸ್ಥಾಪಿಸುವನೆಂದು ಸಂಭಾಜಿರಾಜನು ತಿಳಿಯುತ್ತಿದ್ದನು. ಅವನ ಪುಂಡಾಟಿಕೆಯನ್ನು ಮುರಿಯ ಹೋದರೆ, ಅದರ ಪೆಟ್ಟು ತನ್ನ ಅಣ್ಣ-ತಮ್ಮಂ ದಿರೊಳಗಿನವನಾದ ಸಂಭಾಜಿಗೆ ತಗಲುವದೆಂದೂ, ಸ್ವಕೀಯರ ಘಾತಮಾಡು ವದು ಉಚಿತವಲ್ಲವೆಂದೂ ಶಾಹೂಮಹಾರಾಜನು ತಿಳಿಯುತ್ತಿದ್ದನು ಈ ಉದಾರಭಾವನೆಯ ಪರಿಣಾಮವು ವಿಪರೀತವಾಗಿ ಪರಿಣಮಿಸಿ, ಉದಾಜಿ ಚವ್ಹಾಣ, ಚಂದ್ರಸೇನ ಜಾಧವ ಮೊದಲಾದವರ ಉಪಟಳವು ಮಿತಿ ಮೀರಿತ್ತು. ಉದಾಜಿಯಂತೂ ಸಾತಾರೆಯ ರಾಜ್ಯದಲ್ಲಿ ಚವ್ಹಾಣ ಚೌಧಾ ಯಿಯನ್ನು ಎತ್ತ ತೊಡಗಿದ್ದನು. ಶಾಹೂರಾಜನು ಶಿರಾಳೆಯ ಸಮೀಪ ಹಿಲ್ಲಿದ್ದ ಉಂಭೇರಿಯ ಅಡವಿಯಲ್ಲಿ ನಾಲ್ಕಾರು ದಿನಗಳ ಹಿಂದೆ ಬೇಟೆಗೆ ಹೋದಾಗ ಚವ್ಹಾಣನು ತನ್ನ ಶಿರಾಳೆಯ ಸೀಮೆಯಲ್ಲಿದ್ದು, ಹತ್ತರದಲ್ಲಿಯ ಸಾತಾರೆಯ ಗಡಿಯೊಳಗಿನ ಹಳ್ಳಿಗಳಲ್ಲಿ ಚವ್ಹಾಣ ಚೌಧಾಯಿಯನ್ನು ಎತ್ತ ತೊಡಗಿರುವದು ತಿಳಿಯಿತು. ಆಗ ಮಹಾರಾಜನ ಕಡೆಯ ಕೆಲವು ಜನರು

ಚವ್ಹಾಣನನ್ನು ಹಿಡಕೊಂಡು ಬರುವೆವೆಂದು ಹೇಳಿದರು. ಹೀಗೆ ಅಸಾವಧ ಸ್ಥಿತಿಯಲ್ಲಿದ್ದಾಗ ಹಿಡಕೊಂಡು ಬರುವದು ಅಧರ್ಮವೆಂದು ಅವನು ತನ್ನ ಜನರಿಗೆ ಹೇಳಿದನು; ಹಾಗು ಚವ್ಹಾಣನ ಕಡೆಗೆ ರಾಜಮುದ್ರೆಯ ಆಶ್ವಾಸನ ಪತ್ರ ಕಳುಹಿಸಿ, ಅವನನ್ನು ಕರೆಯಿಸಿಕೊಂಡು, ಮುಂದೆ ಎರಡೂ ರಾಜ್ಯಗಳಲ್ಲಿ ಸ್ನೇಹಸಂಬಂಧವು ಬೆಳೆಯುವಂತೆ ಪ್ರಯತ್ನ ಮಾಡುವ ಬಗ್ಗೆ ಅವನಿಂದ ವಚನ ತಕ್ಕೊಂಡನು. ಮಹಾರಾಜನ ಈ ಕೆಲಸವು ಬಾಜೀರಾಯನಿಗೆ ಸರಿದೋರಲಿಲ್ಲ.

ಶ್ರೀಪತಿರಾಯನು ಬಾಜೀರಾಯನ ಪ್ರತಿಸ್ಪರ್ಧಿಯಾಗಿದ್ದನಷ್ಟೆ? ಅವನು ಮಹಾರಾಜನ ಕಿವಿಯಲ್ಲಿ ಬಾಜೀರಾಯನ ವಿರುದ್ಧವಾಗಿ ಏನಾದರೊಂದು ಮಾತು ಹೇಳಿ, ಅವನ ಮನಸ್ಸು ಕೆಡಿಸಲಿಕ್ಕೆ ಹವಣಿಸುತ್ತಿದ್ದನು ಮಹಾರಾಜರಿಗೆ ಯಾರು ಯಾರು ಎಂಥವರಿರುವರೆಂಬದು ಗೊತ್ತಿರುತ್ತಿದ್ದರೂ, ಒಮ್ಮೊಮ್ಮೆ ಸಂಶಯಕ್ಕೊಳಪಡುತ್ತಿದ್ದರು. ಪೇಶವೆಯು ಪುಣೆಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿ, ಸಾತಾರೆಯ ರಾಜ್ಯದ ಸವತಿ ರಾಜಧಾನಿಯನ್ನು ನಿರ್ಮಾಣ ಮಾಡುವವನಿರುವನೆಂಬ ಸಂಗತಿಯು ಶಾಹೂರಾಜನಿಗೆ ಗೊತ್ತಾಗಿತ್ತು. ಈ ವಿಷಯದಲ್ಲಿ ಬಾಜೀರಾಯನ ಅಭಿಪ್ರಾಯವೇನಿರುವದೆಂಬದನ್ನು ತಿಳಿದುಕೊಳ್ಳುವದು ಅವನನ್ನು ಉಂಬ್ರಜಕ್ಕೆ ಕರಯಿಸಿದ ಕಾರಣಗಳಲ್ಲೊಂದಾಗಿತ್ತು ಚವ್ಹಾಣನ ವಿಷಯದ ಮಾತುಗಳು ಮುಗಿದ ಮೇಲೆ ಶಾಹೂರಾಜನು:—"ಪೇಶವೆ, ಚವ್ಹಾಣನು ತಿರುಗಿ ಬಿದ್ದರೆ ಅವನ ಪಾರುಪತ್ಯ ಮಾಡಲಿಕ್ಕೆ ಬರುವದು." ಎಂದು ನುಡಿದು:—"ನಿಮ್ಮ ವಿಷಯವಾಗಿ ಜನರಲ್ಲಿ ಕೆಲವು ಆಕ್ಷೇಪಗಳು ಹೊರಟಿವೆ."

"ಏನು?" ಎಂದು ಬಾಜೀರಾಯನು ಬೆರಗಾಗಿ ಕೇಳಿದನು.

"ಪುಣೆಯಲ್ಲಿ ಕೋಟೆ ಕಟ್ಟಿಸ ಹತ್ತಿರುವಿರೆಂದು ಕೇಳಿದ್ದೇನೆ."

"ನಿಜ. ತಮ್ಮ ಆಜ್ಞಾಪತ್ರ ಹೊಂದಿಯೇ ನಾನು ಈ ಕಾರ್ಯವನ್ನು ಪ್ರಾರಂಭಿಸಿರುವೆನು."

"ಯುದ್ಧದ ಕೋಟೆಯ ಪದ್ಧತಿಯಿಂದ ಕಟ್ಟಡ ನಡೆದಿರುವದಂತೆ."

"ನಿಜ. ಛತ್ರಪತಿಯ ಸಿಂಹಾಸನದ ಮುಖ್ಯ ಪ್ರಧಾನನ ಮಂದಿರವು ಯುದ್ಧದ ಕೋಟೆಯ ಪದ್ಧತಿಯಿಂದಿರದಿದ್ದರೆ ಹೇಗೆ?"

"ಈಗ ಅಷ್ಟೊಂದು ಕೆಲಸ ಮಾಡಿಸಬೇಡಿರಿ. ಸದ್ಯಕ್ಕೆ ಸಾದಾ ಕೋಟೆಯೇ ಇರಲಿ."

"ಮಹಾರಾಜರ ಅಪ್ಪಣೆಯು ಶಿರಸಾಮಾನ್ಯವಿರುವದು."

ಬಾಜೀರಾಯನ ವರ್ಧಮಾನ ವೈಭವವನ್ನು ನೋಡಿ ಸಹಿಸದೆ, ಶ್ರೀಪತಿರಾವ ಪ್ರತಿನಿಧಿ, ತ್ರ್ಯಂಬಕರಾವ ದಾಭಾಡೆ, ಸತ್ತೇಸಿಂಗ ಭೋಸಲೆ ಮೊದಲಾದ ಜನರು ಇಂತಹ ಕ್ಷುಲ್ಲಕ ಮಾತುಗಳನ್ನು ಮೇಲಿಂದ ಮೇಲೆ ಶಾಹೂಮಹಾರಾಜನ ಕಿವಿಯಲ್ಲಿ ಊದಿ, ಅವನ ಮನಸ್ಸು ಕಲುಷಿತಗೊಳಿಸ ಲಿಕ್ಕೆ ಯತ್ನಿಸುತ್ತಿದ್ದರು; ಆದರೆ ಈ ಸಂಗತಿಯು ಬಾಜೀರಾಯನಿಗೆ ತಿಳಿ ಯದೆ ಬರುತ್ತಿದ್ದಿಲ್ಲ. ಅವನು ಪ್ರತಿಸ್ಪರ್ಧಿಗಳ ಪಾರುಪತ್ಯ ಮಾಡಬೇಕೆಂದು ನಿರ್ಧರಿಸಿದ್ದನು. ಅದರಲ್ಲಿ ಶ್ರೀಪತಿರಾಯನ ಮೇಲೆ ಶಾಹೂರಾಜನ ಅಂಥ ವಿಶ್ವಾಸವಿತ್ತು. ಪ್ರತಿನಿಧಿಯು ಕರ್ತೃತ್ವಶಾಲಿಯಲ್ಲೆಂಬದು ಶಾಹೂರಾಜನಿಗೆ ಗೊತ್ತಿದ್ದಿಲ್ಲವೆಂತಲ್ಲ; ಆದರೂ ಕಳೆಯುದನ್ನು ಮುರಿಯುಬಾರದೆಂಬ ತತ್ತ್ವ ದವನು ಅವನಿದ್ದುದರಿಂದ, ಶ್ರೀಪತಿರಾಯನಂಥ ಜನರ ಕಾರಸ್ಥಾನಗಳು ಅವ್ಯಾಹತವಾಗಿ ನಡೆಯಲಿಕ್ಕೆ ಅವಕಾಶವಾಗಿದ್ದಿತು. ಹಿಂದು ಸ್ವರಾಜ್ಯದ ಮಾನ್ಯತೆಯು ಪೇಶವೆಯಿಂದ ವೃದ್ಧಿಂಗತವಾಗತೊಡಗಿರುವದೆಂಬ ಮಾತಿ ನಲ್ಲಿ ಶಾಹೂರಾಜನಿಗೆ ಸಂದೇಹವಿದ್ದಿಲ್ಲ. ಹೀಗಿದ್ದರೂ, ಪೇಶವೆಯು ತನ್ನ ಸೇವಕನಿರುವನೆಂಬದನ್ನು ಮರೆಯಲಿಕ್ಕೆ ಅವನು ಸಿದ್ಧನಿರಲಿಲ್ಲ. ಆದ್ದರಿಂದ ಪರಸ್ಪರರು ಪರಸ್ಪರರ ಅಂತರಂಗವನ್ನು ಪ್ರವೇಶಿಸಲಿಕ್ಕೆ ಸಮರ್ಥರಾಗಲಿಲ್ಲ. ಬಾಜೀರಾಯನು ಶಾಹೂ ಮಹಾರಾಜರಲ್ಲಿ ನಿಶ್ಚಲಶ್ರದ್ಧೆಯುಳ್ಳವನಾಗಿದ್ದನು. ಆದ್ದರಿಂದ ಅರಸನ ಆದರಕ್ಕೆ ಅಲ್ಪಸ್ವಲ್ಪ ಪಾತ್ರರಾದ ಪ್ರತಿನಿಧಿಯಂಥ ಸ್ವಕೀ ಯರ ಪಾರುಪತ್ಯ ಮಾಡುವದಕ್ಕೆ ಬಾಜೀರಾಯನಿಗೆ ದುಸ್ತರವಾಗಿ ಹೋಗಿತ್ತು. ಇಂತಹ ಭಾವನೆಯು ಶಾಹೂರಾಜನಲ್ಲಿದ್ದುದರಿಂದಲೇ ಕೊಲ್ಹಾಪುರದವರ ಉಪಟಳವು ಬೆಳೆಯುತೊಡಗಿತ್ತು.

ಬಾಜೀರಾಯನು ಶನಿವಾರವಾಡೆಯನ್ನು ಕಟ್ಟಿಸುವದರ ಬಗ್ಗೆ ತನ್ನ ಆಜ್ಞೆಯನ್ನು ಶಿರಸಾಮಾನ್ಯ ಮಾಡಿದ್ದನ್ನು ನೋಡಿ ಶಾಹೂರಾಜನಿಗೆ ಸಂ-ತೋಷವಾಯಿತು. ಆಗ ಅವನು:—"ಪೇಶವೆ! ಶನಿವಾರವಾಡೆಯ ಬಗ್ಗೆ ನಿಮ್ಮನ್ನು ವಿಚಾರಿಸಿದ್ದಕ್ಕಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ. ಮಾತಿನ ಓಘದಲ್ಲಿ ನಿಮಗೆ ಈ ಪ್ರಶ್ನೆಯನ್ನು ಕೇಳಿದೆನು. ನಿಮ್ಮನ್ನು ಆತುರತೆಯಿಂದ ಇಲ್ಲಿಗೆ ಕರೆಯಿಸಿದ ಉದ್ದೇಶವು ಬೇರೆಯೆ ಇರುವದು .... " ಎಂದು ಶಾಹೂ ಮಹಾರಾಜನು ನುಡಿಯುವಷ್ಟರಲ್ಲಿ, ಒಬ್ಬ ಮರಾಟಿಗನು ಅಲ್ಲಿಗೆ ಬಂದು, ಮಹಾರಾಜನಿಗೆ ನಮಸ್ಕರಿಸಿ ನಿಂತನು. ಕೂಡಲೆ ಮಹಾರಾಜನು ಆ ಮಾತನ್ನು ಅಲ್ಲಿಗೇ ನಿಲ್ಲಿಸಿ.—"ಯಾಕೆ ಶಂಭುಸಿಂಗ, ಮತ್ತೇನು ವಾರ್ತೆ?"

"ಮಹಾರಾಜರೆ!" ಶಂಭುಸಿಂಗನು ಗಂಭೀರವಾಣಿಯಿಂದ —"ಚವ್ಹಾ

ಣನು ಉಂಡವ ನಯು ಜಂತೆ ಎಣಿಸುವ ಘಾತಕಯಿರುವನು. ಇವನು ತಮ್ಮ ಕೈಯಲ್ಲಿ ಸಿಕ್ಕಾಗ ಅವನ ಮೊದಲಿನ ಅಪರಾಧಗಳ ಬಗ್ಗೆ ಶಾಸನ ಮಾಡದೆ ದಯೆಯನ್ನು ತೋರಿಸಿದಿರಿ. ಈ ಉಪಕಾರವನ್ನು ಅಪಕಾರ ದಿಂದಲೇ ತೀರಿಸಲಿಕ್ಕೆ ಅವನು ಬದ್ಧಕಂಕಣನಾಗಿರುವನು. ಸಂಭಾಜಿರಾಜರೂ ಜವ್ಹಾಣನೂ ಸಾತಾರೆಯ ರಾಜ್ಯದ ಮೇಲೆ ದಂಡೆತ್ತಿ ಬರುವದಕ್ಕಾಗಿ ಸಿದ್ಧತೆ ಮಾಡುತ್ತಿರುವರು ''

''ಮಹಾರಾಜರೆ, ದುರ್ಜನರು ಹಾವಿನಂತೆ ಇರುವರೆಂದು ನಾನು ಹೇಳ ಲಿಲ್ಲವೆ?'' ಎಂದು ಬಾಜೀರಾಯನು ನುಡಿಯುವಷ್ಟರಲ್ಲಿ, ಹಗಲಲ್ಲಿಯೇ ಕೈಯಲ್ಲಿ ದೀವಟಿಗೆ ಹಿಡಿದುಕೊಂಡು ಶ್ರೀ ಬ್ರಹ್ಮೇಂದ್ರಸ್ವಾಮಿಗಳು ಬರತೊಡ ಗಿರುವರೆಂದು ಸೇವಕನು ಮಹಾರಾಜನಿಗೆ ಹೇಳಿದನು

---

## ಶ್ರೀ ಬ್ರಹ್ಮೇಂದ್ರಸ್ವಾಮಿ

ಬ್ರಹ್ಮೇಂದ್ರಸ್ವಾಮಿಗಳ ಆಗಮನದ ವಾರ್ತೆಯು ತಿಳಿದ ಕೂಡಲೆ, ಶಾಹೂಮಹಾರಾಜನೂ ಬಾಜೀರಾಯನೂ ಶಂಭುಸಿಂಗನೂ ಎದುರಿಗೆ ಹೋಗಿ, ಅವರ ಚರಣಗಳಿಗೆ ಅಭಿವಂದಿಸಿ ಒಳಗೆ ಕರೆತಂದರು. ಬ್ರಹ್ಮೇಂದ್ರ ಸ್ವಾಮಿಗಳು ಆಗ ಸಂತಾಪಾತಿರೇಕವುಳ್ಳವರಾಗಿದ್ದರು. ಅವರ ನೇತ್ರಗಳು ಕೆಂಪಡರಿದ್ದವು ಸ್ವಾಮಿಗಳ ರುದ್ರಾವತಾರವನ್ನು ನೋಡಿ ಶಾಹೂರಾಜನು ಭಯವಿಹ್ವಲನಾಗಿ ಕೈ ಜೋಡಿಸಿ—'ಮಹಾರಾಜರೆ, ಈ ದಾಸನಲ್ಲಿ ಇಷ್ಟೇಕೆ ರುಷ್ಟರಾಗಿರುವಿರಿ? ಹಗಲು ಹಾಡು ದೀವಟಿಗೆಯನ್ನು ಕೈಯಲ್ಲಿ ಹಿಡಿದು, ಇಂಥ ಭೀಷಣ ಸ್ವರೂಪದಿಂದ ಆಗಮನವಾದದ್ದರ ಅರ್ಥವೇನು?''

'ಇದರ ಅರ್ಥವೆ?'' ಬ್ರಹ್ಮೇಂದ್ರಸ್ವಾಮಿಗಳು ಕ್ರೋಧಯುಕ್ತ ವಾಣಿ ಯಿಂದ:—''ಇಂದಿನ ನಿನ್ನ ರಾಜ್ಯವೆಂದರ ಹಗಲುವಾಡಿಯ ಸಂಸ್ಥಾನವು! ಸಾಧು-ಸಜ್ಜನರಿಗೆ ನಿನ್ನ ರಾಜ್ಯದಲ್ಲ ಸೌಖ್ಯವೇ ದೊರೆಯುವಂತಿಲ್ಲ. ಇಲ್ಲಿ ಯಾರ ವಿತ್ತ-ಜೀವಿತಗಳಿಗೂ ಶಾಶ್ವತಿಯಿಲ್ಲ. ಇಂಥ ಪಾಪಭೂಮಿಯಲ್ಲಿ ನನ್ನಂಥ ಗೋಸಾವಿಯನ್ನು ಯಾರು ಕೇಳಬೇಕ? ಆದ್ದರಿಂದಲೇ ನಾನು ಇಲ್ಲಿಂದ ಹೊರಡುವ ಯೋಚನೆ ಮಾಡಿದ್ದೇನೆ. ಹಗಲುವಾಡಿಯ ಸಂಸ್ಥಾನ ದಲ್ಲಿ ಹಗಲುಹಾಡು ದೀವಟಿಗೆ ಹಿಡಿಯದಿದ್ದರೆ ಹೇಗೆ? ಶಾಹೂರಾಜಾ, ನಾನು ನಿನ್ನ ಈ ಕರ್ಮಮಯ ಸ್ವರಾಜ್ಯದಿಂದ ಹೊರಟೆನು'' ಎಂದು ನುಡಿದು

ಬಹ್ಮೇಂದ್ರಸ್ವಾಮಿಗಳು ನಿಜವಾಗಿಯೂ ಅಲ್ಲಿಂದ ಹೊರಡಲನುವಾದರು.

ಅವರ ಈ ವರ್ತನದಿಂದ ಶಾಹೂರಾಜನು ಮತ್ತಿಷ್ಟು ಭಯಗೊಂಡನು ಆಗ ಅವನು ಭಕ್ತಿ-ವಿನಯಗಳಿಂದ:—"ಸ್ವಾಮಿಮಹಾರಾಜರೇ, ನನ್ನಿಂದ ತಪ್ಪುಗಳಾಗಿದ್ದರೆ ಅವಶ್ಯವಾಗಿ ನಿದರ್ಶನಕ್ಕೆ ತಂದುಕೊಡಿರಿ. ನಾನು ಅವುಗಳನ್ನು ತಿದ್ದಿಕೊಂಡು, ಸ್ವರಾಜ್ಯದಲ್ಲಿ ಶಾಂತತೆ-ಸುವ್ಯವಸ್ಥೆಗಳು ನೆಲೆಗೊಳ್ಳುವಂತೆ ಮಾಡುವೆನು."

"ಶಾಹೂರಾಜಾ! ನೀನು ರಾಜ್ಯದಲ್ಲಿ ಶಾಂತತೆಯನ್ನು ನೆಲೆಗೊಳಿಸುವೆಯಾ? ಪರಕೀಯರು ಸ್ವರಾಜ್ಯವನ್ನು ನುಗ್ಗಿ ಹಗಲು ಹಾಡು ಪ್ರಜಾಜನರನ್ನು ಸುಲಿಯ ಹತ್ತಿರುವರು. ನಿಮ್ಮ ದಾಯಾದಿತನದ ಸೆಳವಿಗೆ ಸಿಲುಕಿ ಎಷ್ಟೋ ಕುಟುಂಬಗಳು ವಿಧ್ವಂಸವಾಗುತ್ತಿರುವವು. ದೀನ ದರಿದ್ರರ ಎದುರಿಗೆ ಸಾಕ್ಷಾತ್ ಮೃತ್ಯುವೇ ನಿಂತಂತಾಗಿದೆ. ನಿನ್ನ ರಾಜ್ಯದಲ್ಲಿ ಇಂಥ ಎಷ್ಟೋ ಕೋಲಾಹಲಗಳು ನಡೆದಿದ್ದರೂ, ನೀನು ಮಾತ್ರ ಅಂಧನು! ಬಧಿರನು! ಬೇಕಾದಲ್ಲಿ ಬೇಕಾದಂಥ ಅನರ್ಥಗಳು ನಡೆದಿದ್ದರೂ, ನೀನು ಮಾತ್ರ ಇತ್ತ ಕಡೆಗೆ ಮೃಗಯಾವಿಹಾರದಲ್ಲಿ ತೊಡಗಿ ಸ್ವಚ್ಛಂದವೃತ್ತಿಯಿಂದ ಕಾಲಕಳೆಯಲಾರಂಭಿಸಿರುವೆ. ಸ್ವಂತ ಬಾಹುಬಲದಿಂದ ಹೊಸ ಸ್ವರಾಜ್ಯ ಸಾಧನೆ ಮಾಡುವದೊತ್ತಟ್ಟಿಗಿರಲಿ, ಇದ್ದದ್ದನ್ನು ಕಾಯ್ದುಕೊಳ್ಳುವದು ಸಹ ನಿನಗೆ ಅಸಾಧ್ಯವಾಗತೊಡಗಿದೆ. ಪೂರ್ವಜರು ಕೈಕೆಳಗಿನ ಏಕನಿಷ್ಠ ಸೇವಕರ ನೆರವಿನಿಂದ ಸ್ವರಾಜ್ಯ ಸಂಪಾದನೆಯನ್ನು ಹೇಗ ಮಾಡಿದರೆಂಬ ಇತಿಹಾಸವು ನಿನಗೆ ಅರಿಯದಿಲ್ಲ. ಬಹು ಕಷ್ಟಾರ್ಜಿತವಾದ ರಾಜ್ಯವನ್ನು ರಕ್ಷಣೆ ಮಾಡುವ ಯೋಗ್ಯತೆಯೂ ನಿನ್ನಲ್ಲಿರದಿದ್ದರೆ ಯಾತಕ್ಕೆ ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕು? ಶಾಹೂರಾಜಾ! ರಾಜ್ಯಕರ್ತೃತ್ವವು ಅಸಿಧಾರಾವ್ರತವಾಗಿದೆ. ಈ ವ್ರತದ ಪಾಲನೆ ಮಾಡುವದು ಬಹಳ ಕಠಿಣವು. ಮುರುಕದ ಮಾನಿನಿಯರಿಂದಲೂ ಬಣ್ಣಗಾತಿಯರಾದ ರಾಣಿಯರಿಂದಲೂ ಒಡಗೂಡಿ, ಇಡೀ ಆಯುಷ್ಯವನ್ನು ವಿಲಾಸವೃತ್ತಿಯಲ್ಲಿ ಕಳೆಯುವದಕ್ಕಿಂತ ಹೆಚ್ಚಾಗಿ ನಿನಗೇನೂ ಗೊತ್ತಿದ್ದಂತೆ ಕಾಣುವದಿಲ್ಲ. ಇಂತಹ ಮನೋವೃತ್ತಿಯವನಾದ ನಿನಗೆ ಪ್ರಜಾಜನರ ಸುಖ-ದುಃಖಗಳು ಹೇಗೆ ತಿಳಿಯಬೇಕು? ರಾಜ್ಯದಲ್ಲಿ ನಡೆಯುವ ಅನನ್ವಿತ ಕೃತ್ಯಗಳ ಬಗ್ಗೆ ನಿನ್ನನ್ನು ಜಾಗ್ರತೆಗೊಳಿಸುವದಕ್ಕಾಗಿ ಸರ್ವಸಂಗ ಪರಿತ್ಯಾಗ ಮಾಡಿ ತಪಾಚರಣೆಯಲ್ಲಿ ಕಾಲಕಳೆಯುವ ನಮ್ಮಂಥ ಸಾಧು-ಸಂನ್ಯಾಸಿಗಳು ಬೇಕಾಗಿದೆ. ನಾವು ನಮ್ಮ ತಪಶ್ಚರ್ಯೆಯನ್ನು ಬದಿಗಿರಿಸಿ ನಿನ್ನ ಗುಪ್ತಚರರ ಕೆಲಸ ಮಾಡಬೇಕಾಗಿದೆ. ಇಂಥ ಕರ್ತವ್ಯಹೀನ

ರಾಜಸಿಗೂ, ಇಂಥ ರಾಜನ ಗುರುವಾದ ನನಗೂ ಧಿಃಕಾರ! ಶಾಹೂರಾಜಾ, 'ವಿನಾಶ ಕಾಲೇ ವಿಪರೀತ ಬುದ್ಧಿಃ' ಎಂದು ಅನ್ನುತ್ತಾರೆ. ಅದರಂತೆ ನಿನ್ನಲ್ಲಿ ವಿಪರೀತಬುದ್ಧಿಯು ಉತ್ಪನ್ನವಾಗಿದ್ದರೆ ಯಾರೇನು ಮಾಡಬೇಕು?"

ಸ್ವಾಮಿಮಹಾರಾಜರು ಶಾಹೂರಾಜನ ಮೇಲೆ ಹರಿಹಾಯತೊಡಗಿದ್ದನ್ನು ನೋಡಿ ಪೇಶವೆಗೆ ಕ್ಲೇಶವಾಯಿತು. ಅವನು ಮುಂದೆ ಬಂದು ಸ್ವಾಮಿಗಳ ಸಮ್ಮುಖದಲ್ಲಿ ಕೈಜೋಡಿಸಿ:—"ಮಹಾತ್ಮನ್! ತಾವು ಕೋಪಿಸಕೂಡದು. ತಮ್ಮ ಅಭಿಪ್ರಾಯದಂತೆ ಸ್ವರಾಜ್ಯದಲ್ಲಿ ಅವ್ಯವಸ್ಥೆಯು ನೆಲೆಗೊಂಡಿದ್ದರೆ, ಅದಕ್ಕೆ ಮಹಾರಾಜರೊಬ್ಬರೇ ತಪ್ಪುಗಾರರಾಗಿರದೆ, ಸೇವಕರಾದ ನಾವು ಅವರಿಗಿಂತ ಹೆಚ್ಚಾಗಿ ತಪ್ಪುಗಾರರಾಗುವೆವು. ನಮ್ಮ ತಪ್ಪು ಎಲ್ಲಿ ಆಗುವದೆಂಬದನ್ನು ತಿಳಿಸಿದರೆ, ಅದರ ನಿವಾರಣೆಗಾಗಿ ಪ್ರಯತ್ನಮಾಡಲಿಕ್ಕೆ ಒರುವದು."

"ನೀವಾದರೂ ತಪ್ಪಿನ ಪಾಲುಗಾರರಲ್ಲವೆಂದು ಅನ್ನುವವರಾರು?"

"ಅದಕ್ಕಾಗಿಯೆ ಹೇಳುತ್ತೇನೆ. ತಾವು ಆಸನದಲ್ಲಿ ಮಂಡಿಸಿ, ನಮ್ಮ ಅಪರಾಧವನ್ನು ಅಳೆಯಿರಿ. ಅದರ ನಿವೃತ್ತಿಗಾಗಿ ನಮಗೆ ಸೂಚನೆ ಮಾಡಿರಿ."

ಶಾಹೂಮಹಾರಾಜನೂ ಬಾಜೀರಾಯನೂ ಬ್ರಹ್ಮೇಂದ್ರಸ್ವಾಮಿಗಳಿಗೆ ಬಹು ಪರಿಯಾಗಿ ಬೇಡಿಕೊಂಡು ಆಸನದಲ್ಲಿ ಕುಳ್ಳಿರಿಸಿದರು. ಪೇಶವೆಯ ಅಂಗರಕ್ಷಕನಾದ ಮಾಯಾಜಿಯು ಸ್ವಾಮಿಗಳ ಕೈಯಲ್ಲಿಯ ದೀವಟಿಗೆಯನ್ನು ತೆಗೆದುಕೊಂಡು ಹೊರಗೆ ಒಯ್ದನು ಅನಂತರದಲ್ಲಿ ಸ್ವಾಮಿಮಹಾರಾಜರು.-"ಸಿದ್ದಿಯು ಕೊಂಕಣದಲ್ಲಿ ಹೇಗೆ ಹಾಹಾಕಾರವನ್ನೆಬ್ಬಿಸಿರುವನೆಂಬ ಬಗ್ಗೆ ನಿಮಗೆ ಪತ್ರಬರೆದು ಸಾಕಾಯಿತು. ಯಃಕಶ್ಚಿತ ಒಂದು ಆನೆಯ ಸಲುವಾಗಿ ಅವನು ಅತಿರೇಕವಾಗಿ ಪ್ರಳಯ ಮಾಡಿದನು. ಅದಕ್ಕಾಗಿ ಬೇಸರಗೊಂಡು ಇತ್ತಕಡೆಗೆ ಬಂದೆನು. ಇತ್ತ ಬಂದ ಕೂಡಲೆ ಬೆಂಕಿಯಿಂದ ಜಿಗಿದು ಉರಿಯಲ್ಲಿ ಧುಮುಕಿದಂತಾಯಿತೆಂಬದು ಪ್ರತ್ಯಯಕ್ಕೆ ಬಂತು. ಸಂಭಾಜಿಯೂ ಚವ್ಹಾಣನೂ ಕೂಡಿ ನಿಮ್ಮ ರಾಜ್ಯದಲ್ಲಿ ಎಬ್ಬಿಸಿದ ಹಾವಳಿಯ ಗಂಧವಾರ್ತೆಯಾದರೂ ನಿಮಗೆ ತಗಲಿರುವದೇ?"

"ಸ್ವಾಮಿಮಹಾರಾಜರೆ!" ಶಾಹೂರಾಜನು ವಿನಯದಿಂದ:—"ನಾವು ಸಿದ್ದಿಯ ಪ್ರತೀಕಾರ ಮಾಡಬೇಕೆಂಬ ವಿಚಾರದಲ್ಲಿದ್ದೆವು; ಆದರೆ ಚವ್ಹಾಣನೂ ಸಂಭಾಜಿಯೂ ಈಗ ಮಲೆತು ನಿಂತಿದ್ದರಿಂದ ಮೊದಲು ಅವರ ಸಮಾಚಾರವನ್ನು ತಕ್ಕೊಳ್ಳಬೇಕಾಗಿದೆ."

'ನೀವು ಯಾವಾಗ ನಿಮ್ಮ ಕರ್ತವ್ಯಕ್ಕೆ ತೊಡಗುವವರು? ಸ್ವಲ್ಪ

ಕಣ್ದೆರೆದು ಸುತ್ತಲೂ ನೋಡಿರಿ" ಎಂದು ಬ್ರಹ್ಮೇಂದ್ರಸ್ವಾಮಿಗಳು ಪೇಶವೆಯನ್ನೂ ಶಾಹೂರಾಜನನ್ನೂ ಕುರಿತು ನುಡಿದರು. ಅನಂತರದಲ್ಲಿ ಅವರು. "ಶಾಹೂರಾಜಾ, ನಿನ್ನ ಸಿಂಹಾಸನವನ್ನು ಬುಡಮೇಲು ಮಾಡುವದಕ್ಕೆ ಎಲ್ಲೆಲ್ಲಿ ಹೇಗೆ ಹೇಗೆ ಕಾರಸ್ಥಾನಗಳು ನಡೆದಿರುವವೆಂಬದನ್ನು ಚೆನ್ನಾಗಿ ನಿರೀಕ್ಷಿಸು. ಎಷ್ಟೋ ಜನರು ನನ್ನ ಬಳಿಗೆ ಯಾವಾಗಲೂ ಬಂದು, ತಮ್ಮ ಕರ್ಮಕಥೆಗಳನ್ನು ಹೇಳುತ್ತಿರುವರು. ನಿನ್ನ ರಾಜ್ಯದೊಳಗಿನ ಎಷ್ಟೋ ಜಹಗೀರುದಾರರ ಹಾಗು ದುರ್ಗಾಧಿಪತಿಗಳ ಸುತ್ತು ಸಂಭಾಜಿ-ಚವ್ಹಾಣರು ಕೈತೊಳಕೊಂಡು ಬೆನ್ನು ಹತ್ತಿರುವರು ಅವರ ದೌರ್ಜನ್ಯದ ಮುಂದೆ ನನ್ನಂಥವನೇ ನಡುಗುತ್ತಿರುವೆನು; ಅನ್ಯರ ಪಾಡೇನು? ಅವರು ಕೆಲವು ದೇವರ್ಷಿಗಳನ್ನು ಸಾಕಿದಂತೆ ತೋರುವದು. ಆ ದೇವರ್ಷಿಗಳು ಭೂತ-ವೇತಾಳಾದಿಗಳ ಸಹಾಯದಿಂದ ನನ್ನಂಥವನನ್ನು ಸಹ ತ್ರಸ್ತನನ್ನಾಗ ಮಾಡಲಿಕ್ಕೆ ಹಿಂದು ಮುಂದೆ ನೋಡದಾಗಿರುವರು."

"ಆ ನೀಚ ಜನರ ಹಾವಳಿಯು ಇಲ್ಲಿಯವರೆಗ ಬಂದಿರುವದೇನು?" ಮಹಾರಾಜನು ಹುಬ್ಬುಗಂಟಿಕ್ಕಿ ನುಡಿದನು.

"ಇದಕ್ಕೂ ಮುಂದೆ ಹೋಗಿದೆ!" ಎಂದು ಬ್ರಹ್ಮೇಂದ್ರಸ್ವಾಮಿಗಳು ನುಡಿದು, ತಮ್ಮ ಕಫನಿಯೊಳಗಿಂದ ಒಂದು ಪತ್ರವನ್ನು ತೆಗದು ಶಾಹೂರಾಜನ ಕೈಯಲ್ಲಿ ಕೊಟ್ಟು.—'ನೀವು ರಘೂಜಿ ಘೋರಾತನಿಗೆ ತೊಂದರೆ ಕೊಟ್ಟರಿ. ಅವನು ಭೂತಗಳನ್ನೆಬ್ಬಿಸಿ ನಮ್ಮ ಛಲನೆ ಮಾಡುತ್ತಿರುವನು. ಅವನು ಸಂಭಾಜಿ ಚವ್ಹಾಣರಿಗೆ ಸಹಾಯಕನಾಗಿ‌ುವನು. ಚವ್ಹಾಣನು ನಮಗೆ ಕಳುಹಿಸಿದ ಸಂದೇಶವೇ ಈ ಪತ್ರದಲ್ಲಿರುವದು ಓದಿ ನೋಡು."

ಮಹಾರಾಜನು ಆ ಪತ್ರವನ್ನು ತೆಗೆದುಕೊಂಡು ಪೇಶವೆಯ ಕೈಯಲ್ಲಿ ಕೊಟ್ಟು:—"ಪೇಶವೇ! ಈ ಪತ್ರವನ್ನು ಓದಿರಿ!" ಎಂದು ಆಜ್ಞಾಪಿಸಿದನು.

ಪೇಶವೆಯು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಓದತೊಡಗಿದನು:-

"ಶ್ರೀಮನ್ಮಹಾರಾಜ ಶ್ರೀಮತ್‌ಪರಮಹಂಸ ಸ್ವಾಮಿಗಳವರ ಸನ್ನಿಧಿಗೆ—ಉದಾಜಿ ಚವ್ಹಾಣನ ವಿಜ್ಞಾಪನೆ.

ಸ್ವಾಮಿಗಳೇ, ಬಹಿರಂಗದಲ್ಲಿ ನಮ್ಮನ್ನು ಶಿಷ್ಯರೆಂದು ತಿಳಿದು, ಅಂತರಂಗದಲ್ಲಿ ನಮ್ಮ ಪ್ರತಿಸ್ಪರ್ಧಿಗಳಾದ ಶಾಹೂಮಹಾರಾಜರ ಕಲ್ಯಾಣವನ್ನು ಚಿಂತಿಸುತ್ತಿರುವಿರಿ. ಹೀಗೆ ಮಾಡುವದು ಗುರುಗಳಿಗೆ ಸರ್ವಥೈವ ಅನುಚಿತವು. ಹೀಗೆ ವರ್ತನವನ್ನಿಟ್ಟರೆ ನಾವು ನಿಮ್ಮನ್ನು ಗುರುಗಳೆಂದು ಯಾಕೆ ಮನ್ನಿಸಬೇಕು? ಇದುವರೆಗೆ ನೀವು ಶಾಹೂರಾಜರ ಮೇಲೆ ವರ್ಚಸ್ಸು ಕೆಡಹಿ

ಸ್ವರಾಜ್ಯದೊಳಗಿನ ಅರ್ಧಭಾಗವು ಸಂಭಾಜಿರಾಜರಿಗೆ ದೊರೆಯುವಂತೆ ಮಾಡಲಿಲ್ಲ; ಆದ್ದರಿಂದ ನೀವೂ ಶಾಹೂರಾಜರೂ ಕೂಡಿಯೆ ಶತ್ರುಗಳೆಂದು ಭಾವಿಸಿ, ಗುರು-ಶಿಷ್ಯ ಸಂಬಂಧವನ್ನು ಸ್ಮರಿಸದೆ ನಿಮ್ಮ ಪಾರುಪತ್ಯ ಮಾಡ ಬೇಕಾಗುವದು. ಸಂಭಾಜಿರಾಜರ ಇಚ್ಛೆಯ ಮೇರೆಗೆ ಒಪ್ಪಂದ ಮಾಡಿ ಕೊಳ್ಳಲಿಕ್ಕೆ ಶಾಹೂರಾಜರು ಸಿದ್ಧರಾಗದೆ ಇರುವದಕ್ಕೆ ನಿಮ್ಮ ದುರೂಪದೇಶ ವೇ ಕಾರಣವೆಂಬದನ್ನು ನಾವು ಅರಿತಿರುವೆವು ಪ್ರತಿಸ್ಪರ್ಧಿಗಳ ಮನೆಯನ್ನು ತುಂಬುವ ಗುರುವನ್ನು 'ಗುರುವೆ'ಂದು ಭಾವಿಸುವಂಥ ಅಜ್ಞಾನಿಗಳು ನಾವಲ್ಲ. ಸ್ವಾಮಿಗಳು, ನೀನು ಸಂನ್ಯಾಸಿಯು ಸವ ಸಂಗಪರಿತ್ಯಾಗಿಯು ಇಂಥವನಿಗೆ ರಾಜಕಾರಣದ ಹವ್ಯಾಸವು ಏತಕ್ಕೆ ಬೇಕು? ಸಿಕ್ಕಷ್ಟು ಭಿಕ್ಷ ತೆಗೆದುಕೊಂಡು ತೀರ್ಥಾಟನೆ ಮಾಡುತ್ತ, 'ಹರಿ-ಹರಿ' ಎಂದು ಕಾಲಕಳೆಯುತ್ತ ಸುರಕ್ಷಿತ ವಾಗಿರಬಾರದೆ? ಹಾಗಿದ್ದರೆ ನಿನ್ನ ಗೊಡವೆಗೆ ಯಾರು ಬರುತ್ತಾರೆ? ಸಾಧು-ಸಂತರ ವೇಷಹಾಕಿಕೊಂಡು ರಾಜಕಾರಣವನ್ನು ಪ್ರಾರಂಭಿಸಲಿಕ್ಕೆ ನಿನಗೆ ಆದಾರು ಹೇಳಿದರು? ಗೋಸಾವಿ ಮಹಾರಾಜರೇ, ನೀವು ಸಂನ್ಯಾಸಿಗಳಲ್ಲ; ಸಂನ್ಯಾಸಿ ವೇಷದ ದೊಡ್ಡ ಸಂಸಾರಿಗಳು ನಿಮಗೆ ಇನಾಮು ಬೇಕು ಕಾಣಿಕೆ ಬೇಕು; ಹಣ ಬೇಕು, ಉತ್ತಮೋತ್ತಮ ವಸ್ತು-ಒಡವೆಗಳು ಬೇಕು ಎಲ್ಲವನ್ನೂ ನೀವು ತಕ್ಕೊಳ್ಳಬಹುದು; ಅದಕ್ಕೆ ನಮ್ಮ ಅಡ್ಡಿಯಿಲ್ಲ. ನಾವಾ ದರೂ ನಿಮ್ಮ ಮಾನ ಮಾನ್ಯತೆಗಳನ್ನು ನಡೆಯಿಸಲಿಕ್ಕೆ ಸಿದ್ಧರೇ ಇರುವೆವು. ನೀವು ಗುರು-ಶಿಷ್ಯರೆಂಬ ಸಂಬಂಧವನ್ನು ಲಕ್ಷ್ಯದಲ್ಲಿ ಇಟ್ಟು ನಮ್ಮ ಹಿತ ಮಾಡಿದಾಗ ಮಾತ್ರ ನಮ್ಮಿಂದ ನಿಮಗೆ ಮರ್ಯಾದೆ ದೊರೆಯಬಹುದು ಶಾಹೂ ಮಹಾರಾಜರ ಹಾಗು ಪೇಶವೆಯ ಹಿತಾರ್ಥವಾಗಿ ನೀವು ಮಂತ್ರ-ತಂತ್ರ ಮಾಟ-ಮದ್ದುಗಳನ್ನು ಮಾಡುತ್ತಿರುವಿರಿ. ಅಂಥ ಜನರು ನಮ್ಮಲ್ಲಿ ಇರುವದಿಲ್ಲೆಂದು ತಿಳಿಯಬೇಡಿರಿ. ನಮ್ಮಲ್ಲಿರುವ ದೇವರ್ಷಿಗಳು ನಿಮಗೆ ಮೀರಿರುವರೆಂದು ಹೇಳದಿರಲಾರೆನು. ಶಾಹೂಮಹಾರಾಜರ ವಂಶಚ್ಛೇದ ವಾಗುವ ಕಾರಣವೇನು? ಪೇಶವೆಯ ಮನೆಯಲ್ಲಿ ಸಾವು-ಕೇಡುಗಳು ಅದೇಕೆ ಮೂರ್ತಿಮಂತಾಗಿ ನೆಲೆಸಿರುವವು? ಮೊದಲಾದ ಸಂಗತಿಗಳ ಬಗ್ಗೆ ನೀವು ವಿಚಾರಿಸಿರಿ. ನಮ್ಮಲ್ಲಿಯ ಸಾಧುಗಳು ನಿಮ್ಮನ್ನಾದರೂ ರಸಾತಳಕ್ಕೆ ಮುಟ್ಟಲಿಕ್ಕೆ ಸಮರ್ಥರಿರುವರು. ನಾವು ಮನಸ್ಸಿನ ಮೇಲೆ ತೆಗೆದುಕೊಂಡರೆ ನಿಮ್ಮ ಇನಾಮುಗಳನ್ನೂ ನಿಮ್ಮ ದೇವಸ್ಥಾನಗಳನ್ನೂ ನಾಶಗೊಳಿಸುವೆವು! ಇಷ್ಟಲ್ಲದೆ ನಿಮ್ಮನ್ನು ನಾಶಗೊಳಿಸುವದಾದರೂ ನಮಗೆ ಅಸಾಧ್ಯವೆನಿಸುವ ದಿಲ್ಲ. ನಿಷ್ಕಾರಣವಾಗಿ ಬ್ರಹ್ಮಹತ್ಯೆಯ ಪಾತಕವನ್ನು ಹೊರಬಾರದೆಂದು

ನಿಮ್ಮನ್ನು ಮುಂಚಿತವಾಗಿ ಎಚ್ಚರಗೊಳಿಸಿರುವೆವು. ಕೊಂಕಣನಲ್ಲಿ ಸಿದ್ದಿಯು ನಿಮ್ಮನ್ನು ಸ್ಥಾನಭ್ರಷ್ಟಗೊಳಿಸಿದನು; ನೀವು ಅವನಿಗೆ ಯಾವ ಕೆಡಕು ಮಾಡಲಿಕ್ಕೆ ಸಮರ್ಥರಾದಿರಿ? ಬಲವಿದ್ದಲ್ಲಿ ನೀವು ಬಾಗುವಿರಿ; ಆದರೆ ಭೀರುಗಳ ಸಲುವಾಗಿ ಬ್ರಹ್ಮರಾಕ್ಷಸನಂತೆ ಕೈತೊಳಕೊಂಡು ಬೆನ್ನುಹತ್ತುವಿರಿ. ನಿಮ್ಮ ಈ ಪ್ರಾಂತದೊಳಗಿನ ಶಿಷ್ಯರು ಹಸ್ತಗತರಾಗಿರುವರು. ಅವರನ್ನು ನಾವು ಅಡವಾಗಿಟ್ಟುಕೊಂಡಿರುವೆವು. ಈ ಪತ್ರದ ಇಷ್ಟಪರಿಣಾಮವಾಗದೆ ಇದ್ದರೆ, ಮೊದಲು ನಿಮ್ಮ ಶಿಷ್ಯರ ತಲೆಯನ್ನು ಹಾರಿಸುವೆವು; ಅನಂತರದಲ್ಲಿ ನಿಮ್ಮನ್ನು ಪಾರುಪತ್ಯಗೊಳಿಸುವೆವು. ಈ ಪತ್ರವು ಚವ್ಹಾಣನದೊಬ್ಬನದೇ ಎಂದು ತಿಳಿಯದೆ, ಪತ್ರದ ಅಭಿಪ್ರಾಯಕ್ಕೆ ಸಂಭಾಜಿರಾಜರ ಹಾಗು ಅವರ ರಾಣಿಯವರ ಪೂರ್ಣ ಅನುಮತಿಯಿರುವದೆಂಬದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟು ವರ್ತಿಸಬೇಕು. ಇತಿ ವಿಜ್ಞಾಪನೆ."

ಪತ್ರದ ಸಂಗತಿಯನ್ನು ಕೇಳಿ ಶಾಹೂ ಮಹಾರಾಜನು ಬೆರಗಾದನು ಅವನಿಗೆ ಚವ್ಹಾಣನ ಹೃದಯದ ಚಿತ್ರವು ಸ್ಪಷ್ಟವಾಗಿ ತಿಳಿಯಿತು. "ಚವ್ಹಾಣನು ಇಷ್ಟು ಉನ್ಮತ್ತನಾಗಿರುವನೇನು?" ಎಂದು ಅವನು ಸಂತಾಪೋದ್ಗಾರಗಳನ್ನು ತೆಗೆದನು.

"ನಾನು ಹೇಳಿದ ಸಂಗತಿಯು ಪ್ರತ್ಯಯಕ್ಕೆ ಬಂದಿತಷ್ಟೇ?" ಶಂಭುಸಿಂಗನು ಕೇಳಿದನು.

"ಚವ್ಹಾಣನು ದುರ್ಜನನಿರುವನು. ದುರ್ಜನರು ಹಾವಿನಂತೆಂದು ನಾನು ಹೇಳಿದ ಮಾತು ಅನುಭವಕ್ಕೆ ಬಂದಂತಾಯಿತೇನು ಮಹಾರಾಜರೆ?"

"ಅವನ ಗುಣವು ನನಗೆ ಮೊದಲೇ ಗೊತ್ತಿತ್ತು. ಜಾತಿವಂತ ಮರಾಟನಿರುವದರಿಂದ ಅವನು ತನ್ನ ವಚನಕ್ಕಾದರೂ ಕಟ್ಟುಬೀಳಬಹುದೆಂದು ತಿಳಿದಿದ್ದೆನು." ಎಂದು ಶಾಹೂಮಹಾರಾಜನು ನುಡಿದು ಖಿನ್ನವಾಣಿಯಿಂದ:— "ನಮ್ಮ ವಂಶವನ್ನೇ ನಿರ್ವಂಶ ಮಾಡುವ ಬುದ್ಧಿಯು ಸಂಭಾಜಿ-ಚವ್ಹಾಣ ಮೊದಲಾದವರಲ್ಲಿ ಹುಟ್ಟಿದ್ದಕ್ಕಾಗಿ ನನಗೆ ವ್ಯಥೆಯಾಗುವದಿಲ್ಲ; ಯಾಕಂದರೆ, ದೇವರ ಇಚ್ಛೆಯೇ ಹಾಗಿದ್ದರೆ ಅದಕ್ಕೆ ಯಾರು ಮಾಡುವದೇನು? ನನ್ನ ವಂಶವನ್ನು ಅವರು ಅವಶ್ಯವಾಗಿ ನಿರ್ವಂಶ ಮಾಡಲಿ; ಆದರೆ ಭಗವಾನ್ ನೀಲಕಂಠ ಶಂಕರನಂತಿರುವ ಈ ಸ್ವಾಮಿಮಹಾರಾಜರ ಅಪಮಾನ ಮಾಡುತ್ತಿರುವದನ್ನು ನೋಡಿ ನನಗೆ ಅತಿರೇಕವಾದ ಖೇದವೆನಿಸುವದು."

"ದುರ್ಜನರ ಈ ಕೃತ್ಯಗಳನ್ನು ನೋಡಿ ನೀನು ಸುಮ್ಮನೆ ಕ್ಲೇಶಬಡುತ್ತ ಕುಳಿತುಕೊಳ್ಳುವೆಯಾ?"

"ಎಂದೂ ಕುಳಿತುಕೊಳ್ಳುವದಿಲ್ಲ. ಸ್ವಾಮಿ ಮಹಾರಾಜರೆ! ನಾವು ಇಷ್ಟುದಿನ ಅಪಾತ್ರರಲ್ಲಿ ಕ್ಷಮಾದಾನ ಮಾಡಿದೆವು. ಇನ್ನು ಮೇಲೆ ಅನುಚಿತವು ನಮ್ಮಿಂದ ಘಟಿಸಲಾರದು. ಅವರು ಮಾಡಿದ ಅಪಮಾನದ ಸೇಡನ್ನು ಖಡ್ಗದ ಧಾರೆಯಿಂದ ತೀರಿಸಿಕೊಳ್ಳದೆ ಬಿಡುವದಿಲ್ಲ." ಎಂದು ಶಾಹೂಮಹಾರಾಜನು ಸ್ವಾಮಿಗಳ ಮಾತಿಗೆ ಉತ್ತರವಿತ್ತನು.

ಅಷ್ಟರಲ್ಲಿ ಕರ್ಹಾಡದಿಂದ ಶಾಹೂಮಹಾರಾಜರ ಭೆಟ್ಟಿಗೆ ಹೊರಟಿದ್ದ ಪಂತಪ್ರತಿನಿಧಿ ಶ್ರೀಪತಿರಾಯನು ಅಲ್ಲಿಗೆ ಬಂದನು. ಅವನು *ಬ್ರಹ್ಮೇಂದ್ರ ಸ್ವಾಮಿಗಳಿಗೂ, ಮಹಾರಾಜರಿಗೂ ಅಭಿವಾದನೆ ಮಾಡಿದನು. ಪೇಶವೆಯು ಅವನನ್ನು ಸ್ವಾಗತಪೂರ್ವಕವಾಗಿ ಆಸನದಲ್ಲಿ ಕುಳ್ಳಿರಿಸಿ. ಕ್ಷೇಮ ವಾರ್ತೆಗಳನ್ನು ವಿಚಾರಿಸಹತ್ತಿದನು ಪೇಶವೆ-ಪ್ರತಿನಿಧಿಗಳ ಈ ಸಂಭಾಷಣವನ್ನು ಕೇಳಿ ಸ್ವಾಮಿಗಳು:—"ಸ್ವರಾಜ್ಯದ ಸದ್ಯದ ವಾತಾವರಣದಲ್ಲಿ ಇಂದಿನ ಯೋಗವು ಅಪೂರ್ವವಾಗಿರುವದು."

"ಅದೇಕೆ?" ಕುತೂಹಲದಿಂದ ಶಾಹೂಮಹಾರಾಜನು ಕೇಳಿದನು.

"ಶಾಹೂರಾಜಾ, ನಿನ್ನ ಸ್ವರಾಜದಲ್ಲಿ ಇನ್ನು ಮೇಲೆ ಹುಲಿ-ಆಕಳುಗಳು ಒಂದೇ ಪಾತ್ರೆಯಲ್ಲಿ ನೀರು ಕುಡಿಯತೊಡಗುವವು. ಹಾವು-ಮುಂಗಲಿಗಳು ಕೊರಳಿಗೆ ಕೊರಳು ಹಾಕಿ ಸ್ನೇಹಭಾವದಿಂದ ಆಡುವವು. ಪೇಶವೆ-ಪ್ರತಿನಿಧಿಗಳು ಇಷ್ಟು ಏಕಹೃದಯಿಗಳಾಗಿ ವರ್ತಿಸಿದ್ದನ್ನು ನಾನು ನಿನ್ನ ಆಳಿಕೆಯಲ್ಲಿ ಇದೇ ಮೊದಲು ನೋಡಿದೆನು."

ಸ್ವಾಮಿಗಳ ಮಾತು ಕೇಳಿ ಶಾಹೂರಾಜನು ಆನಂದದಿಂದ ನಸುನಕ್ಕನು.



*ಶ್ರೀ ಬ್ರಹ್ಮೇಂದ್ರಸ್ವಾಮಿಗಳ ಚರಿತ್ರವು ನಮ್ಮಲ್ಲಿ ದೊರೆಯುವದು.
ಬೆಲೆ ೪ ಆಣೆ. ಶ್ರೀ ಶೇ. ಗ್ರ. ಮಾಲೆ, ಅಥಣಿಂದವನ.

## ಮುಖ್ಯ ತಪ್ಪುಗಾರ.

ಬೈರಾಗಿಯು ಚದುರೆಯನ್ನು ನೌಕೆಯಲ್ಲಿ ಕುಳ್ಳಿರಿಸಿಕೊಂಡು ವೇಗದಿಂದ ಸಾಗಿದ್ದನು. ಆಗ ಸೂರ್ಯೋದಯವಾಗಿತ್ತು ಸಹಸ್ರರಶ್ಮಿಯು ತನ್ನ ಮೋಹಕವಾದ ಕಿರಣಗಳನ್ನು ನಾಲ್ಕೂಕಡೆಗೆ ಪಸರಿಸಿದ್ದನು. ಚದುರೆಗೆ ಆ ಬೈರಾಗಿಯ ಗುರುತು ಚನ್ನಾಗಿ ಹತ್ತಿತು ಅವನು ತನ್ನನ್ನು ಬಲುವೆಯಿಂದ ತೆಗೆದುಕೊಂಡು ಹೋಗುವ ಉದ್ದೇಶವೇನಿರಬಹುದೆಂಬದನ್ನು ಅವಳು ವಿಚಾರಿಸತೊಡಗಿದ್ದಳು ಈ ಬೈರಾಗಿಯು ನಿಜವಾದ ಬೈರಾಗಿಯಾಗಿರದೆ. ಕೊಲ್ಹಾಪುರದರಾಣಿಯಾದ ಜಿಜಾಬಾಯಿಯ ಸೇವಕನಿರಬಹುದೆಂದು ಅವಳು ತರ್ಕಿಸಿದಳು. ಅವಳು ವಿಚಾರಸಾಗರದಲ್ಲಿ ಮುಳುಗಿದಾಗ ಬೈರಾಗಿಯು ಹುಟ್ಟುಹಾಕುತ್ತ:—"ಚದುರೆ!" ಎಂದು ಕೂಗಿದನು.

ಚದುರೆಯು ಕಂಪನಯುಕ್ತವಾದ ಧ್ವನಿಯಿಂದ:—"ಯಾಕೆ?" ಎಂದು ಕೇಳಿದಳು.

"ನೀನು ನನ್ನನ್ನು ಗುರುತಿಸುವೆಯಾ?"

"ಓಹೋ! ಗುರುತಿಸದೇನು?"

"ನಾನು ಯಾರು?"

"ನಿನ್ನೆ ಕೃಷ್ಣಾನದಿಯ ಸೋಪಾನದ ಮೇಲೆ ಬಂದ ಬೈರಾಗಿಗಳಲ್ಲವೆ ನೀವು?"

"ಹೌದು."

"ನಿಮ್ಮ ಮಗನನ್ನು ನಾನೇ ಬದುಕಿಸಿದೆನು."

"ನಿಜ."

"ನೀವು ಯಾರು? ನಿಮ್ಮ ಹೆಸರೇನು?"

"ನಾನು ನನ್ನ ಪರಿಚಯವನ್ನು ಹಿಂದಿನಿಂದ ಮಾಡಿಕೊಟ್ಟೇನು. ಆದರೆ ಮೊದಲು ನಿನ್ನ ಪರಿಚಯವನ್ನು ಹೇಳು."

"ನೀವು ನನ್ನ ಪರಿಚಯವನ್ನು ತೆಗೆದುಕೊಂಡು ಮಾಡುವದೇನು?"

"ಚದುರೆ! ಹೀಗೆ ನೀನು ಹಾರಿಸಿಕೊಂಡರೆ ನಡೆಯುವಂತಿಲ್ಲ. ನಿನ್ನ ಜೀವನ-ಮರಣಗಳು ನನ್ನ ಕೈಯಲ್ಲಿರುವವೆಂಬದನ್ನು ಲಕ್ಷ್ಯದಲ್ಲಿರಿಸಿ, ನಾನು ಕೇಳುವ ಪ್ರಶ್ನೆಗೆ ಸರಳವೂ ಸತ್ಯವೂ ಆದ ಉತ್ತರ ಕೊಡು. ನೀನು ನನ್ನನ್ನು ವಂಚಿಸ ಹೋದರೆ ಬಿಡುಗಡೆ ಹೊಂದಲಾರೆ."

"ನನ್ನನ್ನು ಕೊಲ್ಲಬೇಕೆಂದು ನಿಮ್ಮ ಸಾಹಸವಿರುವದೇನು?"

"ಮೋಸ ಮಾಡ ಹೋದರೆ ಅದೇ ಸಾಹಸ!" ಎಂದು ಬೈರಾಗಿಯು ನುಡಿದು, ತನ್ನ ಬಳಿಯಲ್ಲಿದ್ದ ಕೈಗತ್ತಿಯನ್ನು ಹೊರಗೆ ತೆಗೆದು ಅದರ ಧಾರೆಯನ್ನು ದಿಟ್ಟಿಸಿ ನೋಡುತ್ತ:—"ವಿಷದ ಪರೀಕ್ಷೆ ಮಾಡಬೇಡ. ಇದೇ ನಿನ್ನ ಕಾಲನಾಗುವದು."

ಮರಣದ ಭಯದಿಂದ ಚದುರೆಯು ತನ್ನ ಜೀವನ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಹೇಳಿದಳು. ಅವಳು ತನ್ನ ಆತ್ಮಕಥೆಯನ್ನು ಹೇಳುವಾಗ ಕೆಲವು ಸಂಗತಿಗಳು ಬುದ್ಧಿಪೂರ್ವಕವಾಗಿ ಆಗಲಿ, ಮರವಿಸಿಂದಾಗಲಿ ಉಳಿದಿದ್ದವು. ಆ ಬೈರಾಗಿಯು ಸಾಮಾನ್ಯನಿದ್ದಿಲ್ಲ. ಚದುರೆಯ ವಿಷಯಕವಾಗಿ ಅವನು ಎಲ್ಲ ಗೊತ್ತುವಳಿಯುಳ್ಳವನಿರಲಿಕ್ಕೆ ಬೇಕು. ಪ್ರಕರಣದ ಪ್ರತಿಶೋಧನೆ ಮಾಡುವ ಪ್ರತಿಪಕ್ಷಿಗಳ ಪ್ರತಿನಿಧಿಯಂತೆ, ಅವನು ಸೂಕ್ಷ್ಮ ಸಂಗತಿಗಳನ್ನು ಸಹ ಎತ್ತಿ ಎತ್ತಿ ಕೇಳಲಾರಂಭಿಸಿದ್ದನು.

"ನಿನ್ನ ತಾಯಿ-ತಂದೆಗಳೆಲ್ಲಿರುವರೆಂಬದನ್ನು ನೀನು ಬಲ್ಲೆಯಾ?"

"ಇಲ್ಲ." ಎಂದು ಚದುರೆಯು ಬೈರಾಗಿಗೆ ಉತ್ತರವಿತ್ತಳು.

"ಅತ್ತೆ ಮಾವಂದಿರು?"

"ಅವರು ಎಲ್ಲಿರುವರೆಂಬದನ್ನೂ ನಾನು ಅರಿಯೆನು."

"ಗಂಡನು ಕೊಲೆಗಡಕರಿಂದ ಹತನಾದನೆಂದು ಹೇಳಿದೆ. ಅವನನ್ನು ಕೊಲ್ಲಲಿಕ್ಕೆ ನೀನೇ ಕೊಲೆಗಡಕರನ್ನು ಕಳುಹಿಸಿದ್ದ ಸಂಗತಿಯು ನಿಜವೆ?"

ಈ ಮಾತಿನ ಉತ್ತರಕೊಡಲಿಕ್ಕೆ ಚದುರೆಯು ಹಿಂದು ಮುಂದೆ ನೋಡತೊಡಗಿದಳು. ತನ್ನ ಆಯುಷ್ಯದೊಳಗಿನ ಚಿಕ್ಕ-ಪುಟ್ಟ ಸಂಗತಿಗಳು ಸಹ ಈ ಬೈರಾಗಿಗೆ ಗೊತ್ತಿರುವದನ್ನು ನೋಡಿ ಅವಳಿಗೆ ಅತ್ಯಂತ ವಿಸ್ಮಯವಾಯಿತು. ಕೆಲವು ಗುಪ್ತ ಸಂಗತಿಗಳು ಸಹ ಅವನಿಗೆ ಗೊತ್ತಿದ್ದವು. ಚದುರೆಯ ಪತಿಯು ಅವಳು ಕಳುಹಿಸಿದ ಕೊಲೆಗಡಕರಿಂದಲೇ ಹತನಾದನೆಂಬ ಸಂಗತಿಯು ಚದುರೆ ಸಂಭಾಜಿ ಹಾಗು ಅವರು ಕಳುಹಿಸಿದ ಕೊಲೆಗಡಕರು ಇವರ ಹೊರತು ಬಹಳ ಮಟ್ಟಿಗೆ ಮತ್ತಾರಿಗೂ ಗೊತ್ತಿದ್ದಿಲ್ಲ. ಈ ಸಂಗತಿಯು ಸಹ ಬೈರಾಗಿಗೆ ತಿಳಿದದ್ದರಿಂದ ಅವಳ ಆಶ್ಚರ್ಯಕ್ಕೆ ಮೇರೆದಪ್ಪಿತು ಈ ಬೈರಾಗಿಯು ನಿಜವಾದ ಬೈರಾಗಿಯಾಗಿರದೆ, ವೇಷಧಾರಿ ಬೈರಾಗಿಯೆಂಬದನ್ನು ಅವಳು ಮುಂಚಿನ ದಿನ ಕೃಷ್ಣಾನದಿಯ ಸೋಪಾನದ ಬಳಿಯಲ್ಲಿಯೇ ಕಂಡುಹಿಡಿದಿದ್ದಳು. 'ಮುಖದಲ್ಲಿ ಮುರಾರಿ, ಕರದಲ್ಲಿ ಕರಾರಿ' ಎಂಬ ವೃತ್ತಿಯವನು ಆ ಬೈರಾಗಿಯಿರುವನೆಂದು ಅವಳು ತಿಳಿದಿದ್ದಳು. ಯಾವನೋ ಕಾಮಾಂಧನು ತನ್ನ ರೂಪಲಾವಣ್ಯಗಳಿಗೆ ಮೋಹಿತನಾಗಿ ಸೆಳೆದೊಯ್ಯ

ತೊಡಗಿರುವನೆಂದು ಮೊದಲು ಅವಳ ಗ್ರಹಿಕೆಯಾಗಿತ್ತು; ಆದರೆ ಅವನಿಂದ ಅಂತಹ ಯಾವ ಕೃತಿಗಳೂ ಘಟಿಸಲಿಲ್ಲ. ಅವನು ತನ್ನ ಇತಿಹಾಸವನ್ನು ಕೇಳತೊಡಗಿದ್ದರಿಂದ, ಯಾವನೋ ನಿಕಟವರ್ತಿಯ ಮನುಷ್ಯನು ಅವನಿರ ಬಹುದೆಂದು ಚದುರೆಯ ಮನವರಿಕೆಯಾಯಿತು

ಚದುರೆಯು ತನ್ನ ಗಂಡನ ವಿಷಯಕವಾಗಿ ಯಾವ ಸಂಗತಿಗಳನ್ನೂ ಹೇಳಲಿಕ್ಕೆ ಮನಸ್ಸು ಮಾಡದ್ದನ್ನು ನೋಡಿ, ಬೈರಾಗಿಯು ತನ್ನ ಕಠಾರಿ ಯನ್ನು ಮೇಲಕ್ಕೆ ಎತ್ತಿ:—"ಚದುರೆ! ಇನ್ನೊಮ್ಮೆ ನಿನಗೆ ಸ್ಪಷ್ಟವಾಗಿ ಹೇಳು ವೆನು. ನೀನು ಮುಚ್ಚುಮರೆ ಮಾಡಿದರೆ ನನ್ನ ಮುಂದೆ ನಡೆಯುವದಿಲ್ಲ. ನಿನ್ನ ಆಯುಷ್ಯದೊಳಗಿನ ಅತ್ಯಂತ ಗುಪ್ತವೂ ಸೂಕ್ಷ್ಮವೂ ಆದ ಸಂಗತಿಗಳು ಸಹ ನನಗೆ ಗೊತ್ತಿರುವದೆಂಬದನ್ನು ಲಕ್ಷ್ಯದಲ್ಲಿಡು ನಾನು ನಿನ್ನಿಂದ ಹೊಸ ಸುದ್ದಿಯನ್ನು ತಿಳಿದುಕೊಳ್ಳಲಪೇಕ್ಷಿಸಿಲ್ಲ. ನೀನು ನನ್ನೊಡನೆ ಸತ್ಯ ವಾಡುವಿಯೋ ಇಲ್ಲವೋ ಎಂಬದನ್ನಷ್ಟು ಒರೆಹಚ್ಚಿ ನೋಡಬೇಕಾಗಿದೆ. ಮಾಡಿದ ತಪ್ಪುಗಳನ್ನಾಡಲಿಕ್ಕೆ ನಿನಗೆ ನಾಚಿಕೆಯಾಗುತ್ತಿರುವದೇಕೆ? ಮನು ಷ್ಯನು ಪಾಪದ ಉಚ್ಚಾರ ಮಾಡಲಿಕ್ಕೆ ನಾಚುವದಕ್ಕಿಂತ, ಪಾಪ ಮಾಡಲಿಕ್ಕೆ ನಾಚುವದೇ ಉಚಿತವು. ಹೇಳು, ನೀನು ಕೊಲೆಗಡಕರಿಂದ ನಿನ್ನ ಗಂಡ ನನ್ನು ಕೊಲ್ಲಿಸಲಿಲ್ಲವೆ?"

ಚದುರೆಯು ಈ ಅಪರಾಧವನ್ನು ಮಾಡಿದುದು ನಿಜವು; ಆದರೆ ಅಪರಾಧವನ್ನು ಬಾಯಿಂದ ಒಪ್ಪುವಷ್ಟು ಧೈರ್ಯವು ಅವಳಿಗೆ ಬಂದಿರಲಿಲ್ಲ. ಪತಿದೇವತೆಗೆ ಏನೂ ಬೆಲೆ ಕೊಡದಂತಹ ವರ್ತನವು ಅವಳಿಂದ ಘಟಿಸಿದ್ದರೂ, ಪತಿಯ ಮಹತ್ವವನ್ನು ಅರಿಯದಂತಹಳು ಅವಳಾಗಿದ್ದಿಲ್ಲ. ಪತಿತಳಾಗುವದ ಕ್ಕಿಂತ ಮೊದಲು ಅವಳಲ್ಲಿ ಆರ್ಯಲಲನೆಯರಿಗುಚಿತವಾದ ಶೀಲ-ವಿವೇಕ ಗಳು ವಾಸವಾಗಿದ್ದವು. ಬಲುಮೆಯಿಂದ ಅಧಃಪಾತ ಹೊಂದಿದ ಮೇಲೆ ಅವಳು ನೀತಿಯ ದಾರಿಯನ್ನು ಪೂರಾ ತ್ಯಜಿಸಿದ್ದಳು. ತನ್ನ ಈ ಆಚರ ಣೆಯು ಅತ್ಯಂತ ಪಾಪಮಯವಾದದ್ದೆಂಬದಾದರೂ ಅವಳಿಗೆ ತಿಳಿದಿತ್ತು. ತಿಳಿದಂತೆ ನಡೆಯುವದು ಮಾತ್ರ ಆಗಿದ್ದಿಲ್ಲ. ಬೈರಾಗಿಯ ಮಾತಿನ ಆಘಾತ ದಿಂದ ಮಾತ್ರ ಅವಳ ಅಂತಃಕರಣಕ್ಕೆ ಬಲವಾದ ನೋವಾಗ ಹತ್ತಿತು. ಸಂಭಾಜಿರಾಜನಲ್ಲಿದ್ದಾಗ ಯಾವ ಸಾಧ್ವಿಯಾದರೂ ಪಾತಿವ್ರತ್ಯದ ಮೇಲ್ಮೆ ಯನ್ನುಪದೇಶಿಸ ಹೋಗಿದ್ದರೆ, ಪತಿಯೆಂದರೆ ಯಾವಗಿಡದ ತೊಪ್ಪಲೆಂದು ಕೇಳುವಷ್ಟು ಅವಳು ಮನೋದಾರ್ಢ್ಯವುಳ್ಳವಳಾಗಿದ್ದಳು. ಪ್ರತಿನಿಧಿಯ ಮನೆ ಯಲ್ಲಿ ವಾಸವಾಹಂದಿನಿಂದ ಆ ಅಹಂಕಾರವು ಮಾಯವಾಗಿ, ಮನೋಭೂಮಿಕೆ

ಯಲ್ಲಿ ಅಲ್ಪಸ್ವಲ್ಪ ಮಾರ್ದವತೆಯು ಗೋಚರವಾಗತೊಡಗಿತ್ತು. ಬೈರಾಗಿಯ ಕೈಯಲ್ಲಿ ಸಿಲುಕಿದ ಮೇಲಂತೂ ಅವಳಿಗೆ ತನ್ನ ಅಧಃಪಾತದ ಭೀಷಣ ಚಿತ್ರವು ಕಣ್ಣಮುಂದೆ ಕಟ್ಟಿದಂತಾಗಿ, ಅಂತಃಕರಣವು ಅದರತೊಡಗಿತು. ಅಂತೆಯೇ ಆಕೆಯು ಮಾಡಿದ ಪಾಪವನ್ನು ಆಡಲಿಕ್ಕೆ ಹಿಂಜರಿಯತೊಡಗಿದ್ದಳು; ಆದರೆ ಪಾತಕೋಚ್ಚಾರದ ದಿವ್ಯವನ್ನು ಮಾಡಿದ ಹೊರತು ಅವಳಿಗೆ ಗತ್ಯಂತರವೆಲ್ಲಿತ್ತು? ಅವಳು ಅಂಜುತ್ತಂಜುತ್ತ ಗದ್ಗದ ಸ್ವರದಿಂದ:-"ನನ್ನಿಂದ ಈ ಅಪರಾಧವು ಘಟಿಸಿರುವದು ನಿಜವು." ಎಂದು ಉತ್ತರಕೊಟ್ಟಳು.

"ಈ ಕೃತ್ಯವು ಘಟಿಸಿದ ಬಗ್ಗೆ ನಿನಗೆ ಪಶ್ಚಾತ್ತಾಪವಾಗುತ್ತಿರುವದೇನು?"

"ಪಶ್ಚಾತ್ತಾಪವಾಗದೇನು?" ಎಂದು ಚದುರೆಯು ನುಡಿದು, ಸೀರೆಯ ಸೆರಗಿನಿಂದ ಕಣ್ಣೀರೊರಸಿಕೊಳ್ಳುತ್ತ:—"ಪಶ್ಚಾತ್ತಾಪ ಪಡುವದರಿಂದ ಈಗಾಗುವ ಲಾಭವೇನು?"

"ಪತಿಯಿಂದ ನೀನು ಹಡೆದ ಮಗನ ಗತಿಯೇನಾಯಿತು?"

"ಈ ಸಂಗತಿಯು ನನಗೆ ಗೊತ್ತಿಲ್ಲ. ನನ್ನ ಹಿರಿಯ ಮಗನಾದ ಸಟವಾಜಿಯು ನನ್ನ ತಾಯಿ-ತಂದೆಗಳ ಬಳಿಯಲ್ಲಿಯೇ ಇದ್ದನು. ಅವನು ಈಗ ಎಲ್ಲಿರುವನೆಂಬದು ಪರಮಾತ್ಮನಿಗೇ ಗೊತ್ತು!"

"ಇಷ್ಟು ದಿನಗಳವರೆಗೆ ನಿನಗೆ ಆ ಮಗನ ನೆನಪಾದರೂ ಆಗಿರಲಿಕ್ಕಿಲ್ಲ. ಒಳ್ಳೇದು ಸಂಭಾಜಿರಾಜನಿಂದ ನಿನ್ನಲ್ಲಿ ಜನ್ಮ ತಾಳಿದ ಮಗನ ಗತಿಯೇನಾಯಿತು?" ಎಂದು ಬೈರಾಗಿಯು ಹಲ್ಲು ಕಡಿಯುತ್ತ ಕೇಳಿದನು.

"ಅದಾದರೂ ನನಗೆ ಗೊತ್ತಿಲ್ಲ."

"ಹೀಗೋ! ಜಗತ್ತಿನಲ್ಲಿ ಮಾತೃಪ್ರೇಮವೇ ನಿಜವಾದ ಪ್ರೇಮವೆಂದು ಪ್ರಾಜ್ಞರು ಅನ್ನುತ್ತ ಬಂದರು. ಪಶು-ಪಕ್ಷಿಗಳು ಸಹ ತಮ್ಮ ಸಂತತಿಯನ್ನು ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿರುವದನ್ನು ನಾವು ನೋಡುತ್ತಿರುತ್ತೇವೆ; ಆದರೆ ನೀನು ಪವಿತ್ರವಾದ ಆ ಮಾತೃಪ್ರೇಮದ ಮೇಲೆ ನಭೂತಪೂರ್ವವಾದ ವಿಜಯವನ್ನು ಸಂಪಾದಿಸಿದೆ; ಮಾತೃಪ್ರೇಮಕ್ಕೆ ಅರದಾಳವನ್ನು ಲೇಪಿಸಿದೆ. ನೀನು ಕೇವಲ ಜಾರೆಯಲ್ಲ; ಮಕ್ಕಳನ್ನು ಮುರಿದು ತಿನ್ನುವ ಮಾರಿಯು! ನನ್ನ ಈ ಮಾತು ನಿಜವಲ್ಲವೆ?"

ಚದುರೆಯು ಈ ಮಾತಿಗೆ ಏನು ಉತ್ತರ ಕೊಡಬೇಕು? ಅವಳು ಮುಖವನ್ನು ಸೆರಗಿನಿಂದ ಮುಚ್ಚಿಕೊಂಡು ಪ್ರಳಾಪಿಸತೊಡಗಿದಳು. ಹಿಂದಕ್ಕೆ ಪತಿಯ ಕೊಲೆಮಾಡಿಸಲಿಕ್ಕೆ ಸಿದ್ಧವಾದ ಅವಳ ಮನಸ್ಸು ಈಗ ಕೇವಲ ಮಕ್ಕಳ ನಾಶದ ಕಲ್ಪನೆಯಿಂದ ಜರ್ಜರಿತವಾಯಿತು. ಅವಳ ಈಗಿನ ಸ್ಥಿತಿ

ಯನ್ನು ನೋಡಿ, ಇವಳಲ್ಲಿ ಎಷ್ಟಾದರೂ ಮಾತೃಹೃದಯವಿರುವದೆಂದು ಬೈರಾಗಿಯು ತಿಳಿದನು.

"ಮನುಷ್ಯನು ದುಷ್ಕರ್ಮಗಳನ್ನು ನಗುತ್ತ ಮಾಡಬೇಕು; ಅಳುತ್ತ ಭೋಗಿಸಬೇಕು. ದೇವರ ನ್ಯಾಯವೇ ಹೀಗಿರುವದು."

ಅತ್ತತ್ತು ಸಾಕಾದ ಮೇಲೆ ಚದುರೆಯು ಬೈರಾಗಿಯನ್ನು ಕುರಿತು:— "ನೀವು ಯಾರು?"

"ನಾನು ಯಾವನಾದರೂ ಇರಲೊಲ್ಲೆನೇಕೆ? ನೀನು ಅದನ್ನು ತೆಗೆದು ಕೊಂಡು ಮಾಡುವದೇನು?" ಬೈರಾಗಿಯು ಹೀಗೆ ಸಹಾನುಭೂತಿಯಿಂದ ನುಡಿದನು; ಆದರೂ ಅವನ ವಾಣಿಯಲ್ಲಿ ಸಹಾನುಭೂತಿಯು ಅಷ್ಟೊಂದು ಪ್ರತಿಬಿಂಬಿತವಾಗಿದ್ದಿಲ್ಲ. ಮುಖಚರ್ಯೆಯು ಮಾತ್ರ ಮೊದಲಿನಷ್ಟು ತಪ್ತ ವಾಗಿದ್ದಿಲ್ಲ. ಇದುವರೆಗಿನ ಅಡಮುಟ್ಟ ಪದ್ಧತಿಯಂತೆ ಈಗ ಮಾತ್ರ ಅವನು ತನ್ನ ಕರಾರಿಯ ಕಡೆಗೆ ಕೈನೀಡಲಿಲ್ಲ. ಇಷ್ಟರಮೇಲಿಂದ ಬೈರಾಗಿಯ ಸಂತಾಪಾ ವೇಗವು ಸ್ವಲ್ಪಮಟ್ಟಿಗಾದರೂ ಶಾಂತವಾಗಿರುವದೆಂದು ಚದುರೆಯ ಕಲ್ಪನೆ ಯಾಯಿತು ಇನ್ನು ಮೇಲೆ ಸಾಮೋಪಚಾರದಿಂದ ಇವನೊಡನೆ ಮಾತಾಡ ಲಿಕ್ಕೆ ಅಡ್ಡಿಯಿಲ್ಲವೆಂದು ಅವಳು ತಿಳಿದಳು.

ತರುಣ ಬೈರಾಗಿಯು ಹಾರಿಸಿಕೊಂಡು ಮಾತಾಡ ಹತ್ತಿದ್ದನ್ನು ನೋಡಿ, ಅವನ ಜೀವನ ಚರಿತ್ರವು ರಹಸ್ಯ ಪೂರ್ಣವಿರುವದೆಂದ- ಚದುರೆಯು ಕಲ್ಪನೆ ಯಾಯಿತು. ಆಗ ಅವಳು ವಿನಯದಿಂದ:—"ಇಲ್ಲಿ ನೋಡಿರಿ. ನೀವು ಯಾರಿದ್ದರೂ ನನ್ನ ವಿಷಯವಾಗಿ ಚನ್ನಾಗಿ ಲಕ್ಷ್ಯಗೊಡುತ್ತ ಬಂದವರಿರುವಿ ರೆಂಬ ಸಂಗತಿಯು ಸ್ಪಷ್ಟವಿದೆ. ಉಪಕಾರಕರ್ತರಾಗಿ ನನ್ನ ಅಧಃಪಾತವನ್ನೂ ಆಪತ್ತನ್ನೂ ನಿವಾರಿಸುವದಕ್ಕಾಗಲಿ, ಯಾವದೊಂದು ಅಜ್ಞಾತ ಕಾರಣದ ಸಲುವಾಗಿ ಕ್ಷುಬ್ಧರಾಗಿ ನನ್ನ ವಧೆ ಮಾಡುವದಕ್ಕಾಗಲಿ, ಒಬ್ಬ ಅನಾಥ ಲಾವಣ್ಯಮಯಿಯು ಅನಾಯಾಸವಾಗಿ ಕೈಸೇರುವಳೆಂದು ಅವಳ ಅಭಿಲಾಷೆ ಗಾಗಲಿ ಹೀಗೆ ಯಾವುದೊಂದು ಉದ್ದೇಶದಿಂದ ನೀವು ನನ್ನನ್ನು ಒಯ್ಯು ತ್ತಿದ್ದರೂ, ನನ್ನ ಆಯುಷ್ಯದೊಳಗಿನ ಮಹತ್ವದ ಹಾಗು ಸೂಕ್ಷ್ಮ ಘಟನೆ ಗಳೆಲ್ಲವೂ ನಿಮಗೆ ಗೊತ್ತಿರುವವೆಂದ ಮೇಲೆ, ನೀವು ನನಗೆ ನಿಶ್ಚಯವಾಗಿಯೂ ಪರಕೀಯರಲ್ಲ!"

"ನಾನು ನಿನಗೆ ಪರಕೀಯನೇ ಇರುವೆನಲ್ಲವೆ?"

"ನಿಜವು; ಆದರೆ ನೀವು ನಿಮ್ಮ ಪರಕೀಯತನವನ್ನು ತೊಡೆದು ಹಾಕಲಿಕ್ಕೆ ಬೇಕು. ನಾನು ಹೇಗೆ ನನ್ನ ಪರಿಚಯ ಮಾಡಿ ಕೊಟ್ಟೆನೋ,

ಹಾಗೆ ನೀವಾದರೂ ನಿಮ್ಮ ಪರಿಚಯ ತಿಳಿಸಲಿಕ್ಕೆ ಬೇಕು. ನನ್ನನ್ನು ಮೋಸಗೊಳಿಸಿ ಸ್ವಾಧೀನಪಡಿಸಿಕೊಂಡ ಕಾರಣವೇನು? ಹಾಗು ನನ್ನನ್ನು ಕಂಡರೆ ನೀವು ತಿರಸ್ಕಾರ-ಸಂತಾಪಗಳನ್ನು ವ್ಯಕ್ತಪಡಿಸುವದೇಕೆ? ನೀವು ನನ್ನನ್ನು ಗುರುತಿಸಿಯೇ ಹೀಗೆ ಕ್ರುದ್ಧರಾಗಿರುವಿರಿ. ನಿನ್ನೆ ನದಿಯಲ್ಲಿಯೇ ಈ ವಿಷಯವನ್ನು ವಿಚಾರಿಸಬೇಕೆಂದು ಮಾಡಿದ್ದೆನು, ಆದರೆ ಆಗ ಧೈರ್ಯವಾಗಲಿಲ್ಲ.''

"ನೀನು ಇಂದು ನಸುಕಿನಲ್ಲಿ ಎಲ್ಲಿಗೆ ಹೊರಟಿದ್ದೆ?"

''ಜೀವಿಸಿರಲಿಕ್ಕೆ ಬೇಸರಗೊಂಡು ಜೀವ ಬಿಡಲಿಕ್ಕೆ ಹೊರಟಿದ್ದೆನು.''

"ನಾನು ನಿನ್ನ ಜೀವ ಹೀರಲಿಕ್ಕೆ ಹೊರಟಿದ್ದೆನು."

''ಇದರ ಅರ್ಥವೇನು?"

''ಇದರ ಅರ್ಥವು ಅದೇ!"

"ನನ್ನ ಜೀವನ ಹೀರುವ ಉತ್ಕಂಠೆಯು ನಿಮ್ಮಲ್ಲಿ ಹುಟ್ಟಿದ ಕಾರಣವೇನು?''

''ನಿನಗೆ ಜೀವಕೊಡುವ ಉತ್ಕಂಠೆಯುಂಟಾಗಲಿಕ್ಕೆ ಯಾವ ಕಾರಣವಿದ್ದಿತೋ, ಆ ಕಾರಣವೇ ನಿನ್ನ ಜೀವ ತೆಗೆದುಕೊಳ್ಳುವದಕ್ಕಾಗಿ ನನ್ನಲ್ಲಿ ಉತ್ಕಂಠೆಯನ್ನು ಹುಟ್ಟಿಸಿತ್ತು. ಇಂದಿನವರೆಗಿನ ನಿನ್ನ ಅಘೋರ ಕೃತ್ಯಗಳಿಂದ ನಿನ್ನ ಪತಿಗೂ ಆಪ್ತರಿಗೂ ಎಷ್ಟು ದುಃಖ ಅಪಮಾನಗಳಾಗಿರುವವೆಂಬದರ ಕಲ್ಪನೆಯು ನಿನಗಿರುವದೋ? ಕುಲಕಲಂಕಿನಿ! ನೀನು ಅತಿ ನೀಚವಾದ ಪಾಪಕರ್ಮಗಳನ್ನು ಮಾಡಿ, ಉಭಯ ಕುಲಗಳನ್ನು ಅಧೋಗತಿಗೆಳೆದೆ! ನೀನು ನಿನ್ನ ಪಾತಕಮಂದಿರದ ಮೇಲೆ ಪತಿಹತ್ಯೆಯ ಶಿಖರವನ್ನಿಟ್ಟೆ. ನಿನ್ನ ಪತಿಯು ದುರ್ವ್ಯಸನಿಯಾಗಿ ನಿನ್ನನ್ನು ತ್ಯಜಿಸಿ ಹೋದದ್ದು ಅನುಚಿತವೆಂಬದರಲ್ಲಿ ವಾದವಿಲ್ಲ. ಇಷ್ಟಕ್ಕಾಗಿ ಕುಲಯುವತಿಯು ತನ್ನ ಪಾವಿತ್ರ್ಯವನ್ನು ಸಂತೆಯಲ್ಲಿಟ್ಟು ಮಾರಬಹುದೆ? ಪತಿಯ ಆ ಅಪರಾಧಕ್ಕೆ ದೇಹಾಂತ ಶಾಸನವು ಅವನ ಧರ್ಮಪತ್ನಿಯಿಂದ ಒದಗಬೇಕೆ? ನಿನ್ನ ಪತಿಯು ಎಷ್ಟೇ ದುರ್ಗುಣಿಯಾಗಿದ್ದರೂ ನಿನ್ನಲ್ಲಿ ಎಷ್ಟು ಪ್ರೇಮವುಳ್ಳವನಾಗಿದ್ದನೆಂಬದರ ಅರಿವು ನಿನಗಿರುವದೆ?''

''ಹೌದು.'' ಚದುರೆಯ ಕಂಠವು ಮತ್ತೆ ಸದ್ಗದಿತವಾಯಿತು.

''ಅವನು ನಿನ್ನ ಮಾತನ್ನು ಎಷ್ಟಾದರೂ ಮನ್ನಿಸುತ್ತಿದ್ದಿಲ್ಲವೆ?''

''ನಿಜ!'' ಕಣ್ಣೀರಿಡುತ್ತ ಚದುರೆಯು ಉತ್ತರವಿತ್ತಳು."

''ಕೊಲೆಮಾಡಿಸುವಾಗ ಮಾತ್ರ ನೀನು ಅವನನ್ನು ಮನಃಪೂರ್ವಕವಾಗಿ ಶೋಧಿಸಿದೆ. ಅತ್ತೆಯ ಮನೆಯಲ್ಲಿದ್ದಾಗಲೆ ಅವನನ್ನು ಹುಡುಕಿ,

ನಾಲ್ಕು ಉಪದೇಶದ ಮಾತು ಹೇಳಿದ್ದರೆ ಎಷ್ಟು ಒಳಿತಾಗುತ್ತಿತ್ತು ನೋಡು."

"ನೀವು ನನ್ನ ಇತಿಹಾಸವನ್ನೆಲ್ಲ ಅರಿತವರಿರುವಿರಿ!"

"ಓಹೋ! ಎಲ್ಲವೂ ಗೊತ್ತಿದೆ."

"ನೀವು ಯಾರೆಂಬದನ್ನು ನನಗೆ ತಿಳಿಸಲಿಕ್ಕೆ ಬರುವಂತಿಲ್ಲವೇನು?"

"ನೀನು ಆಗ್ರಹಪಡತೊಡಗಿರುವದರಿಂದ ಹೇಳುವೆನು ಕೇಳು. ನಿನ್ನ ಪತಿಯು ನನ್ನ ಬಾಲ್ಯಸ್ನೇಹಿತನು. ನಮ್ಮಿಬ್ಬರಲ್ಲಿ ಅನಿರ್ವಚನೀಯವಾದ ಪ್ರೇಮವು ನೆಲೆಗೊಂಡಿತ್ತು. ನಮ್ಮಲ್ಲಿ ನೆಲೆಗೊಂಡ ಪ್ರೇಮವು ನಿನ್ನಲ್ಲಿ ಯಂಥ ಬಾಡಿಗೆಯ ಪ್ರೇಮವಲ್ಲ. ಒಬ್ಬನ ಕಾಲಲ್ಲಿ ಮುಳ್ಳುನಟ್ಟರೆ ಮತ್ತೊಬ್ಬನ ಕಾಲಲ್ಲಿ ರಕ್ತ ಹರಿಯಬೇಕು! ಇಂಥ ಪ್ರೇಮುವು ನಮ್ಮದು. ಒಬ್ಬನಿಗೆ ಗೊತ್ತಿದ್ದ ಸಂಗತಿಯು ಮತ್ತೊಬ್ಬನಿಗೆ ಗೊತ್ತಿಲ್ಲದೆ ಎಂದೂ ಇರುತ್ತಿದ್ದಿಲ್ಲ. ನೀನು ಅವನನ್ನು ಬಿಟ್ಟುಹೋದ ಮೇಲೆ ಅವನಿಗೆ ಎಷ್ಟು ಖೇದವಾಯಿತೆಂಬದು ಅವನಿಗೆ, ನನಗೆ ಹಾಗು ಪರಮೇಶ್ವರನಿಗೆ ಈ ಮೂವರಿಗೇ ಗೊತ್ತು. ಅವನು ಕೆಲವು ದಿನಗಳ ವರೆಗೆ ನಿನ್ನನ್ನು ಬಹುಪರಿಯಾಗಿ ಶೋಧಿಸಿದನು. ನಾನೂ ಅವನಿಗೆ ಈ ಕೆಲಸದಲ್ಲಿ ಸಹಾಯ ಮಾಡಿದೆನು. ನೀನು ನಿನ್ನ ಪತಿಯನ್ನು ಕೊಲ್ಲಲಿಕ್ಕೆ ಕೊಲೆಗಡಕರನ್ನು ಕಳಿಸಿದ ಸಂಗತಿಯು ನಮಗೆ ಗೊತ್ತಾಯಿತು. ಅವರ ಕೈಯೊಳಗಿಂದ ಪಾರಾಗಲಿಕ್ಕೆ ನಿನ್ನ ಪತಿಯು ಬಹಳೇ ಪ್ರಯತ್ನ ಪಟ್ಟನು; ಆದರೆ ಅವನ ಪ್ರಯತ್ನವು ವ್ಯರ್ಥವಾಯಿತು. ಅವನು ಮರಣ ಹೊಂದುವಾಗ ಸಹ ನಿನ್ನನ್ನು ನೆನೆದನು. ಆತನ ಮರಣದ ಪೂರ್ವದಲ್ಲಿ ಕೊಲೆಗಡಕರು ನಿನ್ನಿಂದಲೇ ಕಳಿಸಲ್ಪಟ್ಟ ಬಗ್ಗೆ ಒಪ್ಪಿದರು. ಈ ಮಾತಿನಲ್ಲಿ ನಿನ್ನ ಪತಿಯ ನಂಬಿಗೆಯಾಗದೆ, ನಿನ್ನನ್ನು ಶೋಧಿಸಿ ರಕ್ಷಿಸುವ ಬಗ್ಗೆ ನನಗೆ ತಿಳಿಸಿ ಪ್ರಾಣಬಿಟ್ಟನು. ನೀನು ನಿಜವಾಗಿ ಅಪರಾಧಿನಿಯಿದ್ದರೆ ಕೊಂದು ಬಿಡಬೇಕೆಂದೂ, ನಿರಪರಾಧಿಯಿದ್ದರೆ ರಕ್ಷಿಸಬೇಕೆಂದೂ ನಾನು ಸಂಕಲ್ಪ ಮಾಡಿಕೊಂಡು, ಅಂದಿನಿಂದಲೇ ನಿನ್ನನ್ನು ಹುಡುಕತೊಡಗಿರುವೆನು. ನಾನು ಹೀಗೆ ಅಜ್ಞಾತವಾಸದಲ್ಲಿ ಕಾಲಕಳೆಯುವದರ ರಹಸ್ಯವೂ ಇದೇ ಆಗಿದೆ. ನನ್ನ ಜೀವದ ಗೆಳೆಯನ ಅಂತಿಮ ಇಚ್ಛೆಯನ್ನು ಇಡೇರಿಸುವದೇ ನನ್ನ ಕರ್ತವ್ಯವಾಗಿದೆ. ನಾನು ನನ್ನ ಅಭಿನ್ನಹೃದಯೀ ಮಿತ್ರನ ಇಚ್ಛೆಯ ಮೇರೆಗೆ ನಿನ್ನ ಹಾಗು ನಿನ್ನ ಮಕ್ಕಳ ಯೋಗಕ್ಷೇಮ ತೆಗೆದುಕೊಳ್ಳಬೇಕಾಯಿತು."

"ನನ್ನ ಮಕ್ಕಳು ಈಗ ಎಲ್ಲಿರುವರು?" ಎಂದು ಚದುರೆಯು ಆತುರತೆಯಿಂದ ಕೇಳಿದಳು.

"ಸ್ವಲ್ಪ ತಾಳು; ಆತುರಳಾಗಬೇಡ. ಎಲ್ಲ ಸಂಗತಿಯನ್ನೂ ನಾನು

ಚದುರಿ



ಬೈರಾಗಿ:—ಚದುರೇ, ನೀನು ಇಂದು ನಸುಕಿನಲ್ಲಿ ಎಲ್ಲಿಗೆ ಹೊರಟಿದ್ದೆ?
ಚದುರಿ:—ಜೀವಿಸಿರಲಿಕ್ಕೆ ಬೇಸತ್ತು ಜೀವ ಬಿಡಲಿಕ್ಕೆ ಹೊರಟಿದ್ದೆನು.
ಬೈ:—ಇದರ ಅರ್ಥವೇನು?
ಚ.—ಇದರ ಅರ್ಥವು ಅದೇ!

(ಪುಟ ೭೯)

ನಿನಗೆ ಹೇಳುತ್ತೇನೆ'' ಎಂದು ಭೈರಾಗಿಯು ನುಡಿದು:—''ನಾನು ನನ್ನ ಮಿತ್ರನ ಇಚ್ಛೆಯ ಮೇರೆಗೆ ನಿನ್ನ ಶೋಧನೆಯಲ್ಲಿ ತೊಡಗಿದೆನು. ನನ್ನ ಮಿತ್ರನ ಮೇಲೆ ಕೊಲೆಗಡಕರನ್ನು ಕಳುಹಿಸಿದವರಾರೆಂಬದರ ಬಗ್ಗೆ ನಾನು ಶೋಧನೆ ನಡೆಯಿಸಿದೆನು ಈ ಕೆಲಸದಲ್ಲಿ ಸಂಭಾಜಿರಾಜನ ಹಾಗು ನಿನ್ನ ಅಂಗವಿರುವದೆಂದು ನನಗೆ ತಿಳಿಯಿತು. ನನ್ನ ಮಿತ್ರನ ಕೊನೆಯ ಇಚ್ಛೆಯ ಮೇರೆಗೆ ರಾಜನೂ ನೀನೂ ದಂಡನೆಗೆ ಪಾತ್ರರಿರುವಿರಿ. ಶಿಕ್ಷೆಯನ್ನು ಪ್ರಚಾರ ದಲ್ಲಿ ತರುವ ಸಂಧಿಯನ್ನು ನಾನು ಎದುರು ನೋಡುತ್ತಿದ್ದೆನು ನಿನ್ನನ್ನು ನಿನ್ನೆಯೇ ಕೊಲ್ಲಬೇಕೆಂದು ಯೋಚಿಸಿದ್ದೆನು; ಆದರೆ ನೀನು ನನ್ನ ಮಗ ನನ್ನು ಬದುಕಿಸಿ ಉಪಕಾರಬದ್ಧನನ್ನಾಗಿ ಮಾಡಿದ್ದರಿಂದ ನನ್ನ ವಿಚಾರವು ಬದಲಾಯಿತು ''

''ಆ ಹುಡುಗನು ನಿಮ್ಮ ಮಗನೇನು?''

''ಅಲ್ಲ; ಅವನು ನಿನ್ನ ಮಗನು!''

''ನನ್ನ ಮಗನೆ?''

''ಹೌದು. ನನ್ನ ಅಭಿನ್ನಹೃದಯೀ ಮಿತ್ರನ ಮರಣಸಮಯದ ಇಚ್ಛೆಯ ಮೇರೆಗೆ ನಿನ್ನ ಮಗನಾದ ಸಟವಾಜಿಯನ್ನು ಮಗನಂತೆ ರಕ್ಷಿಸ ತೊಡಗಿದೆನು. ಆ ಹುಡುಗನನ್ನು ನೀನು ಉಳಿಸಿದ್ದರಿಂದ ನನ್ನ ಮೇಲೆ ನಿಜವಾದ ಉಪಕಾರವಾಗದಿದ್ದರೂ, ಆ ಕಾರ್ಯ ಮಾಡುವಾಗ ಅವನು ನಿನ್ನ ಮಗನೆಂಬದನ್ನು ನೀನು ಅರಿತಿರಲಿಲ್ಲ. ಅದಕ್ಕಾಗಿಯೇ ನಾನು ಉಪಕಾರ ಬದ್ಧನಾದೆನು. ನಿನ್ನಲ್ಲಿ ಎಷ್ಟಾದರೂ ಮನುಷ್ಯತ್ವವಿರುವದೆಂಬದನ್ನು ಈ ನಿನ್ನ ಕೃತ್ಯದಿಂದ ನಾನು ಮನವರಿಕೆ ಮಾಡಿಕೊಂಡೆನು. ಚದುರೆ! ನೀನು ಮಾಡಿದ ಉಪಕೃತಿಯಿಂದ ನಿನಗೆ ಜೀವದಾನ ಮಾಡುವೆನೆಂದು ತಿಳಿಯ ಬೇಡ. ನಿನಗೆ ಕರ್ತವ್ಯ ಮಾಡಲಿಕ್ಕೆ ಅವಕಾಶ ಕೊಟ್ಟು ನೋಡುವೆನು. ಈ ಸಂಧಿಯ ಸದುಪಯೋಗವಾಯಿತೆಂದರೆ ಕ್ಷಮೆ ಮಾಡಬೇಕೆಂದು ಮನಸ್ಸು ಮಾಡಿರುವೆನು.''

"ನನ್ನಿಂದ ಯಾವ ಕಾರ್ಯ ಮಾಡಿಸಬೇಕೆಂದು ನಿಮ್ಮ ಇಚ್ಛೆಯಿರು ವದು?"

"ನಿನ್ನ ಆಯುಷ್ಯವನ್ನು ಮಣ್ಣುಪಾಲು ಮಾಡಲಿಕ್ಕೆ ಸಾಹಸ ಮಾಡು ವವರನ್ನು ನಾಶಗೊಳಿಸಬೇಕೆಂದು ನಾನು ಸಂಕಲ್ಪಮಾಡಿಕೊಂಡಿರುವೆನು."

''ಈ ಕೆಲಸದಲ್ಲಿ ಇಂಥವರೇ ತಪ್ಪುಗಾರರೆಂದು ತಿಳಿಯಲಿಕ್ಕೆ ಬರು ವಂತಿಲ್ಲ; ಯಾಕಂದರೆ, ಒಬ್ಬರಿಂದಲೇ ಈ ಕಾರ್ಯವಾಗಿಲ್ಲ.''

"ಬೇಕಾದಷ್ಟು ಜನರು ಈ ಕಾಯದಲ್ಲಿ ಸೇರಿದ್ದರೂ ಮುಖ್ಯ ತಪ್ಪುಗಾರನು ಒಬ್ಬನೇ ಇರುವನು. ನಾನು ಉಳಿದವರ ಪಾರುಪತ್ಯವನ್ನು ಮಾಡುವದಿಲ್ಲೆಂದು ತಿಳಿಯಬೇಡ. ಮೊದಲು ಮುಖ್ಯ ತಪ್ಪುಗಾರನಿಗೆ ಶಾಸನವಿಧಿಸಬೇಕು. ಈ ಕಾರ್ಯದಲ್ಲಿ ನೀನು ನನಗೆ ನೆರವಾದರೆ ಮಾತ್ರ ನಿನಗೆ ಜೀವದಾನ ಕೊಡುವೆನು."

"ನೀವು ಯಾರನ್ನು ಮುಖ್ಯ ತಪ್ಪುಗಾರರೆಂದು ತಿಳಿದಿರುವಿರಿ?"

"ಸಂಭಾಜಿಯೇ ಮುಖ್ಯ ತಪ್ಪುಗಾರನು!" ಎಂದು ಬೈರಾಗಿಯು ನುಡಿಯುವಷ್ಟರಲ್ಲಿ ನೌಕೆಗೆ ತೂತು ಬಿದ್ದು, ನೀರು ಭರದಿಂದ ಒಳಗೆ ಒರತೊಡಗಿತು. ಕೂಡಲೆ ಇಬ್ಬರೂ ಗಾಬರಿಯಾದರು. ಬೇರೆಯವರಿಗೆ ಶಾಸನ ಮಾಡಬೇಕೆಂಬ ಸಾಹಸದಲ್ಲಿ ತೊಡಗಿದ್ದ ತಮಗೆ, ಕೃಷ್ಣೆಯೇ ಶಾಸನವನ್ನೆಲ್ಲಿ ವಿಧಿಸುವಳೋ ಎಂದು ಅವರು ಎದೆಯೊಡೆದರು.



# ಐಕ್ಯ.

*

ಬಾಜೀರಾಯನ ಹಾಗು ಶ್ರೀಪತಿರಾಯನ ಐಕ್ಯಭಾವವನ್ನು ನೋಡಿ ಬ್ರಹ್ಮೇಂದ್ರಸ್ವಾಮಿಗಳು ಆಶ್ಚರ್ಯೋದ್ಗಾರ ತೆಗೆದದ್ದು ಅಯಥಾರ್ಥವಿದ್ದಿಲ್ಲ. ನಿಜವಾಗಿ ಅವರಲ್ಲಿ ಅಹಿ-ನಕುಲಭಾವವೇ ನೆಲೆಗೊಂಡಿತ್ತು. ಅಂದು ಬಾಜೀರಾಯನು ಶ್ರೀಪತಿರಾಯನನ್ನು ಮನಃಪೂರ್ವಕವಾಗಿ ಗೌರವಿಸಿದ್ದಿಲ್ಲ. ಶಾಹೂರಾಜನ ಮನಸ್ಥಿತಿ, ಅವನು ಶ್ರೀಪತಿರಾಯನಲ್ಲಿಟ್ಟ ಅಂಧಪ್ರೇಮ, ಸ್ವರಾಜ್ಯದಲ್ಲಿ ನಾಲ್ಕೂ ಕಡೆಗೆ ಎದ್ದ ಗೊಂದಲ, ಆಗಿನ ಅಶಾಂತ ವಾತಾವರಣ ಮೊದಲಾದವುಗಳ ಕಡೆಗೆ ಲಕ್ಷ್ಯಗೊಟ್ಟು, ಬಾಜೀರಾಯನು ಪ್ರತಿನಿಧಿಯನ್ನು ಸ್ನೇಹಬದ್ಧನನ್ನಾಗಿ ಮಾಡುವ ಧೋರಣವಿಟ್ಟಿದ್ದನು. ಬಾಜೀರಾಯನು ಪೇಶವೆಯಾದಂದಿನಿಂದ ಪೇಶವೆ ಪ್ರತಿನಿಧಿಗಳಲ್ಲಿಯ ವೈಮನಸ್ಸು ದಿನದಿನಕ್ಕೆ ಬೆಳೆಯ ಹತ್ತಿತ್ತು. ಶಾಹೂಮಹಾರಾಜನೆದುರಿಗೆ ಯಾವಾಗಲೂ ಪರಸ್ಪರರು ಪರಸ್ಪರರ ಚಾಡಿಗಳನ್ನು ಹೇಳುತ್ತಲಿದ್ದರು ಅವರನ್ನು ಸಂತೈಸಬೇಕಾದರೆ ಬ್ರಹ್ಮೇಂದ್ರಸ್ವಾಮಿಗಳಿಗೂ ಮಹಾರಾಜನಿಗೂ ಸಾಕು ಸಾಕಾಗಿ ಹೋಗುತ್ತಿತ್ತು. ಅವರಿಬ್ಬರಲ್ಲಿ ಏಕಮತವಾಗುವದೆಂದು ಯಾರೂ ತಿಳಿದಿರಲಿಲ್ಲ. ಅವರಲ್ಲಿ ಸಖ್ಯವನ್ನು ನೆಲೆಗೊಳಿಸಬೇಕೆಂದು ಶಾಹೂಮಹಾರಾಜನೂ ಬ್ರಹ್ಮೇಂದ್ರಸ್ವಾಮಿಗಳೂ ಇನ್ನೂ ಅನೇಕ ಪ್ರತಿಷ್ಠಿತ ಅಧಿಕಾರಿಗಳೂ ಪ್ರಯತ್ನ ಮಾಡಿ ನಿಷ್ಫಲಮನೋರಥರಾಗಿದ್ದರು. ಪೇಶವೆ-ಪ್ರತಿನಿಧಿಗಳು ಸ್ವರಾಜ್ಯದೊಳಗಿನ ಶ್ರೇಷ್ಠತರಗತಿಯ ಅಧಿಕಾರಿಗಳು. ಅವರಿಬ್ಬರು ಐಕ್ಯದಿಂದ ನಡೆದರೆ ಸ್ವರಾಜ್ಯದ ಅಭ್ಯುದಯವಾಗುವದೆಂದು ಎಲ್ಲರ ಮನವರಿಕೆಯಾಗಿತ್ತು; ಆದರ ಮಾಡುವದೇನು? ಹುಲಿ-ಆಕಳನ್ನು ಒಂದೆಡೆಯಲ್ಲಿ ಇರಿಸಬಹುದು; ಆದರೆ ಪೇಶವೆ-ಪ್ರತಿನಿಧಿಗಳನ್ನು ಒಂದು ಮಾಡುವದು ಅದಕ್ಕಿಂತಲೂ ಅಸಾಧ್ಯವಾಗಿತ್ತು ನಿಜವಾಗಿ ವಿಚಾರಿಸಿದರೆ ಶ್ರೀಪತಿರಾಯನೇ ಆ ಅವ್ಯವಸ್ಥೆಗೆ ಕಾರಣನು. ಪೇಶವೆಯು ಎಲ್ಲವನ್ನೂ ಸುಧಾರಿಸಿಕೊಂಡು ಹಿಂದುಪದ ಪಾತಶಾಹಿಯ ಏಳ್ಗೆಗಾಗಿ ಪ್ರಯತ್ನಿಸುವಂಥವನು. ಶ್ರೀಪತಿರಾಯನನ್ನು ಕೆಲಸದಿಂದ ತಳ್ಳಬೇಕೆಂದು ಕೆಲವರ ಸೂಚನೆಗಳು ಮಹಾರಾಜನ ಕಡೆಗೆ ಬಾರದಿದ್ದಿಲ್ಲ; ಆದರೆ ಮಹಾರಾಜನ ಕೃಪಾಛತ್ರವು ಪ್ರತಿನಿಧಿಯ ಮೇಲೆ ಇದ್ದುದರಿಂದ ಅವರ ಸೂಚನೆಗಳು ಪ್ರಚಾರದಲ್ಲಿ ಬರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅಹಿ-ನಕುಲಗಳ ಐಕ್ಯವು ಯಾರಿಗೆ ವಿಸ್ಮಯವೆನಿಸಲಿಕ್ಕಿಲ್ಲ?

ಬ್ರಹ್ಮೇಂದ್ರಸ್ವಾಮಿಗಳು ಪೇಶವೆ-ಪ್ರತಿನಿಧಿಗಳ ಐಕ್ಯವನ್ನು ನೋಡಿ

ಸಂಭ್ರಮದಿಂದ ಉದ್ಗಾರ ತೆಗೆದ ಕೂಡಲೆ ಶಾಹೂಮಹಾರಾಜನು ಸಂತುಷ್ಟ ಮನಸ್ಕನಾಗಿ:—"ಸ್ವರಾಜ್ಯದ ಅಭ್ಯುದಯ ಕಾಲವು ಒದಗಿತೆನ್ನಬಹುದು." ಎಂದು ನುಡಿದು:—"ಪೇಶವೆ, ಪ್ರತಿನಿಧಿ, ಇಂದು ನಿಮ್ಮನ್ನು ಒಂದು ಸೂಕ್ಷ್ಮ ರಾಜಕಾರಣಕ್ಕಾಗಿ ಕರೆಯಿಸಿರುವೆನು. ಸಂಭಾಜಿ-ಉದಾಜಿಯರನ್ನು ಬಿಗಿ ಪಡಿಸುವ ಒಂದು ಉಪಾಯ ಯೋಚನೆ ಮಾಡುವದಿದೆ."

"ಏನು? ಮಹಾರಾಜರೆ! ಚವ್ಹಾಣನು ಮತ್ತೆ ಎದ್ದು ಕುಳಿತಿರುವನೆ?" ಎಂದು ಶ್ರೀಪತಿರಾಯನು ಏನೂ ಗೊತ್ತಿಲ್ಲದವರಂತೆ ಮಾತಾಡಿದನು.

ಬ್ರಹ್ಮೇಂದ್ರಸ್ವಾಮಿಗಳು ಶ್ರೀಪತಿರಾಯನ ಈ ಮಾತುಗಳನ್ನು ಕೇಳಿ ಸಂತಪ್ತರಾಗಿ, ಅವನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ.—"ಇಂಥ ಮಾತ್ರಾಗಮನೀ ಜನರು ಶಾಹೂ ಮಹಾರಾಜನ ಸುತ್ತಲೂ ಬಹಳ. ಅವರು ಯಾವ ಮನೆಯ ಅನ್ನವನ್ನುಣ್ಣುವರೋ ಅದೇ ಮನೆಯ ಜಂತೆಗಳನ್ನೆಣಿಸುವರು; ಯಾವ ಪಾತ್ರೆಯಲ್ಲಿ ಸುಗ್ರಾಸ ಭೋಜನ ಮಾಡುವರೋ, ಅದೇ ಪಾತ್ರೆಯಲ್ಲಿ ಲಘುಶಂಕೆಯನ್ನು ಮಾಡುವರು!"

ಸ್ವಾಮಿಗಳು ಈ ವಿಷಯವನ್ನು ಚವ್ಹಾಣನ ಸಲುವಾಗಿ ಆಡಿದರೆಂದು ಶಾಹೂಮಹಾರಾಜನ ಗ್ರಹಿಕೆಯಾಯಿತು ಬಾಜಿರಾಯನಂತು ಇಂಥ ದೋಷದಿಂದ ಅಲಿಪ್ತನೇ ಇದ್ದನು. ತಾನು ಇಂದು ಚವ್ಹಾಣನೊಡನೆ ಕಾರಸ್ಥಾನ ರಚನೆ ಮಾಡಿದ್ದನ್ನು ಸ್ವಾಮಿಗಳು ಅಂತಜ್ಞಾನದಿಂದ ತಿಳಿದೇ ಹೀಗೆ ಮಾತಾಡಿದರೆಂದು ಪ್ರತಿನಿಧಿಯು ತಿಳಿದನು. ಆ ಮಾತನ್ನು ಹೊರಗಿಂದ ಹೊರಗೇ ಕಳುಹಿಸಬೇಕೆಂಬ ಉದ್ದೇಶದಿಂದ ಅವನ.—"ಸ್ವಾಮಿ ಮಹಾರಾಜರ ಮಾತು ಅಕ್ಷರಶಃ ನಿಜವು ಮಹಾರಾಜರ ಸುತ್ತಲೂ ವಿಷಮಯ ವಾತಾವರಣವು ಪಸರಿಸುತ್ತಲಿದೆ. ಆದರಿಂದ ಕಳ್ಳನು ನಿರ್ಬಾಧಕವಾಗಿ ಪಾರಾಗಿ ಸನ್ಯಾಸಿಯು ಶೂಲಕ್ಕೆ ಬೀಳುವ ಸಂಭವವೇ ಹೆಚ್ಚಾಗಿದೆ. ಆದ್ದರಿಂದಲೇ ನಾನು ಈ ರಾಜಕಾರಣದ ಗೊಂದಲದಿಂದ ಅಲಿಪ್ತನಾಗಿರುವ ಧೋರಣವನ್ನು ಸ್ವೀಕರಿಸಿದ್ದೇನೆ."

ಶ್ರೀಪತಿರಾಯನು ಬಾಜೀರಾಯನನ್ನುದ್ದೇಶಿಸಿಯೇ ಈ ಮಾತನ್ನಾಡಿದ್ದನು. ಅವನ ಧೋರಣವು ಬಾಜೀರಾಯನಿಗೆ ತಿಳಿಯಿತು. ಆಗ ಅವನು: "ಶ್ರೀಪತಿರಾಯರೆ, ನೀವು ಹೀಗೆ ವರ್ತನವಿಟ್ಟರೆ ರಾಷ್ಟ್ರದ ಹಾನಿಯಾಗುವದು. ಪರಾಕ್ರಮಿ ವೀರನು ಕುಶಾಗ್ರತೆಯಿಂದ ಶತ್ರುಗಳ ಚಲನ-ವಲನದ ಮೇಲೆ ಲಕ್ಷ್ಯಗೊಟ್ಟು, ಧನಿಯ ಸಲುವಾಗಿ ನಿರ್ವೇಧವಾದ ಮಾರ್ಗವನ್ನು ಹುಡುಕಲಿಕ್ಕೆ ಬೇಕು."

"ಶ್ರೀಪತಿರಾಯರೆ, ನಿಮಗೆ ಕಳ್ಳರ ಭಯವೆನಿಸಿದರೆ, ಕಳ್ಳರನ್ನೊಡಗೂಡಿ ಅವರ ಮನೆಯಲ್ಲಿಯೆ ಬೀಡಾರ ಮಾಡಿಬಿಡುವದು ಉಚಿತವು." ಎಂದು ಬ್ರಹ್ಮೇಂದ್ರಸ್ವಾಮಿಗಳು ನುಡಿದರು.

ಸ್ವಾಮಿಗಳ ಈ ಮಾತುಗಳು ಶ್ರೀಪತಿರಾಯನ ಮರ್ಮಕ್ಕೆ ತಾಕಿದವು. ಆಗ ಶಾಹೂಮಹಾರಾಜನು ಪ್ರತಿನಿಧಿಯಲ್ಲಿ ಹುಟ್ಟಿದ ಸಂಶಯವೃತ್ತಿಯು ದೂರವಾಗಬೇಕೆಂದು.—"ಅಂತೆಯೇ ನಾನು ಚವ್ಹಾಣನೊಡನೆ ಸ್ನೇಹ ಬಳೆಯಿಸಲಿಕ್ಕೆ ಯತ್ನ ಮಾಡಿದೆನು. ನನ್ನ ಸಾಹಸವು ವ್ಯರ್ಥವಾಯಿತು." ಎಂದು ನುಡಿದು, ಚವ್ಹಾಣನ ಪತ್ರವನ್ನು ಪ್ರತಿನಿಧಿಯ ಕೈಯಲ್ಲಿ ಕೊಟ್ಟು:— "ಇದನ್ನು ಮನಮುಟ್ಟಿ ಓದಿರಿ." ಎಂದು ಹೇಳಿದನು.

ಪತ್ರವನ್ನು ನೋಡಿ ಶ್ರೀಪತಿರಾಯನು ಮನದಲ್ಲಿ ಆನಂದಬಟ್ಟನು. ಚವ್ಹಾಣನು ಈಗ ಬಲಶಾಲಿಯಾಗಿದ್ದುದರಿಂದಲೇ ಹೀಗೆ ಪತ್ರಬರೆದಿರುವನೆಂದು ಅವನ ಭಾವನೆಯಾಯಿತು. ಇಂಥ ಸ್ಥಿತಿಯಲ್ಲಿ ತಾನು ಅವನೊಡನೆ ಕಾರಸ್ಥಾನ ನಡೆಯಿಸಿರುವದು ಅನುಚಿತವಾಗಲಿಲ್ಲೆಂದು ಅವನು ಹರ್ಷನಿರ್ಭರನಾದನು ಅವನು ತನ್ನ ಈ ಆನಂದವಿಕಾರವನ್ನು ಬೈಲಿಗೆಳೆಯದೆ -"ಶತ್ರುಗಳು ಹೀಗೆ ಏರಲಿಕ್ಕೆ ನಮ್ಮ ಕೃತ್ಯಗಳೇ ಕಾರಣವು. ನಮ್ಮ ನಮ್ಮಲ್ಲಿ ಐಕ್ಯವಿಲ್ಲ ಹೀಗಿರುವಾಗ ರಾಜಮನತನಗಳ ಐಕ್ಯವನ್ನು ಸಾಧಿಸಿ ರಾಜ್ಯದ ಹಿತವನ್ನೇನು ಮಾಡುವೆವು? ಪೇಶವೆಯವರು ನಿಜಾಮನನ್ನು ಕೆಣಕಿ ಮಣ್ಣುಪಾಲು ಮಾಡದಿದ್ದರ, ಅವನು ನಮ್ಮೊಡನೆ ಸಹಕಾರದಿಂದಿರುತ್ತಿದ್ದನು. ಉಳಿದ ಶತ್ರುಗಳೂ ನರಳಿಗ ಬರುತ್ತಿದ್ದಿಲ್ಲ ಗುಜರಾಥ-ಮಾಳವಗಳ ರಾಜಕಾರಣದಲ್ಲಾದರೂ ಇವೇ ಗತಿಯಾಗಿದ. ಸೇನಾಪತಿ ಪದದ ಬಾಧ್ಯತೆಯಲ್ಲಿ ಕೈಹಾಕಿ ಅವರ ಶತ್ರುತ್ವವನ್ನು ಸಂಪಾದಿಸಿದಂತಾಗಿದೆ. ಆಸೇತು-ಹಿಮಾಚಲದ ವರಗಿನ ಅಖಂಡ ಭರತವರ್ಷವು ಸ್ವರಾಜ್ಯದ ಛತ್ರದಲ್ಲಿ ಬರಬೇಕೆಂದು ನಾವು ಮಹತ್ವಾಕಾಂಕ್ಷ ತಾಳಿದರೆ, ಸದ್ಯದ ಕಲುಷಿತ ವಾತಾವರಣದಲ್ಲಿ ಸಾಧ್ಯವಿರುವದೆ? ಗುಡ್ಡಕ್ಕೆ ಹಗ್ಗ ಹಾಕುವ ಕಾರ್ಯ ಮಾಡುತ್ತ ಹೋಗುವದರಿಂದಲೇ ಚವ್ಹಾಣನಂಥ ಕ್ಷುದ್ರಜನರು ನಿರಾತಂಕವಾಗಿ ಸ್ವಾಮಿಮಹಾರಾಜರಂಥ ಜನರ ಉಪಮರ್ದಗೊಳಿಸಲಿಕ್ಕೆ ಸಮರ್ಥರಾಗತೊಡಗಿರುವರು. ಅವರ ದುಷ್ಕೃತ್ಯಗಳನ್ನು ನೋಡುತ್ತ ನಾವು ತಣ್ಣಗೆ ಕುಳಿತುಕೊಳ್ಳಬೇಕಾಗಿರುವದಲ್ಲವೆ, ನಮ್ಮ ಕೈಯಿಂದ ಅವುಗಳ ಪರಿಮಾರ್ಜನೆಯಾಗುವಂತಿಲ್ಲ. ಇಂಥ ಪರಿಯೀದ ರಾಜಕಾರಣದಲ್ಲಿ ಏಕೆ ತಲೆಹಾಕಬೇಕು? ಇಂಥ ಆಡಳಿತ ನಡೆಯಿಸುವದಕ್ಕಿಂತ ಸೇವಾನಿವೃತ್ತಿ ಹೊಂದುವದೇ ಶ್ರೇಯಸ್ಕರವೆಂದು

ನನಗೆ ತೋರುವದು. ಇಷ್ಟು ದಿನ ಘಟಿಸಿದ ಸೇವೆಯೇ ಸಾಕಾಯಿತು. ಮಹಾರಾಜರೆ, ಇನ್ನು ನನಗೆ ಅಪ್ಪಣೆ ಕೊಡಿರಿ. ನೀವು ಪೇಶವೆಯವರ ತಂತ್ರದಿಂದಲೇ ಆಡಳಿತ ನಡೆಯಿಸಿರಿ. ಒಂದು ಒರೆಯಲ್ಲಿ ಎರಡು ಕತ್ತಿಗಳನ್ನಿರಿಸುವದು ಸಾಧ್ಯವಲ್ಲ''

ಶ್ರೀಪತಿರಾಯನು ಬಾಜೀರಾಯನ ವಿರುದ್ಧವಾಗಿ ನಿಷ್ಕಾರಣ ಆಕ್ಷೇಪಣೆ ತೆಗೆದುಕೊಂಡಿದ್ದನು ಪೇಶವೆಯ ರಾಜಕಾರಣವು ಶಾಹೂಮಹಾರಾಜ-ಬ್ರಹ್ಮೇಂದ್ರಸ್ವಾಮಿ ಮೊದಲಾದವರಿಗೆ ಸಮಂಜಸವಾಗಿ ತೋರ ತೊಡಗಿತ್ತು. ಅವನ ವರ್ಧಮಾನ ಅಭ್ಯುದಯವನ್ನು ನೋಡಿ ಸಹಿಸದೆ, ಪ್ರತಿನಿಧಿಯು ಹೀಗೆ ಪ್ರಳಾಪ ನಡೆಯಿಸಿದ್ದನು. ಶಾಹೂರಾಜನು ಪ್ರತಿನಿಧಿಯ ಗುರಿಯನ್ನು ತಿಳಿದು —"ರಾವ! ಪರಸ್ಪರರು ಪರಸ್ಪರರ ಹುಳುಕು ತೆಗೆಯಬೇಕೆಂಬ ಉದ್ದೇಶದಿಂದ ನಿಮ್ಮನ್ನು ಇಲ್ಲಿಗೆ ಕರೆಯಿಸಿಲ್ಲ. ಸದ್ಯದ ತೊಂದರೆಯ ಪ್ರಸಂಗದಿಂದ ಸುರಕ್ಷಿತವಾಗಿ ಪಾರಾಗಲಿಕ್ಕೆ ಉಪಾಯ ಯೋಜನೆ ಮಾಡಬೇಕೆಂದು ನಿಮ್ಮನ್ನು ಕರೆಯಿಸಿದ್ದೇನೆ. ಸದ್ಯದ ತೊಂದರೆಗಳು ಹೇಗೆ ಉಂಟಾಗಿರುವವೆಂಬದು ನನಗೆ ತಿಳಿಯುತ್ತದೆ. ಸದ್ಯದ ಪ್ರಸಂಗದಲ್ಲಿ ನೀವು ಯಾವದೊಂದು ಉಪಾಯವನ್ನು ಹುಡುಕಿ ತೆಗೆಯಿರಿ. ಆ ಉಪಾಯವು ನಿಮಗೂ ನನಗೂ ಸಮ್ಮತವಾಯಿತೆಂದರೆ, ಪೇಶವೆಯವರಾದರೂ ಅದನ್ನು ಮಾನ್ಯಮಾಡುವರು.''

''ಈ ಮೊದಲು ನಾನು ಪ್ರತಿನಿಧಿಗಳ ಯೋಗ್ಯ ಸಲಹೆಗಳನ್ನು ಎಂದೂ ಅಮಾನ್ಯ ಮಾಡಿಲ್ಲ.'' ಎಂದು ಪೇಶವೆಯು ಹೇಳಿದನು.

''ಇದುವರೆಗೆ ನಾನು ನಿಮಗೆ ಅನುಕರಣೀಯ ಸಲಹೆಗಳನ್ನು ಕೊಟ್ಟಿಲ್ಲವೆಂದು ನಿಮ್ಮ ಮಾತಿನ ಅರ್ಥವಷ್ಟೆ?'' ಎಂದು ಪ್ರತಿನಿಧಿಯು ಏರಿಕೆಯ ಸ್ವರದಲ್ಲಿ ನುಡಿದನು.

''ನೀವು ನನ್ನ ಮಾತಿನ ಅರ್ಥವನ್ನು ವಿಪರ್ಯಾಸಗೊಳಿಸುತ್ತಿರುವಿರಿ.''

''ನಾನೇ ವಿಪರ್ಯಸ್ತ ಮಾಡುವೆನೆ?''

''ಇಲ್ಲ; ನಾನು ಮಾಡುತ್ತಿರುವೆನು!''

''ಆಯಿತು. ಪೇಶವೆ-ಪ್ರತಿನಿಧಿಗಳ ಐಕ್ಯಕ್ಕೆ ದೃಷ್ಟಿಯಾಯಿತು!'' ಬ್ರಹ್ಮೇಂದ್ರಸ್ವಾಮಿಗಳು ನುಡಿದರು.

''ಏನಾಯಿತು?'' ಎಂದು ಪೇಶವೆಯು ಕೇಳಿದನು.

''ಪೇಶವೆ-ಪ್ರತಿನಿಧಿಗಳ ಐಕ್ಯವಾಯಿತೆಂದು ನಾವು ಇದೇ ಈಗ ಪ್ರ-ಶಂಸೆ ಮಾಡುತ್ತಿದ್ದೆವು; ಇಷ್ಟರಲ್ಲಿಯೆ ಅದು ಕೆಟ್ಟು ಹೋಯಿತು, ಆದ್ದರಿಂದ

ಐಕ್ಯಕ್ಕೆ ದೃಷ್ಟಿಹತ್ತಿತೆಂದು ಹೇಳಿದೆನು.''

''ಮಹಾರಾಜರೆ! ಸ್ವಾಮಿಮಹಾರಾಜರೆ!'' ಬಾಜೀರಾಯನು ಆಸನದಿಂದೆದ್ದು.—''ಪೇಶವೆಯಿಂದ ಐಕ್ಯಕ್ಕೆ ಬಾಧೆಯುಂಟಾಗಿ, ಶುಕ್ಲೇಂದುವಿನಂತೆ ವೃದ್ಧಿಂಗತ ಹೊಂದುವ ಹಿಂದುಪದ ಪಾತಶಾಹಿಯ ವೈಭವ ಚಂದ್ರನಿಗೆ ಒಡಕಿನ ಗ್ರಹಣವು ಪೇಶವೆಯಿಂದ ಉಂಟಾಯಿತೆಂಬ ಅಪವಾದವನ್ನು ದೂರ ಮಾಡುವದಕ್ಕೆ ನಾನು ಬೇಕಾದಂಥ ಸ್ವಾರ್ಥತ್ಯಾಗ ಮಾಡಲಿಕ್ಕೆ ಸಿದ್ಧನಿದ್ದೇನೆ; ಹಾಗು ಬೇಕಾದ ಹಾಗೆ ಬಾಗಿ ನಡೆಯಲಿಕ್ಕೆ ಮನಸ್ಸು ಮಾಡಿದ್ದೇನೆ. ಒಂದು ಒರೆಯಲ್ಲಿ ಎರಡು ಕತ್ತಿಗಳು ಇರುವದು ಸಾಧ್ಯವಿಲ್ಲವೆಂದು ಪ್ರತಿನಿಧಿಗಳ ಪ್ರಾಮಾಣಿಕ ಮತವಿದ್ದರೆ, ಒಂದು ಕತ್ತಿಯನ್ನು ಅವಶ್ಯವಾಗಿ ತೆಗೆದೊಗೆಯಿರಿ. ಮಹಾರಾಜರು ನನ್ನ ಅಧಿಕಾರವನ್ನು ಪ್ರತಿನಿಧಿಗಳಿಗೆ ಕೊಡಬಹುದು ಅನಂತರದಲ್ಲಿ ಶ್ರೀಪತಿರಾಯರು ಈ ಕತ್ತಿಯಿಂದ ಕುಡಗೋಲನ್ನು ಮಾಡಲಿ, ಅಥವಾ ಈಳಿಗೆಯನ್ನು ಮಾಡಲಿ ನನಗೆ ಪೇಶವೆಪದದ ಅಥವಾ ಸರ್ವಾಧಿಕಾರದ ಹವ್ಯಾಸವಿರುವದಿಲ್ಲ. ಯಾತರಿಂದ ಸ್ವರಾಜ್ಯಸೇವೆಯು ಘಟಿಸುವದೋ, ಯಾವದರಿಂದ ದೇಶಹಿತವು ಸಾಧಿಸಿ ಜನ್ಮದ ಸಾರ್ಥಕತೆಯಾಗುವದೋ ಅಂಥ ಯಾವ ಕೆಲಸವನ್ನಾದರೂ ನಾನು ಪ್ರಾಮಾಣಿಕತನದಿಂದ ಮಾಡಿಯೇ ಮಾಡುವೆನು ಹೀಗೆ ಏಕತಂತ್ರೀ ರಾಜ್ಯವಾಗುವದರಿಂದ ಶ್ರೀಪತಿರಾಯರಿಗೆ ತಮ್ಮ ಪ್ರತಾಪವನ್ನು ವ್ಯಕ್ತಗೊಳಿಸಲಿಕ್ಕೆ ಆಸ್ಪದವೂ ದೊರೆಯುವದು; ಒಳಜಗಳವೂ ನಷ್ಟವಾಗುವದು; ಸ್ವರಾಜ್ಯದ ಕಲ್ಯಾಣವೂ ಸಾಧಿಸುವದು.''

"ನೀವು ಮಾಡಿದ ಪಾಪಗಳನ್ನು ನಿಸ್ತರಿಸಲಿಕ್ಕೆ ನಿಮಗೆ ಈಗ ಶ್ರೀಪತಿರಾಯನು ಬೇಕು!" ಶ್ರೀಪತಿರಾಯನು ಆಢ್ಯತೆಯಿಂದ.—''ನನಗೆ ಅದು ಹೇಗೆ ಸಾಧಿಸಬೇಕು? ನೀವು ಉತ್ತರದಲ್ಲಿ ದಾಭಾಡೆಯ ಆಡಳಿತದಲ್ಲಿ ಕೈಹಾಕಿ ಗೊಂದಲವೆಬ್ಬಿಸುವಾಗ ನನ್ನನ್ನೇ ವಿಚಾರಿಸಿದ್ದಿರೇನು? ಸಿದ್ದಿಯು ನಿಮ್ಮ ತಪ್ಪಿನಿಂದಲೇ ಹುಚ್ಚೆದ್ದು ಹರಿದಾಡುತ್ತಿರುವನು. ಸಿದ್ದಿಯೊಡನೆ ಅಪ್ರಾಮಾಣಿಕತನದಿಂದ ನಡೆದು, ನ್ಯಾಯ ಕೊಳ್ಳಲಿಕ್ಕೆ ನಾವೇನೂ ನಿಮ್ಮ ತೀರ್ಥರೂಪರವರಿಗೆ ಹೇಳಿದ್ದಿಲ್ಲ. ಅವರವರ ಕರ್ಮಫಲಗಳನ್ನು ಅವರು ಭೋಗಿಸಲಿಕ್ಕೇ ಬೇಕು.''

ಶ್ರೀಪತಿರಾಯನು ಕ್ಷಣಕ್ಷಣಕ್ಕೆ ಹೆಚ್ಚು ಹೆಚ್ಚಾಗಿ ವಿಷಕಾರತೊಡಗಿರುವನೆಂಬದು ತಿಳಯಲಿಕ್ಕೆ ಅಲ್ಲಿಯ ಜನರಿಗ ಒಹಳ ಅವಕಾಶ ಹತ್ತಲಿಲ್ಲ. ಸ್ವಾಮಿಮಹಾರಾಜರಂತು ಅವನ ಮಾತು ಕೇಳಿ ಕ್ಷುಬ್ಧರಾದರು. ಆಗ

ಅವರು:—"ತಿಳಿಯಿತು, ಶಾಹೂಮಹಾರಾಜಾ! ನನಗೆ ಸ್ವರಾಜ್ಯದ ಅದೃಷ್ಟವು ಚೆನ್ನಾಗಿ ತಿಳಿಯಿತು. ಗೃಹಕಲಹವನ್ನೇ ಶಾಂತ ಮಾಡುವದು ನಿನ್ನಿಂದ ಅಸಾಧ್ಯವಾಗಿದೆ; ಹೀಗಿರಲು, ರಾಜ ದ ಹೊರಗಿರುವ ದುರ್ಜನರ ನಿಗ್ರಹ ಮಾಡಿ ಗೋಬ್ರಾಹ್ಮಣಪ್ರತಿಪಾಲನೆಯನ್ನೇನು ಮಾಡುವೆಯೆಂಬದು ಕಣ್ಣಿಗೆ ಕಂಡದ್ದೇ ಇದೆ. ನಿನ್ನ ರಾಜ್ಯವು ಸಾಧು-ಸಜ್ಜನರ ವಾಸ್ತವ್ಯಸ್ಥಾನವಲ್ಲ ಇಲ್ಲಿ ಕಳ್ಳ-ಕಾಕರಿಗೆ ಹಾಗು ಸ್ವಾರ್ಥಿಗಳಿಗೆ ಮರ್ಯಾದೆಯುಂಟು ಒಳ್ಳೇದು. ನಿನ್ನ ರಾಜ್ಯವೇನೋ, ನಿನ್ನ ಬೊಕ್ಕಸವೇನೋ? ಬೇಕಾದ ಹಾಗೆ ನೀನು ವರ್ತಿಸು. ಇದೋ, ನಾನು ಹೊರಟೆನು!"

"ಬೇಡಿರಿ. ಸ್ವಾಮಿಮಹಾರಾಜರ! ಹೀಗೆ ಮಾಡಬೇಡಿರಿ!" ಎಂದು ಬಾಜೀರಾಯನು ಸ್ವಾಮಿಗಳಿಗೆ ವಿನಂತಿ ಮಾಡಿಕೊಂಡು, ಶಾಹೂರಾಜನನ್ನು ಕುರಿತು:—"ಮಹಾರಾಜರೆ! ಈ ವೇಳೆಯಲ್ಲಿ ನೀವು ಸೂಚಿಸಿದ ಉಪಾಯವನ್ನು ಶಿರಸಾಮಾನ್ಯ ಮಾಡುವೆನು. ಈ ಸಾಧುಸಂತಾಪದ ಅಗ್ನಿವೃಷ್ಟಿಯನ್ನು ನಿಮ್ಮ ಪುಣ್ಯದಿಂದ ನಿಲ್ಲಿಸಿರಿ."

ಈ ಎಲ್ಲ ಅನರ್ಥಕ್ಕೆ ಶ್ರೀಪತಿರಾಯನೇ ಕಾರಣನೆಂಬದು ಶಾಹೂರಾಜನಿಗೆ ತಿಳಿಯಿತು ಆಗ ಅವನು:—"ರಾವ! ನೀವು ಸುಮ್ಮನೆ ಇರ್ರಿ! ನೀವು ನಮ್ಮ ಸೇವಕರಿರುತ್ತೀರಿ. ನಿಮ್ಮ ಈ ಉದ್ಧಾಮತನವು ನಮ್ಮ ಮುಂದೆ ನಡೆಯುವದಿಲ್ಲ. ಮನುಷ್ಯನಲ್ಲಿ ಕರ್ತವ್ಯಪ್ರಭಾವವಿಲ್ಲದಿದ್ದರೂ, ಮನುಷ್ಯತ್ವವಾದರೂ ಇರಬೇಕಾಗುವದು. ಮಾತ್ಸರ್ಯವಿಷವು ಸರ್ವವಿಷಕ್ಕಿಂತಲೂ ಪ್ರಖರವಾದದ್ದು. ಸಾಮಾನ್ಯ ವಿಷದಿಂದ ಭೇದಿಸಿದವನೊಬ್ಬನೇ ನಾಶ ಹೊಂದುತ್ತಾನೆ; ಮಾತ್ಸರ್ಯ ವಿಷವು ಬೇರೆಯವರನ್ನೂ ನಾಶಪಡಿಸುವದು. ನಿಮ್ಮ ನಿಮ್ಮಲ್ಲಿ ಐಕ್ಯವಾಗಬೇಕೆಂದು ನಾವು ಯತ್ನಿಸುವಾಗ, ನೀವು ಒಡಕು ಬೆಳಿಯಿಸಲಿಕ್ಕೆ ಹವಣಿಸುತ್ತಿರುವಿರಿ!"

ಶ್ರೀಪತಿರಾಯನು ಶಾಹೂಮಹಾರಾಜನ ಈ ಬೆದರಿಕೆಗೆ ಸೊಪ್ಪುಹಾಕಲಿಲ್ಲ. ಅವನಿಗೆ ಒಡೆಯನ ಸ್ವಭಾವವು ಚೆನ್ನಾಗಿ ಗೊತ್ತಿತ್ತು ಆದ್ದರಿಂದ ಅವನು ಗಂಭೀರತೆಯಿಂದ:—"ಮಹಾರಾಜರೇ! ನನ್ನಿಂದಲೇ ಒಡಕು ಬೆಳಿಯುತ್ತಿದ್ದರೆ, ನನ್ನಿಂದಲೆ ಅನರ್ಥವೊದಗುತ್ತಿದ್ದರೆ ನನಗೆ ಈಗಲೆ ಅಪ್ಪಣೆ ಕೊಡಿರಿ. ಪೇಶವೆಯವರ ಸಮಾಧಾನಕ್ಕಾಗಿ ನಾನು ಪ್ರತಿನಿಧಿಪದಕ್ಕೆ ತಿಲಾಂಜಲಿ ಕೊಡಲಿಕ್ಕೆ ಸಿದ್ಧನಿರುವೆನು."

"ಒಮ್ಮನಸ್ಸಿನಿಂದ ಕೊಡುವಿರಾ?" ಎಂದು ಶಂಭುಸಿಂಗನು ನುಡಿದನು.

ಈ ಮಾತು ಕೇಳಿ ಪ್ರತಿನಿಧಿಗೆ ಆಶ್ಚರ್ಯವೆನಿಸಿತು. ಆಗ ಅವನು

ಮಹಾರಾಜನನ್ನು ಕುರಿತು:—“ಇವನಾರು?”

“ಇವನು ಧನಾಜಿ ಜಾಧವನ ಎರಡನೇ ಮಗನಾದ ಶಂಭುಸಿಂಗನು. ಪಶ್ಚಾತ್ತಾಪಪುನೀತವಾದ ಆತ್ಮವಿದು. ಕೊಲ್ಹಾಪುರದವರ ಪಕ್ಷಕ್ಕೆ ಸೇರಿದ ಇವನು ಅಲ್ಲಿ ಇರಲಿಕ್ಕೆ ಬೇಸರಗೊಂಡು ನಮ್ಮ ಕಡೆಗೆ ಬಂದಿರುವನು. ಇವನು ಅದ್ವಿತೀಯ ಗುಣಶಾಲಿಯಿರುವನೆಂದು ನಮ್ಮ ಮನವರಿಕೆಯಾದ್ದರಿಂದ ನಮ್ಮಲ್ಲಿರಿಸಿಕೊಂಡೆವು.”

“ನಾನು ನಿಮ್ಮ ಪರಿಚಯದವನೂ ಇರುವೆನು.” ಎಂದು ಶಂಭುಸಿಂಗನು ಪ್ರತಿನಿಧಿಗೆ ಹೇಳಿದನು.

“ಲಕ್ಷ್ಯದಲ್ಲಿ ಬರಲೊಲ್ಲದು.”

“ನಮ್ಮಂಥ ಕ್ಷುದ್ರರ ಪರಿಚಯವು ನಿಮಗೆ ಹೇಗಾದೀತು?”

“ಓಹೋ! ಈಗ ಗೊತ್ತಾಯಿತು. ನೀನು ಮಲ್ಹಾರಿ ಜಾಧವನಲ್ಲವೆ?”

“ಹಾ! ನೋಡಿರಿ; ಈಗ ಹೇಗೆ ಗುರುತಿಸಿದಿರಿ? ನನಗೆ ಕೊಟ್ಟ ವಚನ...”

“ನೀನು ಚಿಂತಿಸಬೇಡ. ಮಹಾರಾಜರು ದಂಡಯಾತ್ರೆಗೆ ನನ್ನನ್ನು ಕಳುಹಿಸಿದಾಗ ನಿನ್ನನ್ನು ಉಪಸೇನಾಪತಿಯನ್ನಾಗಿ ಮಾಡುವೆನು.” ಎಂದು ಶ್ರೀಪತಿರಾಯನು ನುಡಿದು:—“ಶಂಭುಸಿಂಗ ಜಾಧವನೇ ಮಲ್ಹಾರಿಯೆಂಬದು ನನಗೆ ಆಗ ಗೊತ್ತಾಗಿದ್ದಿಲ್ಲ.”

“ನನಗೂ ತಿಳಿದಿದ್ದಿಲ್ಲ. ಶಾಹೂರಾಜನಲ್ಲಿ ಕೆಲಸ ದೊರಕಿಸಿಕೊಳ್ಳ ಬೇಕೆಂಬ ಅಭಿಲಾಷೆಯಿಂದ ನನ್ನ ಬಳಿಗೆ ಬಂದು ಪತ್ರ ಕೇಳಿದನು. ನಾನು ಮಲ್ಹಾರಿ ಜಾಧವನೆಂಬ ಹೆಸರಿನಿಂದಲೇ ಪತ್ರಕೊಟ್ಟೆನು.” ಎಂದು ಬ್ರಹ್ಮೇಂದ್ರ ಸ್ವಾಮಿಗಳು ಹೇಳಿದರು.

“ಇವನು ತನ್ನ ಅಣ್ಣನಾದ ಚಂದ್ರಸೇನನಿಗೆ ಹೆದರಿ, ಹೆಸರು ಬೇರೆ ಮಾಡಿಕೊಂಡಿದ್ದನು.” ಎಂದು ಶಾಹೂಮಹಾರಾಜನು ಹೇಳಿದನು.

ಅನಂತರದಲ್ಲಿ ಬ್ರಹ್ಮೇಂದ್ರಸ್ವಾಮಿಗಳು:—“ಶಾಹೂರಾಜಾ! ಮುಂದಿನ ವಿಚಾರವೇನು? ನಾನು ನಿನ್ನ ರಾಜ್ಯದಲ್ಲಿ ವಾಸವಾಗಿರಬೇಕೋ, ಎಲ್ಲಿಗಾದರೂ ದೇಶಾಂತರಕ್ಕೆ ತೆರಳಬೇಕೋ? ಹೇಳು. ಸ್ವರಾಜ್ಯದಲ್ಲಿ ಸಹ ನಮಗೆ ಸೌಖ್ಯವು ದೊರೆಯದಾಯಿತು. ನಿನ್ನ ಹಗಲುವಾಡಿತನದ ಆಡಳಿತಕ್ಕೆ ನಾನು ಬೇಸರ ಗೊಂಡಿರುವೆನು” ಎಂದು ನುಡಿದು, ಪೇಶವೆ-ಪ್ರತಿನಿಧಿಗಳನ್ನು ಕುರಿತು:— “ನೀವಿಬ್ಬರೂ ಸ್ವರಾಜ್ಯದೊಳಗಿನ ದೊಡ್ಡ ರಾಯರು; ಹಿಂದುಪದ ಪಾತ ಶಾಹಿಯ ಆಧಾರಸ್ತಂಭರು; ಆದರ ಬಲಗೈ ಎಡಗೈಗಳು; ನನ್ನ ಪರಮ ಶಿಷ್ಯ ರಲ್ಲಿ ಗಣಿಸಲ್ಪಟ್ಟವರು; ದೊಡ್ಡ ರಾಜಕಾರಣ ಧುರಂಧರರು; ವೀರರು.

ಹೀಗಿದ್ದು ನಿರ್ಬಾಧಕವಾಗಿ ವಾಸವಾಗಿರಲಿಕ್ಕೆ ನನಗೆ ಸ್ವಲ್ಪವಾದರೂ ಸ್ಥಳವು ದೊರೆಯಬಾರದೆ? ಭಾರ್ಗವರಾಮನ ನೈವೇದ್ಯಕ್ಕೆ ಅನ್ನವೂ, ಪೂಜಗೆ ಹೂವು-ನೀರುಗಳೂ ದೊರೆಯದಾಗಬೇಕೆ? ಇಂತಹ ಅನ್ಯಾಯಗಳೂ ಅತ್ಯಾಚಾರಗಳೂ ನಡೆದಿದ್ದರೂ, ಅವುಗಳ ಪ್ರತೀಕಾರವು ನಿಮ್ಮಿಂದ ಆಗಬಾರದೆ? ನೀವು ರಾಜ್ಯಕರ್ತರೆಂಬ ಆಡಂಬರದಿಂದ ಮೆರೆಯುವಿರೇಕೆ? ಕೈಯಲ್ಲಿ ಹೋಳಿಗೆಯ ಮಣೆ-ಲಟ್ಟಣಿಗೆಗಳನ್ನು ಹಿಡಿದು ಒಲೆಯ ಮುಂದೆ ಕುಳಿತುಕೊಳ್ಳಿರಿ. ಆ ಮೇಲೆ ನಮಗೆ ಸ್ವಯಂ ನಿರ್ಣಯ ಮಾರ್ಗವು ತೋಚಿದರೆ ಮಾಡುವೆವು; ಇಲ್ಲದಿದ್ದರೆ ದೇಶತ್ಯಾಗ ಮಾಡಿ, ನಾಲ್ಕೂ ದಿಕ್ಕುಗಳಲ್ಲಿ ನಿಮ್ಮ ಹೆಸರಿನಿಂದ ಬಿಕ್ಕೆ ಬೇಡುವೆವು!''

ಸ್ವಾಮಿಗಳ ಸಂತಾಪಯುಕ್ತವಾದ ಮಾತು ಕೇಳಿ, ಶಾಹೂರಾಜ-ಪೇಶವೆ-ಪ್ರತಿನಿಧಿಗಳು ಬೆದರಿದರು ಅವರು ಮೇಲೆ ಎಷ್ಟು ಸಂತಾಪವುಳ್ಳವರಿರುವರೋ, ಹೊಟ್ಟೆಯಲ್ಲಿ ಅಷ್ಟು ಸಂತಾಪವನ್ನು ತುಂಬಿಕೊಂಡಿಲ್ಲವೆಂದು ಪೇಶವೆಗೂ ಮಹಾರಾಜನಿಗೂ ತಿಳಿದಿತ್ತು ಪ್ರತಿನಿಧಿಯನ್ನು ಎಳಗೆ ತರುವದಕ್ಕಾಗಿಯೇ ಅವರು ಹೀಗೆ ಸಂತಾಪೋದ್ಗಾರ ತೆಗೆಯತೊಡಗಿದ್ದರು.

''ಸ್ವಾಮೀ!' ಶಾಹೂರಾಜನು ತನ್ನ ಪೋತರದ ಸೆರಗನ್ನು ಪಸರಿಸಿ - "ಇಂದಿನ ವರೆಗಿನ ನಮ್ಮ ಅಪರಾಧಗಳನ್ನು ಕ್ಷಮಿಸಿ, ಮುಂದೆ ನಮ್ಮಿಂದ ದೇಶಸೇವೆಯನ್ನು ಮಾಡಿಸಿರಿ."

"ನೀವು ಸೆರಗೊಡ್ಡಿ ಬೇಡಿಕೊಳ್ಳಬೇಕೆಂದು ನಾವು ಇಚ್ಛಿಸುವದಿಲ್ಲ. ರಂಗಮಂದಿರದಲ್ಲಿ ವಿಲಾಸ ಭೋಗಿಸುತ್ತ ಇಡೀ ಆಯುಷ್ಯವನ್ನು ಕಳೆಯುವದು ನಿಮ್ಮಂತಹ ಕರ್ತವ್ಯಭಾರವುಳ್ಳ ಮನುಷ್ಯರಿಗೆ ಶೋಭಿಸುವದೆ? ನೀವು ಸರ್ವಸಂಗ ಪರಿತ್ಯಾಗಮಾಡಿ, ನಮ್ಮಂತೆ ಮೈಗೆ ಬೂದಿ ಬಡೆದುಕೊಳ್ಳಬೇಕೆಂಬ ಅಭಿಪ್ರಾಯವು ನಮ್ಮದಿಲ್ಲ. ನೀವು ವಿಲಾಸವಿಹಾರಕ್ಕೆ ವ್ಯಯಗೊಳಿಸುವ ವೇಳೆಯಲ್ಲಿ ಅಲ್ಪಮಟ್ಟಿಗಾದರೂ ದೇಶಕಾರ್ಯಕ್ಕಾಗಿ ವ್ಯಯಮಾಡಿದಿರೆಂದರೆ, ಯಾವ ಕೆಲಸಗಳಾಗಲಿಕ್ಕಿಲ್ಲ? ವಿಲಾಸ ವಿಹಾರಕ್ಕಾದರೂ ಪರಿಮಿತಿಯಿರುವದೋ ಇಲ್ಲವೋ? ಇಂಥದರಲ್ಲಿಯೂ ಒಡಕೇ ಒಡಕು!'' ಎಂದು ಬ್ರಹ್ಮೇಂದ್ರ ಸ್ವಾಮಿಗಳು ನುಡಿದರು.

''ಸ್ವಾಮಿಮಹಾರಾಜರೆ, ನಾವು ಇನ್ನು ಮೇಲೆ ಐಕ್ಯದಿಂದ ನಡೆಯುವೆವು." ಎಂದು ಶ್ರೀಪತಿರಾಯನು ಮನಃಪೂರ್ವಕವಾಗಿ ಹೇಳಿದನು.

''ಆನಂದವಾಯಿತು; ಪ್ರತಿನಿಧಿಗಳೆ, ನಿಮ್ಮ ಮಾತುಗಳನ್ನು ಕೇಳಿ ಅತ್ಯಾನಂದವಾಯಿತು.'' ಎಂದು ಸ್ವಾಮಿಗಳು ನುಡಿದು, ಪೇಶವೆ-ಪ್ರತಿನಿಧಿ

ಗಳ ಕೈಗಳನ್ನು ಹಿಡಿದು, ಪರಸ್ಪರರ ಕೈಗಳನ್ನು ಪರಸ್ಪರರ ಕೈಯಲ್ಲಿ ಕೊಟ್ಟು, "ನೀವು ಐಕ್ಯದಿಂದ ಸ್ವರಾಜ್ಯದ ಅಭ್ಯುದಯವನ್ನು ಚಿಂತಿಸಿರಿ. ನಿಮ್ಮ ಇಂದಿನ ಐಕ್ಯವು ಚಿರಸ್ಥಾಯಿಯಾಗಲೆಂದು ನಾನು ಪರಮಾತ್ಮನಲ್ಲಿ ಬೇಡುತ್ತೇನೆ.

"ಸ್ವಾಮಿಮಹಾರಾಜರೆ! ಮುಂದಿನ ಕಾರ್ಯದ ಸಲುವಾಗಿ ಹೇಗೆ ಮಾಡಬೇಕು? ಸದ್ಯಕ್ಕೆ ಚವ್ಹಾಣ ಹಾಗು ಸಂಭಾಜಿ ಇವರ ಪಾರುಪತ್ಯ ಮಾಡಲಿಕ್ಕೆಬೇಕಾಗಿದೆ." ಎಂದು ಶಾಹೂಮಹಾರಾಜನು ಕೇಳಿದನು.

"ಶ್ರೀಪತಿರಾಯರು ಅವರಿಗೆ ದಂಡನೆಗಳನ್ನು ವಿಧಿಸಲಿ ಅವರ ಕೈಯಲ್ಲಿ ಅವರ ಇಚ್ಛೆಯ ಮೇರೆಗೆ ಶಂಭುಸಿಂಗನನ್ನು ಕೊಡತಕ್ಕದ್ದು. ಪೇಶವೆಯವರು ಸದ್ಯಕ್ಕೆ ಉತ್ತರ ದಿಗ್ವಿಜಯವನ್ನು ನಿಲ್ಲಿಸಿ, ಪ್ರತಿನಿಧಿಗಳಿಗೆ ಸಹಕಾರಿಗಳಾಗಿರಲಿ. ಸಂಭಾಜಿರಾಜ ಹಾಗು ಉದಾಜಿ ಚವ್ಹಾಣ ಇವರೊಡನೆ ಇನ್ನಿಬ್ಬರ ಪಾರುಪತ್ಯವನ್ನು ಮಾಡಬೇಕಾಗಿದೆ ಬಹೇಬೋರ ಗಾಂವದಲ್ಲಿ ರಾಮದಾಸನೆಂಬ ಸಾಧುವು ಇರುವನು. ಅವನು ಪಿಶಾಚಿ ಸಾಧನೆ ಮಾಡಿಕೊಂಡು, ಬೇಕಾದಂಥ ಅನನ್ವಿತ ಕೃತ್ಯಗಳನ್ನು ಮಾಡತೊಡಗಿರುವನು. ಇನ್ನೊಬ್ಬ ಸಾಧುವು ನರಸಿಂಹಪುರದಲ್ಲಿರುವನು. ಅವನಾದರೂ ಇಂಥ ಕೃತ್ಯಗಳನ್ನು ಮಾಡುವವನೇ ಇರುವನೆಂದು ಕೇಳಿದ್ದೇವೆ. ಈ ಸಾಧುಗಳ ಪಾರುಪತ್ಯಗೊಳಿಸಲಿಕ್ಕೆ ಶಂಭುಸಿಂಗನನ್ನು ನಿಯಮಿಸಬೇಕು."

"ಮಹಾರಾಜರ ಆಜ್ಞೆಯ ಮೇರೆಗೆ ಎಲ್ಲ ಬಗೆಯ ವ್ಯವಸ್ಥೆ ಮಾಡುವೆನು" ಎಂದು ಶಾಹೂರಾಜನು ನುಡಿದು —"ಮಹಾರಾಜ! ನಿಮ್ಮ ಆಹ್ನಿಕ ತೀರಿಸಿರಿ; ಉಪಾಹಾರದ ವೇಳೆಯಾಯಿತು."

"ಓಹೋ! ಮಾತಿನ ಭರದಲ್ಲಿ ವೇಳೆಯೇ ಗೊತ್ತಾಗಲಿಲ್ಲ. ಇಂದು ಪೇಶವೇ ಪ್ರತಿನಿಧಿಗಳ ಐಕ್ಯದ ಆನಂದವನ್ನು ವ್ಯಕ್ತಗೊಳಿಸಲಿಕ್ಕೆ ಎಲ್ಲರ ಸಹಭೋಜನ ನಡೆಯತಕ್ಕದ್ದು"

ಸ್ವಾಮಿಗಳ ಇಚ್ಛೆ-ಆದೇಶಗಳ ಅನುಸಾರವಾಗಿ ಉಪಾಹಾರದ ಸಿದ್ಧತೆಯಾಯಿತು. ಸ್ವಾಮಿಗಳು ಕೃಷ್ಣಾನದಿಗೆ ಹೋಗಿ ಆಹ್ನಿಕ ತೀರಿಸಿಕೊಂಡು ಬಂದರು. ಅನಂತರದಲ್ಲಿ ಶಾಹೂಮಹಾರಾಜ, ಬ್ರಹ್ಮೇಂದ್ರಸ್ವಾಮಿ, ಪೇಶವೆ, ಪ್ರತಿನಿಧಿ, ಶಂಭುಸಿಂಗ ಮೊದಲಾದವರೆಲ್ಲರೂ ಒಂದೇ ಪಙ್ಕ್ತಿಯಲ್ಲಿ ಕುಳಿತುಕೊಂಡು ಉಪಾಹಾರ ತೀರಿಸಿದರು.

---

## ಜಲಸಮಾಧಿ.

ಬೈರಾಗಿಯು ಬಹಳೀ ಪ್ರಯಾಸದಿಂದ ನೌಕೆಯಲ್ಲಿ ಬಿದ್ದ ತೂತನ್ನು ಕಟ್ಟು ಮಾಡಿದನು. ಆದರೂ ಅಲ್ಲಿಂದ ನೀರು ಸಣ್ಣಾಗಿ ಬರುತ್ತಲೇ ಇತ್ತು. ಚದುರೆಯು ಬಂದ ನೀರನ್ನು ಹೊರಗೆ ಚಲ್ಲಹತ್ತಿದಳು. ಬೈರಾಗಿಯು ವೇಗ ದಿಂದ ನೌಕೆಯನ್ನು ಸಾಗಿಸಹತ್ತಿದನು. ನೀರು ಹೆಚ್ಚಾಗಿ ಬರತೊಡಗಿದರೆ ನೌಕೆಯೊಡನೆ ತಾವಿಬ್ಬರೂ ನದೀಪಾಲು ಆಗಬಹುದೆಂದು ಅವನು ಕೈ ಚಪಲ ಮಾಡತೊಡಗಿದ್ದನು. ಹುಟ್ಟು ಹಾಕುತ್ತ ಹಾಕುತ್ತ ಅವನು ಚದುರೆ ಯನ್ನು ಕುರಿತು:—"ಸಂಭಾಜಿರಾಜನು ಪ್ರಜಾರಕ್ಷಕನಲ್ಲ; ಪ್ರಜಾಭಕ್ಷಕನು ಅವನು ಧರ್ಮವಂತನಲ್ಲ; ಅಧರ್ಮದ ಬೀಡು! ರಾಜನಾದವನು ಇಂಥ ಕೃತ್ಯಗಳನ್ನು ಮಾಡಬಹುದೆ? ಅವನ ನೆರವು ದೊರೆಯದಿದ್ದರೆ ನಿನ್ನ ಪಾವಿತ್ರ್ಯ ವನ್ನು ನಾಶಮಾಡುವ ಎದೆಯಾವನದು? ಅವನ ತಪ್ಪಿಗಾಗಿ ಶಾಸನವನ್ನು ವಿಧಿಸಬೇಕೆಂದು ನಾನು ಸಂಕಲ್ಪ ಮಾಡಿಕೊಂಡಿರುವೆನು. ಉಳಿದ ಅಮುಖ್ಯ ತಪ್ಪುಗಾರರಲ್ಲಿ ನಿನ್ನ ತಂದೆಯೊಬ್ಬನು. ಅವನು ಜಿಜಾಬಾಯಿಯಿಂದ ಅನನ್ಯ ದಶೆಹೊಂದಿ ಮರಣ ಹೊಂದಿದನು. ಇನ್ನೊಬ್ಬ ತಪ್ಪುಗಾರನಾದ ತ್ರ್ಯಂಬಕ ಸುಂದರನು ದೇಶತ್ಯಾಗ ಮಾಡಿದ್ದಾನೆ. ಅವನ ಶೋಧ ಮಾಡಲಿಕ್ಕೇಬೇಕು. ಅವನು ನಿನ್ನ ಶೀಲದ ಬೆಲೆಯಲ್ಲಿ ಇನಾಮು ಪಡೆದವನು!''

''ನನ್ನ ತಂದೆಯು ಮರಣ ಹೊಂದಿದನೆ!'' ಚದುರೆಯು ಗದ್ಗದ ಕಂಠ ದಿಂದ ಕೇಳಿದಳು.

''ಹೌದು'' ಬೈರಾಗಿಯು ಉತ್ತರಕೊಟ್ಟನು.

''ಆ ಕ್ರೂರ ರಾಣಿಯು ನನ್ನ ತಂದೆಯ ಮೃತ್ಯುವಿಗೆ ಕಾರಣಳಾದಳು ನಾನು ಅವಳ ಈ ಅತ್ಯಾಚಾರದ ಬಗ್ಗೆ ಸೇಡು ತೀರಿಸಿಕೊಳ್ಳದೆ ಬಿಡಲಾರೆನು!''

"ನೋಡು, ಈಗ ಹೇಗೆ ಮಾತಾಡಿದೆ? ನಿನಗೆ ಪಶ್ಚಾತ್ತಾಪದಿಂದ ಆಯುಷ್ಯ ಕಳೆಯಲಿಕ್ಕೆ ಸಂಧಿಯನ್ನು ಕೊಟ್ಟು ನೋಡಬೇಕೆಂದು ಇಂದು ನಾನು ನಿನ್ನ ಕೊಲೆ ಮಾಡಲಿಕ್ಕೆ ಮನಸ್ಸು ಮಾಡಲಿಲ್ಲ.'' ಎಂದು ಬೈರಾ ಗಿಯು ನುಡಿದು:—''ಇನ್ನು ಮೇಲೆ ನೀನು ನನಗೆ ಅನುಕೂಲೆಯಾಗಿ ವರ್ತಿಸಲಿಕ್ಕೆ ಬೇಕು''

"ಅಂದರೆ?" ಬೈರಾಗಿಯ ಮಾತಿನ ಅರ್ಥವು ವಿಪರ್ಯಸ್ತ ತೋರಿದ್ದ ಕ್ಕಾಗಿ ಚದುರೆಯು ಸಾಶಂಕೆಯಿಂದ ಕೇಳಿದಳು.

''ಚದುರೆ, ನೀನು ವಿಕಲ್ಪಭಾವಿಸಬೇಡ. ಈ ದಿನ ಪ್ರೇಮಪಾಶದಿಂದ

ಮುಕ್ತಳಾದ ನಿನ್ನನ್ನು ಮತ್ತೆ ಪ್ರೇಮಪಂಕದಲ್ಲಿ ಕೆಡಹುವ ಮನಸ್ಸು ನನ್ನದಿಲ್ಲ. ನಿನ್ನ ಕುಲ ಶೀಲಗಳನ್ನು ನಷ್ಟಭ್ರಷ್ಟಗೊಳಿಸಿದ ಸಂಭಾಜಿರಾಜನ ಸೇಡು ತೀರಿಸಿಕೊಳ್ಳಲಿಕ್ಕೆ ನಾನು ಸಾಹಸ ಮಾಡುವವನಿರುವೆನೆಂದು ನಿನಗೆ ಹೇಳಲಿಲ್ಲವೆ? ಆ ಕಾರ್ಯದಲ್ಲಿ ನೀನು ನನಗೆ ನೆರವಾಗಲಿಕ್ಕೆ ಬೇಕು. ನಿನ್ನ ವೈರಿಯಾದ ಜಿಜಾಬಾಯಿಯನ್ನು ನಾಶಗೊಳಿಸುವ ಕಾರ್ಯದಲ್ಲಿ ನಾನು ನೆರವಾಗುವೆನು. ಪರಸ್ಪರರು ಸಹಕಾರದಿಂದ ನಡೆದು ಪರಸ್ಪರರ ಸಂಕೇತಗಳನ್ನು ನೆರವೇರಿಸಿಕೊಳ್ಳಬೇಕೆಂಬುದೇ ನನ್ನ ಮಾತಿನ ಭಾವವು.''

"ಅವಶ್ಯ, ಅತ್ಯವಶ್ಯ!" ಎಂದು ಚದುರೆಯು ನುಡಿದು:—"ನನ್ನ ಮಗನು ಎಲ್ಲಿರುವನೆಂಬದನ್ನು ಹೇಳಲಿಲ್ಲವಲ್ಲ?"

"ನೀನು ನಿನ್ನ ಮಗನನ್ನು ಬೇಗನೆ ಕಾಣುವೆ. ನಾವು ಈಗ ಅತ್ತ ಕಡೆಗೇ ಹೊರಟಿರುವೆವು. ಅಲ್ಲಿ ನಿನ್ನ ಮಗನ ಹೊರತು ಅಂತಃಕರಣದ ಇನ್ನೊಂದು ವ್ಯಕ್ತಿಯ ಭೆಟ್ಟಿಯಾಗುವದು."

"ಅದಾವುದು?''

''ನಿನ್ನ ಕುರುಡ ಅತ್ತೆಯು ಭೆಟ್ಟಿಯಾಗುವಳು.'' ಎಂದು ನುಡಿದು, ಬೈರಾಗಿಯು ಗಂಭೀರವಾಣಿಯಿಂದ:—''ಚದುರೆ! ನನ್ನ ಮಾತನ್ನು ಲಕ್ಷ್ಯಗೊಟ್ಟು ಕೇಳು. ನೀನು ನಿನ್ನ ಪರಿಚಯವನ್ನು ನಿನ್ನ ಅತ್ತೆಗೆ ಮಾಡಿಕೊಡಬಾರದು. ಅವಳು ನನ್ನನ್ನು ತನ್ನ ಮಗನಾದ ಕೃಷ್ಣಾಜಿಯೆಂದೇ ತಿಳಿದುಕೊಂಡಿರುವಳು. ಕೃಷ್ಣಾಜಿಯ ಕೊಲೆಯಾದ ಮೇಲೆ ಈ ದುಷ್ಟವಾರ್ತೆಯನ್ನು ಅವಳ ಕಿವಿಗೆ ಹಾಕಿದರೆ, ಆತ್ಮಘಾತಮಾಡಿಕೊಳ್ಳುವಳೆಂಬ ಭಯದಿಂದ ನಾನೇ ಅವಳ ಪಾಲಿಗೆ ಕೃಷ್ಣಾಜಿಯಾಗಬೇಕಾಯಿತು. ಕುರುಡಳೂ ಕಿವುಡಳೂ ಆದ ಅವಳು ನಾನು ಕೃಷ್ಣಾಜಿಯಲ್ಲವೆಂಬದನ್ನು ಗುರುತಿಸಲಿಕ್ಕೆ ಸಾಧ್ಯವಿಲ್ಲ. ನಾನು ಅವಳ ದೃಷ್ಟಿಯಿಂದ ಕೃಷ್ಣಾಜಿಯೇ ಆಗಿರುವೆನು; ಪಟವಾಜಿಯು ನನ್ನ ಔರಸ ಪುತ್ರನಾಗಿರುವನು. ಅವಳ ಈ ಭಾವನೆಗೆ ಪೆಟ್ಟು ತಗಲುವಂಥ ಯಾವ ವರ್ತನವೂ ನಿನ್ನಿಂದ ಘಟಿಸಲಾಗದು. ನೀನು ಅವಳನ್ನು ಭೆಟ್ಟಿಯಾದ ಮೇಲೆ ನೀನು ಯಾರೆಂಬ ಪ್ರಶ್ನೆಯು ಓಘದಿಂದ ಉತ್ಪನ್ನವಾಗುವದು. ಆಗ ನೀನೇನು ಉತ್ತರವೀಯುವೆ?"

''ನಾನು ಯಾರೆಂದು ಅವಳಿಗೆ ಹೇಳಬೇಕು?"

''ಎರಡನೇ ಲಗ್ನಮಾಡಿಕೊಳ್ಳಬೇಕೆಂದು ಅವಳು ನನಗೆ ದುಂಬಾಲ ಬಿದ್ದಿರುವಳು; ಆದ್ದರಿಂದ ಎರಡನೆಯ ಹೆಂಡತಿಯನ್ನು ತಂದಿರುವೆನೆಂದು ನಾನು ಅವಳಿಗೆ ಹೇಳುವೆನು. ಎರಡನೆಯ ಹೆಂಡತಿಗೆ ಚದುರೆಯೆಂದೇ ಹೆಸ

ರಿಟ್ಟಿರುವೆನೆಂದು ನಾನು ಹೇಳಿಬಿಟ್ಟರೆ, ನಿನ್ನ ಹೆಸರಿನ ವಿಷಯಕ್ಕಾದರೂ ಅವಳಲ್ಲಿ ಆಕ್ಷೇಪಣೆ ಹುಟ್ಟುವದಿಲ್ಲ. ಕೌಶಲ್ಯದಿಂದ ಹೀಗೆ ಭೂಮಿಕೆಯನ್ನು ನಿರ್ಮಿಸುವದು ನಿನಗೆ ಕಠಿಣವಾಗಲಿಕ್ಕಿಲ್ಲವಷ್ಟೆ?''

''ನೀವು ಇಷ್ಟೆಲ್ಲ ಉಪಾಯಗಳನ್ನು ಸೂಚಿಸುತ್ತಿರುವಿರಿ ಈ ಉಪಾಯ ಗಳೆಲ್ಲವು ಪ್ರಚಾರದಲ್ಲಿ ಬಂದ ಮೇಲೆ ನಾವಿಬ್ಬರು ದಂಪತಿಗಳಾದಂತಾಗುವೆವು. ಆ ಮೇಲೆ ನಿಮ್ಮ ಮನಸ್ಸು ಹೊಯ್ದಾಡಲಿಕ್ಕಿಲ್ಲವಷ್ಟೆ?''

''ನನ್ನ ಮೇಲೆ ಇಷ್ಟು ಅವಿಶ್ವಾಸತಾಳುವೆಯಾ? ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡುವಂತಹ ಅಧಮನು ನಾನಿರುವದಿಲ್ಲ. ಪರನಾರಿಯ ರನ್ನು ತಾಯಿ-ತಂಗಿಯರೆಂದು ನಾನು ಭಾವಿಸುತ್ತಿರುವೆನು. ನಾನು ಸಂಸಾರ ದಲ್ಲಿ ಮತ್ತೆ ತೊಡಗಬೇಕಾಗಿದ್ದರೆ, ಅನುರೂಪ ವಧುವನ್ನು ಹುಡುಕಿ ವಿವಾಹ ವಾಗುವದೇನೂ ನನಗೆ ಅಸಾಧ್ಯವಿಲ್ಲ.''

ಬೈರಾಗಿಯ ಮಾತಿನ ಬಗ್ಗೆ ಚದುರೆಯು ನಂಬಿಗೆಯುಳ್ಳವಳಾದಳು. ಅವಳು:—''ನಾನು ನಿಮ್ಮ ಇಚ್ಛೆಯಂತೆ ವರ್ತಿಸುವೆನು.'' ಎಂದು ನುಡಿದು: ''ನಾವು ಈಗ ಎಲ್ಲಿಗೆ ಹೋಗಬೇಕಾಗುವದು?''

''ನರಸಿಂಹಪುರಕ್ಕೆ.''

''ಹಾಗಾದರೆ ನರಸಿಂಹಪುರವು ಸಮೀಪವೇ ಬಂತೆಂದು ತೋರುವದು''

''ಹೌದು.'' ಎಂದು ಬೈರಾಗಿಯು ನುಡಿದು. ''ನಿನಗೆ ಇಲ್ಲಿಯ ಗೊತ್ತು ವಳಿಯಿದ್ದಂತೆ ತೋರುವದಲ್ಲ?''

''ಗೊತ್ತಿರದೇನು? ಕರ್ನಾಡದಿಂದ ನರಸಿಂಹಪುರವೇನೂ ಅಷ್ಟು ದೂರದ ದಾರಿಯೆ?''ಎಂದು ಚದುರೆಯು ನುಡಿದು. ನದಿಯ ಮೇಲ್ಗಡೆಗೆ ನೋಡಿ —''ಅಲ್ಲಿ ನೋಡಿರಿ! ಕೃಷ್ಣೆಗೆ ಮಹಾಪ್ರವಾಹವು ಬರುತ್ತಲಿದೆ. ಆನೆಯಂಥ ತೆರೆಗಳು ಹೇಗೆ ಬರುತ್ತಿರುವವು ನೋಡಿದಿರಾ!''

''ಗಾಬರಿಗೊಳ್ಳಬೇಡ. ನಾನಿದ್ದೇನೆ.'' ಎಂದು ಬೈರಾಗಿಯು ನುಡಿದು, ನೌಕೆಯನ್ನು ವೇಗದಿಂದ ಸಾಗಿಸಹತ್ತಿದನು.

ಮಹಾ ಪ್ರವಾಹದಲ್ಲಿ ಸಹ ನೌಕೆಯನ್ನು ಹೇಗೆ ನಡೆಯಿಸಬೇಕೆಂಬ ದನ್ನು ಬೈರಾಗಿಯು ಅರಿತಿದ್ದನು. ಎರಡೂ ದಂಡೆಗಳು ಮಹಾ ಪ್ರವಾಹ ದಿಂದ ಕೊರೆದು ಹೋದುದರಿಂದ ನೌಕೆಯನ್ನು ದಂಡೆಯ ಕಡೆಗೆ ಒಯ್ಯು ವದು ಸಾಧ್ಯವಿದ್ದಿಲ್ಲ. ಆದರೂ ಆತನು ನರಸಿಂಹಪುರದ ವರೆಗೆ ನೌಕೆ ಯನ್ನು ಒಯ್ಯಬೇಕಾಗಿತ್ತು. ಅವನ ನೌಕೆಯು ವೇಗದಿಂದ ನಡೆದಿರುವಾಗ ಹಿಂದೆ ಒಂದು ದೊಡ್ಡ ಮರವು ತೇಲುತ್ತ ನೌಕೆಯ ಕಡೆಗೆ ಬರಹತ್ತಿತು.

ಅದನ್ನು ನೋಡಿ ಬೈರಾಗಿಯು—"ಚದುರೆ! ಅಲ್ಲಿ ನೋಡು, ವೃಕ್ಷವು ಹೇಗೆ ತೇಲಿ ಬರುತ್ತಿದೆ! ಅದು ನಮ್ಮ ನೌಕೆಯನ್ನು ಬೇಗನೆ ತಲುಪಿ, ಬುಡ ಮೇಲು ಮಾಡದೆ ಬಿಡದು. ಮುಂದೆ ಹೇಗೆ ಮಾಡಬೇಕು?"

"ಅಷ್ಟೇಕೆ ಹೆದರುವಿರಿ? ನಿಮಗೆ ಈಸಲಿಕ್ಕೆ ಬರುವದಷ್ಟೆ?"

"ಓಹೋ! ಬಾರವೇನು?"

"ನಾನಾದರೂ ಈಸುವೆನು. ನೌಕೆಯಿಂದ ಪೈಲತೀರವನ್ನು ನಾವು ಮುಟ್ಟಲಾರೆವು. ನಾವು ಪ್ರವಾಹದಲ್ಲಿ ಹಾರಿ ಈಸುತ್ತ ಪರತೀರವನ್ನು ತಲಪೋಣ"

"ಪ್ರವಾಹದಲ್ಲಿ ಹಾರಿ ಪಾರಾಗುವದಕ್ಕಿಂತ ಮುಂಚಿತವಾಗಿಯೇ ಮರವು ನಮ್ಮ ಮೇಲೆ ತೇಲಿಬರುವ ಚಿಹ್ನವಿದೆ!"

ಎಂದು ಬೈರಾಗಿಯು ನುಡಿಯುವಷ್ಟರಲ್ಲಿ ಆ ಮಹಾ ವೃಕ್ಷವು ಸಮೀಪದಲ್ಲಿ ಬಂತು ಅವರು ನೌಕೆಯಿಂದ ಹಾರುವಷ್ಟರಲ್ಲಿ ಅದು ನೌಕೆಯನ್ನು ಹೊರಳಿಸಿತು ಚದುರೆಯೂ ಬೈರಾಗಿಯೂ ನದಿಯಲ್ಲಿ ಮುಳುಗಿದರು. ಮೇಲೆ ಮಹಾವೃಕ್ಷವು ತೇಲುತ್ತ ನಡೆಯಿತು. ಮುಳುಗಿದ ಬೈರಾಗಿಯೂ ಚದುರೆಯೂ ನೌಕೆಯೂ ಮುಂದೆ ಆ ಸ್ಥಳದಲ್ಲಿ ಕಾಣಲಿಲ್ಲ! ಅವರಿಬ್ಬರೂ ಕೃಷ್ಣೆಯ ಮಹೋದರದಲ್ಲಿ ಅಡಗಿ ಹೋಗಿರಬಹುದೇನು?"



# ದೌರ್ಜನ್ಯ

"ಸಟವಾಜಿ!"

"ಯಾಕಮ್ಮಾ?"

"ಸಟವಾಜೀ! ಸಟವಾಜಿ! ಎಲ್ಲಿರುವೆಯೊ?"

"ಇಲ್ಲೇ ಇರುವೆನವ್ಮಾ. ಯಾಕೆ?"

"ನದಿಯಲ್ಲಿ ನೌಕೆಯು ಬರುತ್ತಿರುವದೆ?"

"ಇಲ್ಲವ್ಮಾ!"

"ಏನಂದೆ, ಕೃಷ್ಣಾಜಿಯು ಬಂದನೆ? ನಿನ್ನ ತಂದೆಯು ಬಂದನೆ?"

"ಇಲ್ಲವವ್ಮಾ."

ಕಾವೇರಿವ್ಮಾನು ನಿಟ್ಟುಸಿರ್ಗರೆದಳು. ಮಗನು ಇನ್ನೂ ಏಕೆ ಬಂದಿರಲಿಕ್ಕಿಲ್ಲ? ಕೃಷ್ಣಾನದಿಗೆ ಮಹಾಪ್ರವಾಹವು ಬರತೊಡಗಿದೆ. ಅದರಲ್ಲಿ ಅವನ ನೌಕೆಯು ಮುಳುಗಿ ನದಿಯ ತಳವನ್ನು ಕಂಡಿರಬಹುದೆ? ಮೊದಲಾದ ವಿಚಾರಗಳು ಅವಳ ತಲೆಯಲ್ಲಿ ಬಂದವು. ಆಗ ಅವಳು ವೊಮ್ಮಗನನ್ನು ಕುರಿತು:—"ಸಟವಾಜಿ, ಇಲ್ಲಿ ಯಾವ ಬೈರಾಗಿಗಳೂ ಇಲ್ಲವೆ?" ಎಂದು ಕೇಳಿದಳು.

"ಇಲ್ಲ, ಇಲ್ಲಿ ಯಾರೂ ಇಲ್ಲ."

ಮುದುಕೆಗೆ ಅವನ ಮಾತು ಕೇಳದ್ದರಿಂದ:—"ಹೋಗಪ್ಪಾ, ಗೋರಖ ಬೈರಾಗಿಯನ್ನು ಕಂಡು, ದೊಡ್ಡ ಬೈರಾಗಿಯು ಇನ್ನೂ ಬರಲಿಲ್ಲವೆಂದು ತಿಳಿಸು."

"ಇಲ್ಲಿ ಯಾರೂ ಇಲ್ಲ." ಎಂದು ಸಟವಾಜಿಯು ಗಟ್ಟಿಯಾಗಿ ಕೂಗಿ ಹೇಳಿದನು.

ಮುದುಕೆಯು ನಿರಾಶೆಗೊಡು, ತಲೆಗೆ ಕೈಹಚ್ಚಿ ಕುಳಿತಳು. ಆಗ ಸಟವಾಜಿಯು:—"ಅವ್ಮಾ! ನೌಕೆಯು ಬಂತು. ಅಪ್ಪನು ಬಂದನೆಂಬಂತೆ ತೋರುತ್ತದೆ."

ಮುದುಕೆಯು ಆನಂದಗೊಂಡು ಕುಳಿತಸ್ಥಳದಿಂದ ಎದ್ದು ನಿಂತು:—"ಕೃಷ್ಣಾ! ಏ ಕೃಷ್ಣಾ! ಬಂದೆಯೇನಪ್ಪಾ?"

ನೌಕೆಯು ದಂಡೆಗೆ ಬಂತು. ಕೂಡಲೆ ಅದರೊಳಗಿದ್ದ ಐದಾರುಜನ ಶಸ್ತ್ರ ಧಾರಿಗಳು ಕೆಳಗಿಳಿದು, ಮುದುಕೆಯು ಕುಳಿತ ಶ್ರೀನರಸಿಂಹ ದೇವಸ್ಥಾನದ ಕಡೆಗೆ ಬರತೊಡಗಿದರು. ಅವರನ್ನು ನೋಡಿ ಸಟವಾಜಿಯು:—"ಅವ್ಮಾ

ಅದು ನಮ್ಮ ನೌಕೆಯಲ್ಲ. ಅಪ್ಪನೂ ಬರಲಿಲ್ಲ. ಯಾರೋ ಕೈಯಲ್ಲಿ ಕತ್ತೀ ಹಿಡಿದುಕೊಂಡು ಬರುತ್ತಿರುವರು.'' ಎಂದು ಹೇಳಿದನು.

ಮುದುಕೆಯು ಭಯ-ನೈರಾಶ್ಯಗಳಿಂದ ನಿಟ್ಟುಸಿರ್ಗರೆದಳು ಕೂಡಲೆ ಅವಳು ಭಯಕಂಪಿತ ಧ್ವನಿಯಿಂದ:—''ಗೋರಖ! ಮಲ್ಲಾರಿ! ದೇವಗಿರಿ!'' ಎಂದು ತನ್ನ ಪರಿಚಯದ ಬೈರಾಗಿಗಳನ್ನು ಕೂಗಿದಳು. ಅವಳ ಕೂಗಿಗೆ ಉತ್ತರವೇ ಬರಲಿಲ್ಲ.

ಚದುರೆಯನ್ನು ನೌಕೆಯಲ್ಲಿ ಕರೆತಂದ ಬೈರಾಗಿಯು ಅವಳ ಮುಂದೆ ಯಾರನ್ನು ತನ್ನ ತಾಯಿಯೆಂದು ಹೇಳಿದ್ದನೊ ಅವಳೇ ಈ ಮುದುಕೆಯು. ಅವಳ ಹೆಸರು ಕಾವೇರಮ್ಮನು ಕಂದಾಜಿ ಜಗದಳೆಯ ಹೆಂಡತಿಯು. ಅವಳು ಕೆಲವು ದಿನಗಳಿಂದ ಬೈರಾಗಿಯೊಡನೆ ನರಸಿಂಹಪುರದ ಶ್ರೀ ನರ ಸಿಂಹನ ದೇವಾಲಯದಲ್ಲಿ ವಾಸವಾಗಿದ್ದಳು ಬೈರಾಗಿಯು ಚದುರೆಯ ಮುಂದೆ ತಾನು ಕೃಷ್ಣಾಜಿಯ ಮಿತ್ರನೆಂದು ಹೇಳಿದ್ದರೂ, ಮುದುಕೆಗೆ ಮಾತ್ರ ಅವನು ಹೊಟ್ಟೆಯ ಮಗನಾದ ಕೃಷ್ಣಾಜಿಯೇ ಆಗಿದ್ದನು ಕೃಷ್ಣಾಜಿಯು ಮುಪ್ಪಿನ ತಾಯಿಯಾದ ಕಾವೇರಮ್ಮನನ್ನೂ ಮಗನಾದ ಸಟವಾಜಿಯನ್ನೂ ನರಸಿಂಹಪುರದ ದೇವಾಲಯದಲ್ಲಿರಿಸಿ, ಮೇಲಿಂದ ಮೇಲೆ ಪರಸ್ಥಳಗಳಿಗೆ ಹೋಗಿಬರುತ್ತಿದ್ದನು. ಅವನು ಹೀಗೆ ತಿರುಗುತ್ತಿರುವ ಕಾರಣವು ಕಾವೇ ರಮ್ಮನಿಗೆ ಗೊತ್ತಿದ್ದಿಲ್ಲ. ನದಿಗೆ ಮಹಾಪ್ರವಾಹವು ಬರುವ ಚಿಹ್ನವಿದ್ದುದ ರಿಂದ ಅವಳು ಮಗನಿಗೆ ನದೀ ಪ್ರವಾಸಕ್ಕೆ ಹೋಗಬೇಡವೆಂದು ಹೇಳಿದ್ದಳು; ಆದರೆ ಆ ಬೈರಾಗಿಗೆ ಪ್ರವಾಸಕ್ಕೆ ಹೋಗದೆ ಇರುವದು ಅಪರಿಹಾರ್ಯ ವಾಗಿತ್ತು. ಅವನು ತಾಯಿಯ ಮಾತು ಲೆಕ್ಕಿಸದೆ ಹೊರಟು ಹೋಗಿದ್ದನು. ಎಂದೂ ಮಾತು ಮೀರದ ಮಗನು ಇಂದು ತನ್ನ ಮಾತನ್ನು ಧಿಃಕರಿಸಿದ್ದ ಕ್ಕಾಗಿ ಅವಳು ಖೇದಬಡತೊಡಗಿದ್ದಳು. ತಾಯಿಯ ಆಜ್ಞಾಭಂಗಪಾತಕವು ಅವನಿಗೇನಾದರೂ ಕೇಡನ್ನುಂಟುಮಾಡಿರಬಹದೆ? ಪ್ರವಾಸಕ್ಕೆ ಹೊರಟಾಗ ಬೇಡವೆಂದು ಹೇಳುವ ದುರ್ಬುದ್ಧಿಯು ತನ್ನಲ್ಲೇಕೆ ಹುಟ್ಟಿರಬಹುದು? ಮೊದಲಾದ ಆಲೋಚನೆಗಳಿಂದ ಮುದುಕೆಯು ಹಣ್ಣಾಗತೊಡಗಿದಳು. ಇಂಥ ಕ್ಲೇಶದ ಸಮಯದಲ್ಲಿ ಶಸ್ತ್ರಧಾರಿಗಳ ಆಗಮನದ ಸುದ್ದಿಯು ಅವ ಳನ್ನು ಮತ್ತಿಷ್ಟು ಕ್ಲೇಶಕ್ಕೊಳಪಡಿಸಿತು.

ನೌಕೆಯಿಂದಿಳಿದ ಜನರು ನರಸಿಂಹನ ದೇವಾಲಯದ ಕಡೆಗೆ ಬರ ತೊಡಗಿದರು. ಅವರನ್ನು ನೋಡಿ ಸಟವಾಜಿಯು ಗಾಬರಿಗೊಂಡು:— ''ಅಮ್ಮಾ, ಕೈಯಲ್ಲಿ ಶಸ್ತ್ರಗಳನ್ನು ಹಿಡಕೊಂಡು ಯಾರೋ ಇತ್ತಕಡೆ

ಬರುತ್ತಿರುವರು'' ಎಂದು ಕೂಗಿ ತನ್ನ ಅಮ್ಮನ ಹಿಂದೆ ಅವೆತುಕೊಂಡು ಕುಳಿತನು.

''ಚಾಂಡಾಲರೆ! ನಿಮಗೆ ನನ್ನ ಕೃಷ್ಣಾಜಿಯು ಏನು ಮಾಡಿರುವನೆಂದು ಅವನ ಸುತ್ತು ಕೈತೊಳಕೊಂಡು ಬೆನ್ನು ಹತ್ತಿರುವಿರಿ?'' ಎಂದು ಕಾವೇರಮ್ಮನು ಆ ಶಸ್ತ್ರಧಾರೀ ಜನರಿಗೆ ನುಡಿದು, ಸಟವಾಜಿಯನ್ನು ಕುರಿತು:— "ಅಪ್ಪಾ, ನಡೆ; ನಾವು ದೇವಾಲಯದೊಳಗೆ ಹೋಗೋಣ" ಎಂದು ಮೊಮ್ಮಗನನ್ನು ಕರಕೊಂಡು ಅಲ್ಲಿಂದ ನಡೆದಳು.

ಅಷ್ಟರಲ್ಲಿ ನೌಕೆಯಿಂದ ಬಂದ ಜನರೊಳಗಿನವನೊಬ್ಬನು ಕಾವೇರಮ್ಮನನ್ನು ಕುರಿತು—''ಏ ಮುದುಕಿ! ಆ ಹುಡುಗನನ್ನು ಕರೆದುಕೊಂಡು ಓಡಿದರೆ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ! ನಿನಗೆ ಜೀವವು ಬೇಕಾಗಿದ್ದರ ಹುಡುಗನನ್ನು ನಮ್ಮ ಕಡೆಗೆ ಒಪ್ಪಿಸು!''

ಆ ಜನರಿಗೆ ಕಾವೇರಮ್ಮನು ಕಿವುಡೆಯೂ ಕುರುಡೆಯೂ ಇರುವಳೆಂಬದು ಹೇಗೆ ಗೊತ್ತಾಗಬೇಕು? ಅವರು ತಾವು ಮಾತಾಡುವಂತೆ ಆಡಿದರು. ಆ ಮುದುಕಿಗೆ ಅವರ ಧ್ವನಿಯು ಕೇಳಿದರೂ, ಮಾತುಗಳ ಅರ್ಥವಾಗದ್ದರಿಂದ ಅವಳು ರಭಸದಿಂದ ದೇವಾಲಯವನ್ನು ಪ್ರವೇಶಿಸಬೇಕೆಂದು ಹೊರಟಿದ್ದಳು. ಕೂಡಲೆ ಆ ಜನರೊಳಗಿನವನೊಬ್ಬನು ತನ್ನ ಜನರಿಗೆ:– "ಹೂಂ! ಏನು ನೋಡುತ್ತೀರಿ? ಆ ಹುಡುಗನನ್ನು ಎಳಕೊಂಡು ಬರ್ರಿ'' ಎಂದು ಆಜ್ಞಾಪಿಸಿದನು.

ಕೂಡಲೆ ಅವರು ಆ ಮುದುಕಿಯ ಬಳಿಗೆ ಓಡಿಹೋಗಿ, ಸಟವಾಜಿಯನ್ನು ಎಳೆಯ ತೊಡಗಿದರು. ಕಾವೇರಮ್ಮನು ಪ್ರಳಾಪಿಸುತ್ತ ಹುಡುಗನನ್ನು ಗಟ್ಟಿಯಾಗಿ ಹಿಡಿದಿದ್ದಳು. ಹುಡುಗನ ಆಕ್ರೋಶವನ್ನಂತೂ ಕೇಳಲಾಸಲ್ಲ! ಕಡೆಗೆ ಆ ಜನರು ಸಟವಾಜಿಯನ್ನು ಎಳಕೊಂಡು ನದಿಯ ಕಡೆಗೆ ತೆರಳಿದರು. ಮುದುಕಿಯು ಎಡವುತ್ತ, ಮುಗ್ಗುತ್ತ, ಆ ಜನರನ್ನು ಬಾಯಿಗೆ ಬಂದಂತೆ ಬೈಯುತ್ತ ಬೆನ್ನುಹತ್ತಿದಳು. ಆ ಜನರೊಳಗಿನ ಮುಖ್ಯಸ್ಥನು ಪ್ರಳಾಪಿಸುತ್ತ ಬೆನ್ನು ಹತ್ತಿರುವ ಆ ಮುದುಕಿಯನ್ನು ಕುರಿತು:— "ನೀನು ಸುಮ್ಮನೆ ಹೋಗುವಿಯೊ? ಕೊಂದು ಹಾಕಲೊ?'' ಎಂದು ಗರ್ಜಿಸಿದನು.

ಆ ಮುದುಕಿಗೆ ನಾಯಕನ ಗರ್ಜನೆಯು ಚನ್ನಾಗಿ ಕೇಳಲಿಲ್ಲ. ಏನೋ ಒದರಾಡುವನೆಂದು ಅವಳು ತಿಳಿದು:—''ನನ್ನ ಸಟವಾಜಿಯನ್ನು ಬಿಟ್ಟು ಹೋಗಿರೋ! ಅವನನ್ನು ನೀವು ಯಾಕೆ ಒಯ್ಯುತ್ತೀರಿ?''

ಟ

"ನಮಗೆ ನಿನ್ನ ಸಟವಾಜಿಯು ಬೇಕಾಗಿದ್ದಾನೆ. ಬೇಕಾಗದಿದ್ದರೆ ಯಾಕೆ ಒಯ್ಯೋಣ?"

"ಬಿಟ್ಟು ಹೋಗುವದಿಲ್ಲವೆ? ಹಾಗಾದರೆ ನಮ್ಮ ಕೃಷ್ಣಾಜಿಯು ಬರಲಿ. ನಿಮ್ಮ ವಂಶವನ್ನೇ ನಿರ್ಮೂಲ ಮಾಡುವನು. ಅವನು ಬರುವವರೆಗೆ ನಿಮ್ಮನ್ನು ನಾನು ಮುಂದೆ ಬಿಡುವದಿಲ್ಲ." ಎಂದು ನುಡಿದು ಅವಳು ನಾಯಕನ ಮುಂದೆ ಅಡ್ಡಾಗಿ ನಿಂತಳು. ನಾಯಕನು ಅಡ್ಡಸರಿದು ಮುಂದೆ ಸಾಗಿದನು. "ಅಯ್ಯೋ! ಅಮ್ಮಾ, ನನ್ನನ್ನು ಇವರು ಒಯ್ಯುವರು." ಎಂದು ಸಟವಾಜಿಯು ರೋದಿಸತೊಡಗಿದ್ದನು. ಕಾವೇರಮ್ಮನಿಗೆ ಈ ರಾಕ್ಷಸೀ ಕೃತ್ಯವು ಅಸಹನೀಯವಾಯಿತು. ಅವಳು ಸಂತಾಪದಿಂದ ಒಂದು ಕಲ್ಲು ತೆಗೆದುಕೊಂಡು ಎಸೆದಳು. ಅದು ಒಬ್ಬ ಸೇವಕನಿಗೆ ಬಡೆಯಿತು. ಅವನು ತನ್ನ ಕೈಯೊಳಗಿನ ಈಟಿಯಿಂದ ಮುದುಕಿಯ ಕಣ್ಣಿಗೆ ಚುಚ್ಚಿದನು. ಕೂಡಲೆ ಅವಳು ನೆಲಕ್ಕೆ ಬಿದ್ದಳು. ಅವಳ ಕಣ್ಣಲ್ಲಿ ರಕ್ತವು ಸುರಿಯತೊಡಗಿತು. ಅವಳು ಆ ಆಗಂತುಕ ಜನರನ್ನು ಬಾಯಿಗೆ ಬಂದ ಹಾಗೆ ಬೈಯುತ್ತ ಮತ್ತೊಂದು ಕಲ್ಲು ತೆಗೆದುಕೊಂಡು ಎಸೆದಳು. ಅದು ನಾಯಕನ ಹಣೆಗೆ ಬಲವಾಗಿ ಬಡೆಯಿತು. ಕಲ್ಲಿನ ಹೊಡತದಿಂದ ಸಂತಪ್ತನಾದ ನಾಯಕನು ಅವಳ ಬಳಿಗೆ ಬಂದು, ತನ್ನ ಖಡ್ಗದಿಂದ ಅವಳ ಕೊರಳಿಗೆ ಹೊಡೆದನು. ಹಣ್ಣಾದ ಎಲೆ, ಒಂದೇ ಹೊಡತಕ್ಕೆ ಕಳಚಿ ಬಿತ್ತು! ರುಂಡವು ಮುಂಡದಿಂದ ಬೇರೆಯಾದ ಕೂಡಲೆ, ರಕ್ತವು ಕಾರಂಜಿಯಂತೆ ಪುಟಿದು ಕೆಳಗಿನ ಭೂಮಿಯೆಲ್ಲ ರಕ್ತಮಯವಾಯಿತು. ಈ ಭೀಷಣ ದೃಶ್ಯವು ಸಟವಾಜಿಯ ಕಣ್ಣಿಗೆ ಬಿತ್ತು. ಆಗ ಅವನು—"ಅಯ್ಯೋ! ಅಯ್ಯೋ! ನನ್ನ ಅಮ್ಮನನ್ನು ಕೊಂದಿರಾ!" ಎಂದು ಆಕ್ರಂದನ ಮಾಡತೊಡಗಿದನು ಸೇವಕರೂ ಅವರ ನಾಯಕನೂ ತಮ್ಮ ಕೆಲಸವಾಯಿತೆಂಬ ಆನಂದದಿಂದ ನೌಕೆಯನ್ನೇರಿದರು. ನೌಕೆಯು ನದಿಯಲ್ಲಿ ಸಾಗಿತು. ಆಗ ನಾಯಕನು:—"ನಮ್ಮ ಕಾರ್ಯವು ಇಷ್ಟು ನಿರ್ವಿಘ್ನವಾಗಿ ಕೊನೆಗಂಡೀತೆಂದು ನಾನು ತಿಳಿದಿದ್ದಿಲ್ಲ."

"ಕಾರ್ಯವೇನೋ ಸಾಧಿಸಿತು; ಆದರೆ ಅವನನ್ನು ಜತನ ಮಾಡಿದ ಆ ರಜಪುತ ದಂಪತಿಗಳು ಕೈವಶವಾಗಿದ್ದರೆ ನೆಟ್ಟಗಾಗುತ್ತಿತ್ತು" ಎಂದು ಸೇವಕರಲ್ಲೊಬ್ಬನು ನುಡಿದನು.

"ನಾವು ಅವರನ್ನು ತೆಗೆದುಕೊಂಡು ಮಾಡುವದೇನು? ಅವರಿಬ್ಬರೂ ಎಲ್ಲಿಯಾದರೂ ತಿರಿಕೆ ಬೇಡುತ್ತ ತಿರುಗುತ್ತಿರಬಹುದು. ನಮ್ಮ ಮುಖ್ಯ ಗುರಿಯು ಈ ಹುಡುಗನ ಮೇಲೆಯೇ ಇತ್ತು. ಉಳಿದವರಿಂದ ನಮಗೆ

ಪ್ರಯೋಜನವೇನು?''

ನೌಕೆಯು ನರಸಿಂಹಪುರದಿಂದ ಬಹೇಬೋರಗಾಂವದ ಕಡೆಗೆ ಸಾಗಿತ್ತು. ಮಧ್ಯಮಾರ್ಗಕ್ಕೆ ಬರುವಷ್ಟರಲ್ಲಿ ನದಿಯ ದಂಡೆಯ ಮೇಲೆ ಯಾರೋ ಹೋಗುತ್ತಿರುವದು ನೌಕೆಯೊಳಗಿನವರಿಗೆ ಕಂಡಿತು. ಆಗ ನಾಯಕನು ತನ್ನ ಜನರನ್ನು ಕುರಿತು.—''ದಂಡೆಯ ಮೇಲೆ ಯಾವನೊ ಒಬ್ಬನು ಹೊಗುವಂತೆ ತೋರುವದು ಈ ವೇಳೆಯಲ್ಲಿ ನರಸಿಂಹಪುರದ ಕಡೆಗೆ ಹೋ-ಗುವ ವ್ಯಕ್ತಿಯು ಬಹಳ ಮಾಡಿ ಆ ರಜಪುತನೇ ಇರಬಹುದು.''

''ಮುದುಕೆಯು ತನ್ನ ಮಗನ ದಾರೀನೋಡಹತ್ತಿದ್ದಳು. ಅವಳು ಕೂಗುತ್ತಿದ್ದ ಕೃಷ್ಣಾಜಿಯೆಂಬ ಮಗನು ಇವನೇ ಆಗಿರಬಹುದೆಂದು ನನಗೂ ಸಂಶಯವುಂಟಾಗುವದು.'' ಎಂದು ಸೇವಕನೊಬ್ಬನು ಹೇಳಿದನು.

"ಇದ್ದರೂ ಇರಬಹುದು. ಅವನು ರಜಪುತನೇ ಆಗಿದ್ದರೆ ನಮ್ಮನ್ನು ಮಾಡುವದೇನು? ಅವನು ನರಸಿಂಹನ ದೇವಾಲಯಕ್ಕೆ ಹೋದನೆಂದರೆ, ಅಲ್ಲಿಯ ಸ್ಥಿತಿಯನ್ನು ನೋಡಿ ಹಣೆಹಣೆ ಬಡೆದುಕೊಳ್ಳುತ್ತ ಕೂಡ್ರುವನು." ಎಂದು ಮತ್ತೊಬ್ಬ ಸೇವಕನು ನುಡಿದನು.

''ಅದೆಲ್ಲ ನಿಜವು. ಆದರೂ ನಾವು ಆ ರಜಪುತನ ವಿಷಯವಾಗಿ ಜಾಗ್ರತೆಯಿಂದಿರಬೇಕು. ಅವನಿಗೆ ಅಂತರಂಗದಲ್ಲಿ ತಾರಾಬಾಯಿಯ ಹಾಗು ಭಗವಂತರಾಯ ಅಮಾತ್ಯನ ಸಹಾಯವಿದೆ. ಅವನು ನಾವು ತಿಳಿದುಕೊಂಡಷ್ಟು ದುರ್ಬಲನಿರುವದಿಲ್ಲ ರಾಜಪುತ್ರನು ನಮ್ಮ ಕೈಯಲ್ಲಿ ಸಿಲುಕಿದ ಸಂಗತಿಯು ಇವನ ಮುಖಾಂತರವಾಗಿ ತಾರಾಬಾಯಿಗೆ ತಿಳಿಯಿತೆಂದರೆ ಅವಳು ನಮ್ಮ ನಾಶಕ್ಕಾಗಿ ಪ್ರಯತ್ನ ಮಾಡದೆ ಬಿಡುವದಿಲ್ಲ ಆದ್ದರಿಂದ ನಾವು ಇವನ ಪಾರುಪತ್ಯಗೊಳಿಸಲಿಕ್ಕೆಬೇಕು ಅಂದರೇ ನಮ್ಮ ಕುರಸ್ಥಾನವು ಗುಪ್ತವಾಗಿ ಉಳಿಯುವದು.''

''ಈಗ ಹೇಗೆ ಮಾಡಬೇಕು?'' ಎಂದು ಒಬ್ಬ ಸೇವಕನು ಕೇಳಿದನು.

''ನಾಲ್ಕು ಜನರು ಅವನ ಬೆನ್ನ ಹಿಂದೆ ನರಸಿಂಹಪುರಕ್ಕೆ ಹೋಗಿರಿ. ಬಹಳ ಮಾಡಿ ಆ ರಜಪೂತ ಸ್ತ್ರೀಯೂ ಅಲ್ಲಿಗೆ ಬರಬಹುದು ನೀವು ಆ ರಜಪುತ ದಂಪತಿಗಳ ಕೊಲೆ ಮಾಡಿ ಬರ್ರಿ ನಾನು ನೌಕೆಯನ್ನು ಬಹೇಬೋರಗಾಂವಕ್ಕೆ ಸಾಗಿಸಿಕೊಂಡು ಹೋಗುತ್ತೇನೆ.''

ನೌಕೆಯನ್ನು ದಂಡೆಯ ಕಡೆಗೆ ಒಯ್ದು ಮೇಲೆ ಮೂವರು ಕೆಳಗಿಳಿದು ಆ ವ್ಯಕ್ತಿಯ ಬೆನ್ನ ಹತ್ತಿ ಸಾಗಿದರು. ಆ ಮೇಲೆ ನೌಕೆಯು ಬಹೇಬೋರಗಾಂವದ ಕಡೆಗೆ ಸಾಗಿತು ಸ್ವಲ್ಪ ದೂರ ಹೋದ ಮೇಲೆ ಅದು ದಂಡೆಯನ್ನು ತಲು

ಪಿತು. ಆಗ ಅಲ್ಲಿ ಮತ್ತೊಂದು ನೌಕೆಯು ಹೊರಡಲಿಕ್ಕೆ ಸಿದ್ಧವಾಗಿತ್ತು. ಅದರೊಳಗಿನವನೊಬ್ಬನು ಈ ನೌಕೆಯೊಳಗಿನ ನಾಯಕನನ್ನು ಕುರಿತು:— "ಉದಾಜಿರಾಯರೇ, ನಾವು ನಿಮ್ಮ ಶೋಧನೆಗೆ ಹೊರಡುವವರಿದ್ದೆವು. ಕೆಲಸವು ಈಡೇರಿತೇನು?" ಎಂದು ಕೇಳಿದನು.

"ಓಹೋ! ನಾವು ಕೆಲಸ ಮಾಡಿಕೊಳ್ಳದೆ ತಿರುಗಿ ಬರುವವರೆ? ನೀವು ಇಷ್ಟು ಅವಸರದಿಂದ ಹೊರಟುದುದೇಕೆ?"

"ರಾಣೀಸಾಹೇಬರೂ, ಸಂಭಾಜಿರಾಜರೂ, ಸ್ವಾಮಿಮಹಾರಾಜರೂ ಒಂದೇ ಸವನೆ ನಿಮ್ಮ ಮಾರ್ಗಪ್ರತೀಕ್ಷೆ ಮಾಡತೊಡಗಿರುವರು" ಎಂದು ಮತ್ತೊಂದು ನೌಕೆಯೊಳಗಿನ ಮರಾಟಿಗನು ಹೇಳಿದನು.

"ನಾವು ಎಲ್ಲಿಯೂ ತಡಮಾಡಿಲ್ಲ; ಆದರೆ ನದಿಗೆ ಮಹಾಪ್ರವಾಹವಿದ್ದುದರಿಂದಲೂ, ಈ ಹುಡುಗನ ಅಮ್ಮನು ನಮ್ಮ ಕಾರ್ಯಕ್ಕೆ ಸ್ವಲ್ಪ ವೇಳೆ ಅಡ್ಡಿಮಾಡಿದ್ದರಿಂದಲೂ ಇಷ್ಟು ವೇಳೆಯಾಯಿತು."

"ಮುದುಕಿಯ ತಡೆಯನ್ನು ದೂರ ಮಾಡಲಿಕ್ಕೆ ನಿಮಗೆ ತಡವಾಯಿತೇನು?"

"ಛೀ! ಅದಕ್ಕೇನೂ ಅಷ್ಟು ತಡವಾಗಲಿಲ್ಲ. ಖಡ್ಗದ ಒಂದು ಹೊಡತಕ್ಕೆ ಆ ತಡೆಯು ದೂರಾಯಿತು." ಎಂದು ಉದಾಜಿರಾಯನು ನುಡಿದು:— "ಈಗ ಆ ರಜಪುತ ದಂಪತಿಗಳನ್ನು ಶೋಧಿಸಲಿಕ್ಕೆ ಮೂವರನ್ನು ಕಳುಹಿಸುವೆನು. ನೀವೂ ಅಲ್ಲಿಗೆ ಹೋಗಿ ಆ ಜನರಿಗೆ ನೆರವಾಗಿರಿ. ಇಷ್ಟರಲ್ಲಿ ರಜಪುತನು ನರಸಿಂಹಪುರದ ದೇವಾಲಯವನ್ನು ತಲುಪಿರಬಹುದು ಅವನನ್ನು ಹಿಡಿಯದೆ ಬಿಡುವದು ಹಿತಕರವಲ್ಲ ಯಾಕಂದರೆ, ಅವನಿಗೆ ತಾರಾಬಾಯಿಯ ಹಾಗು ಅಮಾತ್ಯ ಭಗವಂತರಾಯನ ಗುಪ್ತ ಸಹಾಯವಿರುವದು. ಅವರ ನೆರವಿನಿಂದ ಆ ರಜಪುತನು ನಮಗೆ ತೊಂದರೆ ಕೊಡಲಿಕ್ಕೆ ಹವಣಿಸಬಹುದು ರಜಪುತನ ಹೆಂಡತಿಯು ಅಲ್ಲಿ ನಿಮ್ಮ ದೃಷ್ಟಿಗೆ ಬಿದ್ದರೆ ಅವಳನ್ನೂ ನೆರೆ ಹಿಡಿದು ತೆಗೆದುಕೊಂಡು ಬರತಕ್ಕದ್ದು." ಉದಾಜಿರಾಯನು ಹೀಗೆ ಹೇಳಿದಕೂಡಲೆ, ಮರಾಟಿಗನು ತನ್ನ ಜನರೊಡನೆ ನೌಕೆಯಲ್ಲಿ ಕುಳಿತು ನರಸಿಂಹಪುರದ ಕಡೆಗೆ ಸಾಗಿದನು. ಅನಂತರ ಉದಾಜಿಯು ಸಟವಾಜಿಯನ್ನು ತೆಗೆದುಕೊಂಡು ಬಹೇಬೋರಗಾಂವದ ಮಾರ್ಗವಾಗಿ ಶಿರೋಳದ ಕಡೆಗೆ ತೆರಳಿದನು.



# ರಾಜಪುತ್ರನ ಕೊಲೆ!

ದೇವರ್ಷಿ ರಾಮದಾಸನೆಂದು ಸಂಬೋಧಿಸಿಕೊಳ್ಳುವ ಯತಿಯು ಇರ ಹತ್ತಿದಾಗಿನಿಂದ ಬಹೇಬೋರಗಾಂವಕ್ಕೆ ಇಲ್ಲದ ಮಹತ್ವವು ಪ್ರಾಪ್ತವಾಗಿತ್ತು. ಕೊಲ್ಲಾಪುರದ ಸಂಭಾಜಿರಾಜ, ರಾಣಿಯಾದ ಜಿಜಾಬಾಯಿ, ಉದಾಜಿ ಚವ್ಹಾಣ ಮೊದಲಾದ ರಾಜಕರ್ತರೆಲ್ಲರೂ ಆ ದೇವರ್ಷಿಯ ಸೇವೆಯಲ್ಲಿ ತೊಡಗಿದ್ದರು. ಈಗ ಬಹೇಬೋರಗಾಂವ ಗ್ರಾಮವು ದೇವರ್ಷಿಗೆ ಇನಾಮು ಕೊಡಲ್ಪಟ್ಟಿತ್ತು. ಈ ಊರ ಬಳಿಯಲ್ಲಿರುವ ನಡುಗಡ್ಡೆಯಲ್ಲಿ ರಾಮಲಿಂಗನ ಜಾಗ್ರತಸ್ಥಾನವಿದ್ದು, ಅಲ್ಲಿಯೇ ರಾಜಾಶ್ರಯ ವಿಭೂಷಿತನಾದ ಆ ರಾಮ ದಾಸ ದೇವರ್ಷಿಯು ವಾಸಿಸಹತ್ತಿದ್ದನು ರಾಜ-ರಾಣಿಯರೇ ರಾಮದಾಸನ ಭಜನೆ ಮಾಡತ್ತಿದ್ದಾಗ ಸಾಮಾನ್ಯ ಜನರು ಸುಮ್ಮನೆ ಕುಳಿತುಕೊಳ್ಳುವರೆ? ಬರಬರುತ್ತ ರಾಮದಾಸನು ಬಹುಜನರಿಗೆ ದೇವಸ್ವರೂಪನಾದನು ರಾಮ ದಾಸನು ಭೂತವೇತಾಳಾದಿ ತಂತ್ರಗಳಿಂದ ಎಲ್ಲರ ಮೇಲೆ ತನ್ನ ವರ್ಚಸ್ಸು ಕೆಡಹಿದ್ದನು.

ಸ್ವಾಮಿಯವಿಷಯವಾಗಿ ಸಂಭಾಜಿರಾಜನಿಗಿಂತ ರಾಣಿಯ ಶ್ರದ್ಧೆಯು ಹೆಚ್ಚಾಗಿತ್ತು. ಆದ್ದರಿಂದ ಕೊಲ್ಹಾಪುರ ರಾಜ್ಯದೊಳಗಿನ ಪ್ರಜೆಗಳೆಲ್ಲರು ಅವನಿಗೆ ಹೆಚ್ಚಾಗಿ ಮಾನ-ಮಾನ್ಯತೆ ಕೊಡತೊಡಗಿದ್ದರು. ರಾಣಿಯು ಅವ ನಲ್ಲಿ ಇಷ್ಟು ಭಕ್ತಿ-ವಿಶ್ವಾಸಉಳ್ಳವಳಾಗದಿದ್ದರೆ, ರಾಮದಾಸನ ಅಟ್ಟಹಾಸವು ಅಲ್ಲಿ ಈ ಬಗೆಯಾಗಿ ಬೆಳೆಯುತ್ತಿರಲಿಲ್ಲ. ಯಾಕಂದರೆ, ಬ್ರಹ್ಮೇಂದ್ರಸ್ವಾಮಿ ಗಳಲ್ಲಿ ಸಂಭಾಜಿರಾಜನು ಶ್ರದ್ಧೆಯುಳ್ಳವನಾಗಿದ್ದು, ರಾಣಿಯು ಅವರಲ್ಲಿ ಶ್ರದ್ಧೆ ಯನ್ನಿಡದ್ದರಿಂದ ಕೊಲ್ಹಾಪುರದ ರಾಜ್ಯದ ಮಟ್ಟಿಗೆ ಅವರ ವರ್ಚಸ್ಸವು ನಷ್ಟ ವಾದಂತಾಗಿ ಹೋಗಿತ್ತು. ಈಗ ಎಲ್ಲಿ ನೋಡಿದಲ್ಲಿ ರಾಮದಾಸನ ಬೆಳಕೇ ಬೆಳಕು. ರಾಣಿಯ ಪ್ರತಿಷ್ಠೆಯಿದ್ದ ಸ್ಥಳದಲ್ಲಿ ರಾಜನ ಅನುಕರಣವನ್ನು ಯಾರು ಮಾಡುವರು? ರಾಣಿಯ ಮನಸ್ಸು ಸಂತುಷ್ಟಗೊಳ್ಳುವದಕ್ಕಾಗಿ ಎಷ್ಟೋ ಜನರು ಬಹಿರಂಗದಲ್ಲಾದರೂ ರಾಮದಾಸನ ಭಜನೆಗೆ ತೊಡಗುತ್ತಿ ದ್ದರು. ರಾಣಿಯಿಂದ ಕೆಲಸ ಸಾಧಿಸುವದಿದ್ದರೆ ರಾಮದಾಸನ ರಾಮದಾಸ ನಿಂದ ಕೆಲಸ ಸಾಧಿಸುವದಿದ್ದರೆ ರಾಣಿಯ ಮಧ್ಯಸ್ತಿಕೆ ಮಾಡುವದಕ್ಕೆ ಎಷ್ಟೋ ಸ್ವಾರ್ಥಿಗಳು ಮುಂದುವರಿದಿದ್ದರು. ಅಮಾತ್ಯ ಭಗವಂತರಾಯನೂ, ಘೋರ ಪಡೆ ವೆಂಕಟರಾಯನೂ 'ದುರ್ಜನಂ ಪ್ರಥಮಂ ವಂದೇ' ಎಂಬ ತತ್ವವನ್ನನು ಸರಿಸಿದ್ದರಿಂದ ರಾಜನ ಹಾಗು ರಾಣಿಯ ಅವಿಶ್ವಾಸಕ್ಕೆ ಪಾತ್ರರಾಗಿದ್ದರು.

ರಾಮದಾಸನು ಕಪಟ ಯತಿಯಿರುವನೆಂದು ಅವರು ಪ್ರತಿಪಾದಿಸುತ್ತಿದ್ದರು. ಭಗವಂತರಾಯನು ತಾರಾಬಾಯಿಯ ಪಕ್ಷಪಾತಿಯೆಂದೂ, ವೆಂಕಟರಾಯನು ಪೇಶವೆಯ ಆಪ್ತನೆಂದೂ ರಾಜ-ರಾಣಿಯರಿಗೆ ಮೊದಲೇ ಅಪ್ರಿಯರಾಗಿದ್ದರು. ಅಂಥವರ ಸಲಹೆಗಳು ಇವರಿಗೆ ಹೇಗೆ ಅನುಕರಣೀಯವಾಗುವವು.

ಭಗವಂತರಾಯನ ವಿಷಯವಾಗಿ ಸಂಭಾಜಿಯೂ ಜಿಜಾಬಾಯಿಯೂ ಕಲುಷಿತ ಮನಸ್ಕರಾಗಲಿಕ್ಕೆ ತಾರಾಬಾಯಿಯೇ ಕಾರಣಳಾಗಿದ್ದಳು. ಸಂಭಾಜಿಯು ತಾರಾಬಾಯಿಯನ್ನೂ ಅವಳ ಇಬ್ಬರು ಸೊಸೆಯಂದಿರನ್ನೂ ಸೆರೆಮನೆಯಲ್ಲಿ ಹಾಕಿದನು ಆದರೂ ಕಳಕೊಂಡ ರಾಜ್ಯವನ್ನು ಮೊಮ್ಮಗನಿಗೆ ಸಂಪಾದಿಸಬೇಕೆಂದು ತಾರಾಬಾಯಿಯು ಪ್ರಯತ್ನ ನಡೆಯಿಸಿದ್ದಳು. ಈ ಆಶೆಯಿಂದಲೆ ಅವಳು ಮೊಮ್ಮಗನನ್ನು ಜೀವಕ್ಕಿಂತ ಹೆಚ್ಚಾಗಿ ರಕ್ಷಿಸುತ್ತಿದ್ದಳು. ಅಮಾತ್ಯ ಮನೆತನವು ಛತ್ರಪತಿ ಶಿವಾಜಿಮಹಾರಾಜರ ಆಳಿಕೆಯಿಂದ ಸ್ವರಾಜ್ಯದ ವಿಷಯಕ್ಕೆ ಏಕನಿಷ್ಠೆಯುಳ್ಳದ್ದಾಗಿತ್ತು. ಶಾಹೂಮಹಾರಾಜ-ತಾರಾಬಾಯಿಯರಲ್ಲಿ ರಾಜ್ಯಾಧಿಕಾರಗಳ ವಿಷಯಕ್ಕೆ ಸ್ಪರ್ಧೆಯುಂಟಾದಾಗ ರಾಮಚಂದ್ರಪಂತ ಅಮಾತ್ಯನು ತಾರಾಬಾಯಿಯ ಪಕ್ಷವನ್ನು ಸ್ವೀಕರಿಸಿದ್ದನು. ಅವನ ತರುವಾಯ ಅವನ ಮಗನಾದ ಭಗವಂತರಾಯನೂ ತಂದೆಯ ಹೆಜ್ಜೆಯ ಮೇಲೆ ಹೆಜ್ಜೆಯನ್ನಿರಿಸಿ ನಡೆಯತೊಡಗಿದ್ದನು. ಕೊಲ್ಹಾಪುರದ ರಾಜಮನೆತನದಲ್ಲಿ ದಾಯಾದಿತನವು ಉತ್ಪನ್ನವಾದ ಮೇಲೆ ಸಹ ಭಗವಂತರಾಯನು ಪಕ್ಷಪಾತಿ ಧೋರಣವನ್ನು ಸ್ವೀಕರಿಸಲಿಲ್ಲ. ಮುಂದೆ ಸಂಭಾಜಿಯು ಶಾಹೂರಾಜನೊಡನೆ ವೈರವನ್ನು ಪ್ರಾರಂಭಿಸಿದ್ದರಿಂದಲೂ, ತಾರಾಬಾಯಿಯ ಮೊಮ್ಮಗನನ್ನು ಕ್ರೂರತನದಿಂದ ಕೊಲ್ಲಿಸಿದ್ದರಿಂದಲೂ, ಅವನ ರಾಜ್ಯದಾಡಳಿತದ ದಿಶೆಯು ಮನಸೋಕ್ತವಾದದ್ದರಿಂದಲೂ ಅನತ್ಯಾಚಾರ ಪ್ರಿಯನಾದ ಅವನು ರಾಜನ ವಿಷಯವಾಗಿ ಕಲುಷಿತಮನಸ್ಕನಾದನು. ಅವನು ರಾಜ-ರಾಣಿಯರಿಬ್ಬರಿಗೂ ಬಹುಪರಿಯಾಗಿ ಉಪದೇಶಿಸಿ, ಅವರನ್ನು ಸನ್ಮಾರ್ಗಪ್ರವೃತ್ತರನ್ನಾಗಿ ಮಾಡಬೇಕೆಂದು ಹವಣಿಸಿದನು. ಅದರಿಂದ ಏನೂ ಉಪಯೋಗವಾಗಲಿಲ್ಲ. ಈ ಧೋರಣದಿಂದಲೇ ಅವನು ರಾಜ-ರಾಣಿಯರಿಗೆ ರಾಜದ್ರೋಹಿಯಾಗಿ ಕಾಣತೊಡಗಿದನು. ಪಾರ್ವತಿಬಾಯಿಯು ಪತಿಮರಣದ ಪೂರ್ವದಲ್ಲಿ ಗರ್ಭಿಣಿಯಿದ್ದಳು. ಅವಳು ಪ್ರಸೂತಳಾದ ಕೂಡಲೆ ಅಪತ್ಯವನ್ನು ಯಮಸದನಕ್ಕೆ ಕಳಿಸಬೇಕೆಂದು ಅರಸು-ಅರಸಿಯರ ಕಾರಸ್ಥಾನ ನಡೆಯಿತು. ಪಾರ್ವತಿಬಾಯಿಯು ಪ್ರಸೂತಳಾಗಿ ಪುತ್ರನನ್ನು ಪಡೆದಳು. ರಾಣಿಯು ಕನ್ಯೆಯನ್ನು ಪಡೆದಳೆಂದೂ, ಶಿಶುವು ಜನಿಸಿದ

ಕೂಡಲೆ ಮೃತಿಹೊಂದಿತೆಂದೂ ವಾರ್ತೆ ಹಬ್ಬಿದ್ದರಿಂದ ಸಂಭಾಜಿಯೂ ಜಿಜಬಾಯಿಯೂ ನಿಶ್ಚಿಂತರಾದರು.

ಶಿವಾಜಿಯ ಸಂತತಿಯನ್ನು ನಾಶಗೊಳಿಸಿದೆವೆಂಬ ಭಾವನೆಯಿಂ ಸಂಭಾಜಿರಾಜನೂ ಜಿಜಾಬಾಯಿಯೂ ಕೃತಕೃತ್ಯರಾದೆವೆಂದು ತಿಳಿದಿದ್ದರೂ ವಸ್ತುಸ್ಥಿತಿಯು ಬೇರೆವಿಧವಾದದ್ದಾಗಿತ್ತು. ತಾರಾಬಾಯಿಯು ತನ್ನ ಮೊಮ್ಮಗನಾದ ರಾಮರಾಜನನ್ನು ಗುಪ್ತರೀತಿಯಿಂದ ಘಾಶೀರಾಮನೆಂ ರಜಪುತನ ಸ್ವಾಧೀನಪಡಿಸಿದ್ದಳು ರಾಜಕುಮಾರನು ರಜಪುತ ದಂಪ ಗಳಿಂದ ರಕ್ಷಣೆಮಾಡತೊಡಗಿದನು. ಈ ಕಾರಸ್ಥಾನದಲ್ಲಿ ಅಮಾತ್ಯ ಭ ವಂತರಾಯನ ಪೂರ್ಣ ಬೆಂಬಲವಿದ್ದಿತು ಮುಂದೆ ಕೆಲವು ಕಾಲದ ಮೇ ನಿಜವಾದ ಸಂಗತಿಯು ಸಂಭಾಜಿಗೂ ಜಿಜಾಬಾಯಿಗೂ ತಿಳಿಯಿತು. ತಮ ವೈರಿಯು ಯಾವದೋ ಒಂದು ಗುಪ್ತಸ್ಥಳದಲ್ಲಿ ಬೆಳೆಯುತೊಡಗಿರುವನೆಂಬದ ನಂಬಿಗೆಯೂ ಅವರಿಗಾಯಿತು. ಕೂಡಲೆ ಅವರು ಬಾಲ ರಾಜಕುಮಾರ ಶೋಧನೆಗಾಗಿ ಪ್ರಯತ್ನಮಾಡತೊಡಗಿದರು ಭಗವಂತರಾಯನೂ ಚದ ರೆಯೂ ರಾಮರಾಜನ ರಕ್ಷಣೆಗಾಗಿ ಸಾಹಸ ಮಾಡುತ್ತಿದ್ದರೆಂಬದು ಅವರಿ ತಿಳಿಯಿತು. ಸದ್ಯಕ್ಕೆ ಚದುರೆಯು ಎಲ್ಲಿರುವಳೆಂಬದು ಅವರಿಗೆ ಗೊತ್ತಿದ್ದಿಲ್ಲ ಇನ್ನು ರಾಜಕುಮಾರನು ಎಲ್ಲಿರುವನೆಂಬದನ್ನು ಅರಿತಿರುವವರೆಂದರೆ, ತಾರಾ ಬಾಯಿಯು ಹಾಗು ಭಗವಂತರಾಯನು. ಇವರಿಬ್ಬರೂ ಅದರ ಬಗ್ ಗೊತ್ತುವಳಿ ಮಾಡಿಕೊಡಲಿಕ್ಕೆ ಸಮ್ಮತಿಯಿಲ್ಲದವರಾಗಿದ್ದರು. ಅವರು ತಮ ಈ ವಿಷಯವೇ ಗೊತ್ತಿಲ್ಲೆಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳುತ್ತಿದ್ದರು ತಾರಾಬಾಯಿ-ಭಗವಂತರಾಯರ ಮೇಲೆ ರಾಜದ್ರೋಹದ ಆರೋಪಣೆ ಮಾ ಲಿಕ್ಕೆ ಬಲವಾದ ಸಾಕ್ಷಿಗಳಿರದ್ದರಿಂದ ರಾಜ-ರಾಣಿಯರು ನಿರುಪಾಯರಾ ದ್ದರು. ರಾಜಪುತ್ರನು ರಜಪುತ ದಂಪತಿಗಳ ಮನೆಯಲ್ಲಿ ನಿರ್ಬಾಧಕವಾ ಬೆಳೆಯುತ್ತಿರುವನೆಂಬ ಸಂಗತಿಯು ಇದೀಗ ಉದಯಕ್ಕೆ ಬಂದ ರಾಮದಾ ನಿಂದ ಅವರಿಗೆ ತಿಳಿದಿತ್ತು. ಅವನು ಉದಾಜಿ ಚವ್ಹಾಣನ ಸಹಾಯದಿಂ ರಾಜಪುತ್ರನ ಶೋಧ ಮಾಡಿ, ರಾಜ-ರಾಣಿಯರಿಂದ ಗೌರವಹೊಂ ಬೇಕೆಂದು ಮನಸ್ಸು ಮಾಡಿದ್ದನು. ಅವನು ರಾಜಕುಮಾರನ ಶೋಧ ಮಾಡಿ ಕೊಡುವೆನೆಂದು ರಾಜರಾಣಿಯರಿಗೆ ಆಶ್ವಾಸನೆಯಿತ್ತಿದ್ದನು.

ಶ್ರೀಪತಿರಾಯನು ತಮಗೆ ಅನುಕೂಲವಾದ ವಾರ್ತೆಯು ಜಗಜೀವನ ರಾಯನಿಂದ ತಿಳಿದ ಕೂಡಲೆ, ಚವ್ಹಾಣನು ಶಾಹೂರಾಜನ ಮೇಲೆ ದಂಡೆತ್ತಿ ಹೊರಡಬೇಕೆಂಬ ಪ್ರಸ್ತಾಪವನ್ನು ರಾಜ-ರಾಣಿಯರ ಮುಂದೆ ತೆಗೆದನು.

ಇಷ್ಟು ದಿನ ಸಾತಾರೆಯವರ ವೈರ ಬಳೆಯಿಸಿದ್ದೇ ಸಾಕೆಂದು ಜಿಜಾಬಾಯಿಯು ಅಭಿಪ್ರಾಯಕೊಟ್ಟಳು. ರಾಜನು ಅನುಕೂಲವಿದ್ದ ಸಮಯದಲ್ಲಿ ರಾಣಿಯಿಂದ ಪ್ರತಿಕೂಲತೆಯುಂಟಾದದ್ದು ಉದಾಜಿಯ ಮನಸ್ಸಿಗೆ ಖೇದವನ್ನುಂಟು ಮಾಡಿತು. ರಾಮದಾಸ ಸ್ವಾಮಿಯ ಮಧ್ಯಸ್ತಿಕೆಯಿಂದ ದಂಡಯಾತ್ರೆಯ ಮಾರ್ಗವನ್ನು ಸರಳ ಮಾಡಿಕೊಳ್ಳಬೇಕೆಂದು ಅವನು ರಾಜ-ರಾಣಿಯರನ್ನು ಶಿರಾಳೆಗೆ ಕರೆಯಿಸಿದನು; ಹಾಗು ರಾಮದಾಸನನ್ನಾದರೂ ಬಹೇಬೋರ ಗಾಂವದಿಂದ ಅಲ್ಲಿಗೆ ಕಳುಹಿಸಿಕೊಟ್ಟನು. ಇಂಥ ಗುಪ್ತ ರಾಜಕಾರಣವನ್ನು ನಡೆಯಿಸಲಿಕ್ಕೆ ಶಿರಾಳೆಯ ಹೊರತು ಉಳಿದ ಸ್ಥಳಗಳು ಸುರಕ್ಷಿತವಲ್ಲವೆಂದು ಸಂಭಾಜಿಗೂ ಜಿಜಾಬಾಯಿಗೂ ಗೊತ್ತಿದ್ದುದರಿಂದ ಅವರು ಶಿರಾಳೆಗೆ ಬಂದರು. ಇಷ್ಟಾಗುವಷ್ಟರಲ್ಲಿ ನರಸಿಂಹಪುರದ ಗುಡಿಯಲ್ಲಿ ರಜಪುತ ದಂಪತಿಗಳು ಬೈರಾಗಿಯ ವೇಷದಿಂದಿರುವರೆಂದೂ ಅವರ ಬಳಿಯಲ್ಲಿ ರಾಜ ಕುಮಾರನು ಇರುವನೆಂದೂ ರಾಮದಾಸನು ಚವ್ಹಾಣನಿಗೆ ಹೇಳಿದನು. ಕೂಡಲೆ ಅವನು ಉಪಸ್ಥಿತ ರಾಜಕಾರಣವನ್ನು ಬದಿಗಿರಿಸಿ, ಬಹೇಬೋರ ಗಾಂವದ ಮಾರ್ಗವಾಗಿ ನರಸಿಂಹಪುರಕ್ಕೆ ಹೋಗಿ, ರಾಜಕುಮಾರನೆಂದು ಸ್ವಾಮಿಯಿಂದ ಸಂಬೋಧಿಸಿಕೊಳ್ಳುತ್ತಲಿದ್ದ ಸಟವಾಜಿಯನ್ನು ಶಿರಾಳೆಗೆ ತಂದನು.

ರಾಣೀ ಜಿಜಾಬಾಯಿಯೂ, ಸಂಭಾಜಿ ಮಹಾರಾಜನೂ, ರಾಮ ದಾಸನೂ, ರಾಣಿಯ ಭಗಿನಿಯಾದ ದುರ್ಗಾಬಾಯಿಯೂ ಶಿರಾಳೆಯಲ್ಲಿಯ ಚವ್ಹಾಣನ ವಾಡೆಯಲ್ಲಿ ಕುಳಿತಿದ್ದರು. ರಾಜಕುಮಾರನು ಹಸ್ತಗತನಾದುದ ರಿಂದ ಎಲ್ಲರೂ ಆನಂದೋದಧಿಯಲ್ಲಿ ಮುಳುಗಿ ಹೋಗಿದ್ದರು. ಜಿಜಾಬಾಯಿ ಯ ಆನಂದಕ್ಕಂತೂ ಪಾರವೇ ಇಲ್ಲದಾಗಿತ್ತು. ಆಗ ಅವಳು ರಾಮದಾಸನನ್ನು ಕುರಿತು.—"ಸ್ವಾಮಿಮಹಾರಾಜರೇ! ನಮ್ಮ ಪ್ರತಿಸ್ಪರ್ಧಿಗಳ ವಂಶಾಂಕುರವು ನಮ್ಮ ಕೈಯಲ್ಲಿ ಬಂದಿತು. ಇನ್ನು ಬೇಗನೆ ಅದು ನಾಶವಾಗುವದೆಂಬದರಲ್ಲಿ ಸಂದೇಹವಿಲ್ಲ. ಇನ್ನು ನಮ್ಮ ರಾಜವಂಶವು ವಿಸ್ತಾರವಾಗುವ ಬಗೆ ಹೇಗೆ? ಎಲ್ಲ ಕಾರ್ಯಗಳು ನಿಮ್ಮ ಅನುಗ್ರಹದಿಂದಲೇ ನೆರವೇರಬೇಕಾಗಿವೆ."

"ರಾಣಿಯವರೆ!" ರಾಮದಾಸನು ಗಂಭೀರತೆಯಿಂದ:—ನೀವು ಇಷ್ಟೇಕೆ ನಿರಾಶರಾಗುವಿರಿ? ದೇವರ ದಯೆಯಿಂದ ನೀವು ಇನ್ನು ಮೇಲಾ ದರೂ ಪುತ್ರವತಿಯರಾಗಬಹುದು."

"ಮಹಾರಾಜ! ನಿಮಗೆ ಭೂತಭವಿಷ್ಯಜ್ಞಾನವಿದ್ದು, ಸುಮ್ಮನೆ ನನ್ನ ಮನಸ್ಸಿನ ಸಮಾಧಾನಕ್ಕಾಗಿ ಹೀಗೆ ಆಡುವಿರಿ." ಎಂದು ನುಡಿಯುತ್ತಿರು

ವಾಗ ರಾಮದಾಸನ ಬಳಿಯಲ್ಲಿದ್ದ ಭೈರವನೆಂಬ ಹುಡುಗನು ಜಿಜಾಬಾಯಿಯ ತೊಡೆಯ ಮೇಲೆ ಹೋಗಿ ಕುಳಿತನು. ಜಿಜಾಬಾಯಿಯು ಆ ಹುಡುಗನಿಗೆ ಮುದ್ದು ಕೊಡುತ್ತ:—"ನನ್ನ ದೈವದಲ್ಲಿ ಇಂತಹ ಹುಡುಗರನ್ನು ತೊಡೆಯ ಮೇಲಿರಿಸಿಕೊಂಡು ಆಡಿಸುವದನ್ನು ಬರೆದಿಲ್ಲ. ನನ್ನ ಅದೃಷ್ಟವಂತು ಕಂಡದ್ದೇ ಅದೆ. ನಮ್ಮ ದುರ್ಗೆಯ ಪ್ರಾರಬ್ಧವು ಹೇಗಿರುವದೆಂಬದನ್ನು ನೋಡಿ ಹೇಳಿರಿ" ಎಂದು ನುಡಿದು, ಸ್ವಾಮಿಗೆ ಕೈತೋರಿಸಲಿಕ್ಕೆ ತನ್ನ ತಂಗಿಗೆ ಹೇಳಿದಳು.

ರಾಮದಾಸನು ದುರ್ಗಾಬಾಯಿಯ ಕೈಯನ್ನು ನೋಡಿ ಆನಂದದಿಂದ: "ರಾಣಿಯವರೆ! ಇವರ ಹಸ್ತದಲ್ಲಿ ಸಂತಾನರೇಷೆಗಳುಂಟು, ರಾಜಯೋಗವಾದರೂ ಕಂಡುಬರುತ್ತದೆ!"

"ಹಾಗಾದರೆ ದುರ್ಗೆಯು ಮಹಾರಾಜರನ್ನು ವರಿಸಿದರೆ ನಮ್ಮ ವಂಶವು ಅಭಿವೃದ್ಧಿಯಾಗುವದೆಂಬದರಲ್ಲಿ ಸಂದೇಹವಿಲ್ಲವಷ್ಟೇ?"

"ನಿಸ್ಸಂದೇಹ, ನಿಸ್ಸಂದೇಹ!" ಎಂದು ರಾಮದಾಸನು ನುಡಿಯುವಷ್ಟರಲ್ಲಿ ಉದಾಜಿ ಚವ್ಹಾಣನು ಅಲ್ಲಿಗೆ ಬಂದು ಜಿಜಾಬಾಯಿಯನ್ನು ಕುರಿತು:— "ರಾಣಿಯವರೆ! ರಾಜಪುತ್ರನನ್ನು ತಂದಿರುವೆನು. ಮುಂದೆ ಬೇಕಾದ ಹಾಗೆ ವ್ಯವಸ್ಥೆ ಮಾಡಬಹುದು."

"ಇವನೇ ತಾರಾಬಾಯಿಯ ಮೊಮ್ಮಗನೆ?"

"ಹೌದು." ಎಂದು ಜಿಜಾಬಾಯಿಗೆ ಉದಾಜಿಯು ಹೇಳಿದನು.

"ಇವನನ್ನು ಜೀವಂತವಾಗಿ ಇಲ್ಲಿಯವರೆಗೆ ಏಕೆ ಕರೆತಂದಿರಿ?" ಎಂದು ಸಂಭಾಜಿಯು ಖಡ್ಗವನ್ನು ಒರೆಯಿಂದ ಹಿರಿದು ನುಡಿದನು

"ರಾಜಪುತ್ರನ ಕೊಲೆ ಮಾಡಲಿಕ್ಕೆ ನಮಗೆ ಅಧಿಕಾರವು ಹೇಗೆ ಬರುವದು?"

"ಓಹೋ! ಅದರಲ್ಲೇನು? ಕೊಲೆ ಮಾಡಿ ರುಂಡವನ್ನು ನಮ್ಮ ಕಣ್ಣಿಗೆ ಹಾಕಿದ್ದರೂ ನಡೆಯುತ್ತಿತ್ತು."

ಆ ಹುಡುಗನನ್ನು ನೋಡಿದೊಡನೆಯೆ ರಾಮದಾಸನ ಮುಖವು ವಿಷಾದ ಚರ್ಯೆಯುಳ್ಳದ್ದಾಯಿತು. ಅವನ ಮುಖ ಲಕ್ಷಣವನ್ನು ನೋಡಿ ಜಿಜಾಬಾಯಿಯು:—"ಯಾಕೆ ಸ್ವಾಮಿಮಹಾರಾಜರೆ? ಈ ಹುಡುಗನನ್ನು ನೋಡಿ ನಿಮ್ಮಲ್ಲಿ ಅನುಕಂಪೆ ಹುಟ್ಟಿದಂತೆ ತೋರುವದಲ್ಲ? ಸಹಜವಿರುವದು. ಹುಡುಗನ ಲಕ್ಷಣವೇ ಹಾಗಿರುವದು. ಆದರೂ ಈ ವೇಳೆಯಲ್ಲಿ ಮನಸ್ಸನ್ನು ಕಲ್ಲುಮಾಡದಿದ್ದರೆ ಗತ್ಯಂತರವಿಲ್ಲ."

"ಬರಿಯ ಕಲ್ಲು ಮಾಡುವದೇಕೆ? ಕಲ್ಲಿಗಿಂತಲೂ ಕಲ್ಲು ಮಾಡಲಿಕ್ಕೆ ಬೇಕು!" ಎಂದು ಸಂಭಾಜಿಯು ನುಡಿದು. ತನ್ನ ಕೈಯಲ್ಲಿದ್ದ ನಗ್ನ ಖಡ್ಗವನ್ನು ಆ ಬಾಲಕನ ಹೃದಯಕ್ಕೆ ಬಲವಾಗಿ ಚುಚ್ಚಿದನು! ಕೂಡಲೆ "ಅವ್ವಾ! ಅವ್ವಾ!" ಎಂದು ಚೀರುತ್ತ ಆ ಹುಡುಗನು ಭೂಮಿಗೆ ಬಿದ್ದನು. ರಾಮದಾಸನು "ಹೊಡೆಯಬೇಡಿರಿ; ಹೊಡೆಯಬೇಡಿರಿ" ಅನ್ನುತ್ತ ಎದ್ದು ಬಂದನು. ಆ ಬಾಲಕನ ಹೃದಯದ ರಕ್ತವು ಕಾರಂಜಿಯಂತೆ ಪುಟಿದು ಅವನ ಮೈಮೇಲೆ ಬಿದ್ದಿತು. ಅವನು ಹಿಂದಕ್ಕೆ ಸರಿದು, ದೀರ್ಘವಾದ ನಿಟ್ಟುಸಿರು ಬಿಟ್ಟನು. ಅಷ್ಟು ಹೊತ್ತಿಗೆ ಬಾಲಕನ ಪ್ರಾಣಪಕ್ಷಿಯು ಹಾರಿಹೋಗಿತ್ತು!

"ಇಂದು ನನ್ನ ನೇತ್ರಗಳು ಸಾಫಲ್ಯಹೊಂದಿದವು!" ಎಂದು ಜಿಜಾಬಾಯಿಯು ಆನಂದೋದ್ಗಾರ ತೆಗೆದು, ಖಡ್ಗದ ತುದಿಗೆ ಹತ್ತಿದ್ದ ರಕ್ತವನ್ನು ತನ್ನ ಬೆರಳಿಗೆ ಹಚ್ಚಿಕೊಂಡು ದುರ್ಗಾಬಾಯಿಯ ಹಣೆಗೆ ಹಚ್ಚಿ:—"ನೀನು ಕೊಲ್ಹಾಪುರದ ರಾಣಿಯಾಗತಕ್ಕವಳು. ಇಂಥ ಸುಲಕ್ಷಣವುಳ್ಳ ಮಗನನ್ನೇ ನೀನು ಪಡೆ." ಎಂದು ನುಡಿದಳು

"ಹುಚ್ಚನ ಮಗನ ರಕ್ತವಿದು. ಇದು ತನ್ನ ಎಳಗೆ ಎಳೆಯಲಿಕ್ಕಿಲ್ಲವಷ್ಟೆ?" ಎಂದು ದುರ್ಗಾಬಾಯಿಯು ಕೇಳಿದಳು.

"ಅಮಂಗಲವಾಡಬೇಡ. ನೀನು ವೀರಪತ್ನಿಯೂ ವೀರಮಾತೆಯೂ ಆಗುವೆ" ಎಂದು ಜಿಜಾಬಾಯಿಯು ನುಡಿದು, ಉದಾಜಿಯನ್ನು ಕುರಿತು:—"ಚವ್ಹಾಣ! ನೀವು ಜಾಣತನದ ಹಾಗು ಕಲಿತನದ ಪರಾಕಾಷ್ಠೆಯನ್ನು ತೋರಿಸಿದಿರಿ. ನಮ್ಮ ಮೇಲಿನ ದೊಡ್ಡ ಕಂಟಕವನ್ನು ಇಂದು ನೀವು ದೂರ ಮಾಡಿದಂತಾಯಿತು ನಿಮ್ಮ ಈ ಮಹತ್ಕಾರ್ಯಕ್ಕಾಗಿ ನಾವು ತುಂಬಾ ಋಣಿಯಾಗಿರುವೆವು."

ಉದಾಜಿಯ ಲಕ್ಷ್ಯವು ಜಿಜಾಬಾಯಿಯ ಮಾತಿನಕಡೆಗೆ ಇರಲಿಲ್ಲ. ದುರ್ಗಾಬಾಯಿಯ ಲಗ್ನವು ನಿಶ್ಚಯವಾದಾಗ ಅವನು ಅಲ್ಲಿ ಇದ್ದಿಲ್ಲ. ಜಿಜಾಬಾಯಿಯು ರಕ್ತತಿಲಕವನ್ನು ಅವಳಹಣೆಗೆ ಹಚ್ಚುವಾಗ ಮಾಡಿದ ಆಶೀರ್ವಾದವು ಉದಾಜಿಯ ಹೃದಯವನ್ನು ಅಲ್ಲೋಲ ಕಲ್ಲೋಲವಾಗಿ ಮಾಡಿತು. ತಾನು ದುರ್ಗಾಬಾಯಿಯನ್ನು ಒರಿಸಬೇಕೆಂದೂ, ಅವಳ ಸಂತತಿಗೆ ಕೊಲ್ಹಾಪುರದ ಭಾವೀ ಸಿಂಹಾಸನವು ದೊರೆಯಬೇಕೆಂದೂ ಅವನ ಮಹತ್ವಾಕಾಂಕ್ಷೆಯಿದ್ದಿತು. ಆದಕ್ಕಾಗಿಯೇ ಅವನು ರಾಣಿಯ ಹಾಗು ದುರ್ಗಾಬಾಯಿಯ ಲಾಂಗೂಲಚಾಲನ ಮಾಡತೊಡಗಿದ್ದನು. ದುರ್ಗಾಬಾಯಿಯ ಲಗ್ನವು ಸಂಭಾಜಿಯೊಡನೆ ಆಗುವದು ನಿಶ್ಚಯಿಸಲ್ಪಟ್ಟದ್ದರಿಂದ ಅವನಿಗೆ ನೊಣತಿಂದಂ

ತ್ತಾಯಿತು. ಅವನು ಜಿಜಾಬಾಯಿಯನ್ನು ಕುರಿತು:- "ದುರ್ಗಾಬಾಯಿಯವರ ಲಗ್ನದ ನಿಶ್ಚಯವಾಗಿರುವದೆಂದಂತಾಯಿತು."

"ಹೌದು; ದುರ್ಗೆಯು ರಾಜಪತ್ನಿಯೂ ರಾಜಮಾತೆಯೂ ಆಗತಕ್ಕವಳಿರುವಳು. ಮಹಾರಾಜರ ಗ್ರಹಬಲವನ್ನು ನೋಡಿ, ಅವರು ದುರ್ಗೆಯನ್ನು ವಿವಾಹವಾದರೆ ವಂಶಾಭಿವೃದ್ಧಿಯಾಗುವದೆಂದು ಸ್ವಾಮಿಮಹಾರಾಜರು ಹೇಳಿರುವರು. ಹೀಗಿದ್ದರೆ ಈಶ್ವರೇಚ್ಛೆಗೆ ನಾವು ಮಾನ್ಯತೆಯನ್ನೇಕೆ ಕೊಡಬಾರದು?"

ನೀವು ಮಾಡಿದ ಮಹತ್ಕಾರ್ಯಕ್ಕಾಗಿ ದುರ್ಗೆಯನ್ನು ನಿಮಗೆ ಧಾರೆಯೆರೆದು ಕೊಡುವದನ್ನು ನಿಶ್ಚಯಿಸಿರುವದಾಗಿ ರಾಣಿಯು ಹೇಳುವಳೆಂದು ಉದಾಜಿಯು ಬಾಯಿತೆರದು ಕುಳಿತಿದ್ದನು; ಆದರೆ ಸಕ್ಕರೆ ಬೀಳುವದಕ್ಕೆ ಪ್ರತಿಯಾಗಿ ಮಣ್ಣು ಬಾಯಲ್ಲಿ ಬಿದ್ದಂತಾಯಿತು. ಅವನು ಮನಸ್ಸಿನ ವಿಕಾರವನ್ನು ವ್ಯಕ್ತಗೊಳಿಸದೆ ಬಹಿರಂಗಕ್ಕೆ:—"ಬಹಳೇ ಲೇಸಾಯಿತು!" ಎಂದು ನುಡಿದನು.

ಬಾಲಕನ ಭೀಷಣವಾದ ಕೊಲೆಯಿಂದ ರಾಮದಾಸನ ಮನಸ್ಸು ಕಳವಳಗೊಂಡಿತು. ಯಾವನು ಬಹು ಪ್ರಯತ್ನದಿಂದ ಆ ಬಾಲಕನನ್ನು ಶೋಧಿಸಿ ತರಿಸಿದನೋ ಅಂಥವನ ಅಂತಃಕರಣವು ಈಗ ತಳಮಳಗೊಳ್ಳತೊಡಗಿದ ಕಾರಣವು ಪರಮಾತ್ಮನಿಗೆ ಗೊತ್ತು. ಅವನ ಮನಃಸ್ಥಿತಿಯು ಹೀಗಾಗಲಿಕ್ಕೆ ಏನಾದರೂ ಗೂಢವಿರಬೇಕು. ಅವನು ಸಜಲವಾದ ತನ್ನ ನೇತ್ರಗಳನ್ನು ಕಫನಿಯಿಂದ ಒರಿಸಿಕೊಳ್ಳುವದನ್ನು ಜಿಜಾಬಾಯಿಯು ನೋಡಿದಳು ಆಗ ಅವಳು: —"ಸ್ವಾಮಿಮಹಾರಾಜರೆ! ನಿಮ್ಮ ಕಣ್ಣುಗಳಲ್ಲಿ ನೀರು ಬಂದ ಕಾರಣವೇನು? ರಾಜಪುತ್ರನ ಕೊಲೆಯಿಂದ ನೀವು ನೊಂದಿರೇನು?"

"ರಾಜಪುತ್ರನ ದುರ್ದೆಶೆಯನ್ನು ಕಂಡು ಹೃದಯವು ತಳಮಳಗೊಳ್ಳತೊಡಗಿದ್ದುದು ನಿಜವು. ನೋಡಿರಿ! ಎಲ್ಲಿ ಜನಿಸಬೇಕು, ಎಲ್ಲಿ ಬೆಳೆಯಬೇಕು, ಕೊನೆಗೆ ಹೇಗೆ ಮರಣ ಹೊಂದಬೇಕು? ದೊಡ್ಡ ಮನೆತನದಲ್ಲಿ ಜನ್ಮ ತಾಳಿ, ಮುಂದೆ ಅಭ್ಯುದಯ ಹೊಂದಲಿಕ್ಕೆ ಇವನ ಪುಣ್ಯವು ಸಾಲದ್ದಕ್ಕೆ ದುರ್ಮರಣ ಹೊಂದಿದನು"

"ಸ್ವಾಮಿಗಳ ಹೃದಯವು ಕೋಮಲವಿರುವದು." ಎಂದು ಜಿಜಾಬಾಯಿಯು ನುಡಿದಳು.

"ಸಂತರ ಹೃದಯವು ಕೋಮಲವಿರದೇನು ಮಾಡೀತು? ರಾಜಶಾಸನಕ್ಕಾಗಿ ನಾವು ಮಾತ್ರ ನಮ್ಮ ಹೃದಯವನ್ನು ವಜ್ರದಂತೆ ಕಠಿಣ ಮಾಡಬೇಕಾಗುವದು." ಎಂದು ಸಂಭಾಜಿಯು ದೊಡ್ಡಸ್ತಿಕೆಯಿಂದ ಮಾತಾಡಿದನು.

"ರಾಣೀಸಾಹೇಬರೇ!" ಉದಾಜಿಯು ಆವೇಶದಿಂದ:—"ಇಂದಿನ ಕೃತ್ಯವು ನಮಗೆ ಶುಭಶಕುನವಾಗಿರುವದು. ಸ್ವಾಮಿಮಹಾರಾಜರ ಆಶೀರ್ವಾದವೂ ನನ್ನ ಕಲಿತನವೂ ಭಾವೀ ಕಾಳಗದಲ್ಲಿ ವಿಜಯಲಾಭ ಮಾಡಿಕೊಡುವವೆಂಬ ವಿಷಯದಲ್ಲಿ ನೀವು ಸಂದೇಹಗೊಳ್ಳಬಾರದು. ಬೇಗನೆ ಶಾಹೂರಾಜರೊಡನೆ ಯುದ್ಧವನ್ನು ಪ್ರಾರಂಭಿಸಲಿಕ್ಕೆ ಬೇಕು. ಪೇಶವೆಯು ಉತ್ತರದಿಗ್ವಿಜಯಕ್ಕೆ ಹೊರಡುವವನಿರುವನು. ಶ್ರೀಪತಿರಾಯನಂತು ಅಂತರಂಗದಲ್ಲಿ ನಮ್ಮಪಕ್ಷ ಹಿಡಿದಿರುವನೆಂದು ಜಗಜೀವನರಾಯನು ಹೇಳಿದನು."

"ಉದಾಜಿರಾಯರೇ, ನಿಮ್ಮ ಪರಾಕ್ರಮದ ವಿಷಯವಾಗಿಯೂ ಸ್ವಾಮಿಮಹಾರಾಜರ ಪ್ರಭಾವಕ್ಕಾಗಿಯೂ ನಾನು ಸಂಶಯಗೊಳ್ಳುವದಿಲ್ಲ; ಆದರೆ ಸಾತಾರೆಯವರೊಡನೆ ಇಷ್ಟುದಿವಸ ವೈರಬಳೆಯಿಸಿದ್ದೇ ಸಾಕೆಂದು ನನ್ನ ಅಭಿಪ್ರಾಯವಿದೆ."

"ಕೈಯಲ್ಲಿ ಬಳೆಯಿಟ್ಟವರು ನಿನ್ನ ಮತದಂತೆ ನಡೆಯಬಹುದು." ಎಂದು ಸಂಭಾಜಿಯು ಜಿಜಾಬಾಯಿಗೆ ಹೇಳಿದನು.

"ರಾಣೀಸಾಹೇಬರೇ!" ಚವ್ಹಾಣನು ಜಿಜಾಬಾಯಿಯನ್ನು ಕುರಿತು: "ಪಾಲಖೇಡದ ಯುದ್ಧದಲ್ಲಿ ನಿಜಾಮನ ಸಿದ್ಧತೆಯು ಚನ್ನಾಗಿದ್ದಿಲ್ಲ ಪೇಶವೆಯು ಒಳ್ಳೇ ಸಿದ್ಧತೆಯಿಂದ ಬಂದಿದ್ದನು; ಅಲ್ಲದೆ ಅವನು ತಂತ್ರಯುದ್ಧ ಮಾಡಿ ಮಹಾರಾಜರನ್ನೂ ಚಂದ್ರಸೇನನನ್ನೂ ಮೋಸಗೊಳಿಸಿದನು. ಆದ್ದರಿಂದಲೇ ಆ ಯುದ್ಧದಲ್ಲಿ ಪೇಶವೆಗೆ ಜಯದೊರೆಯಿತು. ಇಷ್ಟಕ್ಕಾಗಿ ಸಾತಾರೆಯವರೊಡನೆ ಯುದ್ಧಮಾಡಲಿಕ್ಕೆ ಹಿಂಜರಿಯಬೇಕೆ?"

"ಹಾಗಾದರೆ ಈಗ ಪೇಶವೆಯು ತನ್ನ ಸೈನ್ಯವನ್ನು ತೆಗೆದುಕೊಂಡು ಬಂದು, ನಿಮ್ಮ ಖಡ್ಗದ ಕೆಳಗೆ ಕೊರಳು ಕೊಡಲಿಕ್ಕೆ ಕಟಕರ ದನಗಳಂತೆ ಸಿದ್ಧನಾಗಿರುವನೇನು? ಆಗ ನಿಜಾಮನೂ ಚಂದ್ರಸೇನ ಜಾಧವನೂ ಇರಲಾಗಿ ನೀವು ದಿಕ್ಕಾಪಾಲಾಗಿ ಓಡಿಬಂದಿರೇಕೆ? ಈಗೇನೋ ಸ್ವತಂತ್ರ ರೀತಿಯಿಂದ ಯುದ್ಧ ಮಾಡಿ ಪರಾಕ್ರಮವನ್ನು ಮೆರೆಯಿಸುವರಂತೆ!" ಎಂದು ಜಿಜಾಬಾಯಿಯು ತಿರಸ್ಕಾರದಿಂದ ಮಾತನಾಡಿದಳು.

"ರಾಣೀ!" ಸಂಭಾಜಿಗೆ ಜಿಜಾಬಾಯಿಯ ಮಾತುಗಳು ಅಪಮಾನಾಸ್ಪದವಾಗಿ ತೋರಿ:—"ನೀನು ಮಾತಾಡಬೇಡ. ರಾಜಕಾರಣವು ಹೆಂಗಸರ ವಿಷಯವಲ್ಲ." ಎಂದು ನುಡಿದು, ಉದಾಜಿಯನ್ನು ಕುರಿತು:-"ಹಿಮ್ಮತಬಾಹದ್ದರರೇ! ಶ್ರೀಪತಿರಾಯರಂತು ನಮಗೆ ಸಹಾಯಕರಾಗಿರುವರು. ನಾವು ಸಾತಾರೆಯವರಿಗೆ ಅಂಜುವಕಾರಣವಿಲ್ಲ. ಪೇಶವೆಗೇನೂ ಕೋಡು

ಗಳಿರುವದಿಲ್ಲವಷ್ಟೆ? ನೀವು ಎಲ್ಲ ಸರದಾರ-ಸಾಮಂತರಿಗೆ ಯುದ್ಧದ ಸಿದ್ಧತೆ ಮಾಡಲಿಕ್ಕೆ ಆಜ್ಞಾಪತ್ರಗಳನ್ನು ಕಳುಹಿಸಿರುವಿರಿ. ಇನ್ನೇಕೆ ಅನುಮಾನವು?''

''ಅಮಾತ್ಯ ಭಗವಂತರಾಯರ ಹಾಗು ವೆಂಕಟರಾಯರ ವಿಷಯವಾಗಿ ನನಗೆ ಸಂದೇಹವುಂಟಾಗಿದೆ. ಭಗವಂತರಾಯರು ತಾರಾಬಾಯಿಯ ಪಕ್ಷಪಾತಿಗಳು. ವೆಂಕಟರಾಯರಂತು ಪೇಶವೆಯ ಆಪ್ತರು.'' ಎಂದು ಉದಾಜಿಯು ಹೇಳಿದನು.

''ನಮ್ಮ ಆಜ್ಞಾಪತ್ರಕ್ಕೆ ಅಮಾನ್ಯತೆ ಮಾಡುವಂಥ ಮೂರ್ಖತನವು ಅವರಿಂದ ಆಗಲಿಕ್ಕಿಲ್ಲೆಂದು ನನ್ನ ಆತ್ಮ ವಿಶ್ವಾಸವಿದೆ. ಒಂದು ವೇಳೆ ಅವರು ನಮ್ಮ ಮೇಲೆ ತಿರುಗಿ ಬಿದ್ದರೆ, ಅವರ ಪಾರುಪತ್ಯ ಮಾಡಲಿಕ್ಕೆ ನಮ್ಮಲ್ಲಿ ಸಾಮರ್ಥ್ಯವಿಲ್ಲವೆಂಬಂತಿಲ್ಲ.'' ಎಂದು ಸಂಭಾಜಿಯು ನುಡಿದು:—"ಮೊದಲು ಈ ಮೃತಬಾಲಕನ ಶವದ ವ್ಯವಸ್ಥೆ ಮಾಡಿಸಿರಿ." ಎಂದು ಹೇಳಿ ಎದ್ದು ಒಳಗೆ ಹೋದನು. ಅವನ ಹಿಂದೆ ಜಿಜಾಬಾಯಿಯೂ ದುರ್ಗಾಬಾಯಿಯೂ ಹೊರಟು ಹೋದರು.

ಅನಂತರದಲ್ಲಿ ರಾಮದಾಸನು:—"ನಾನು ಒಂದು ಕೆಲಸಕ್ಕಾಗಿ ಈಗಲೆ ಹೊರಡಬೇಕಾಗಿದೆ. ಮೇಣೆಯನ್ನು ತರಿಸಿರಿ." ಎಂದು ಉದಾಜಿಗೆ ಹೇಳಿದನು.

ಉದಾಜಿಯು ಮೇಣೆಯನ್ನು ತರಿಸಿದನು; ಹಾಗು ನಾಲ್ಕು ಜನ ಸೇವಕರನ್ನು ಮೇಣೆಯ ಸಂರಕ್ಷಣೆಗೆ ಕಳಿಸಿದನು ಕೂಡಲೆ ರಾಮದಾಸನು ಮೇಣೆಯಲ್ಲಿ ಕುಳಿತು ಬಹೇಬೋರಗಾವಂದ ಕಡೆಗೆ ಪ್ರಯಣ ಮಾಡಿದನು.



## ಚದುರೆಯ ಬಂಧನೆ.

—:○:—

ಚದುರೆಯೂ ಬೈರಾಗಿಯೂ ನದಿಯಲ್ಲಿ ಮುಳಗಿದ ಮೇಲೆ ನೌಕೆಯ ಹಿಂದೆ ತೇಲುತ್ತ ಬರುತ್ತಿದ್ದ ಮಹಾವೃಕ್ಷವು ಮೇಲೆ ಹಾಯ್ದು ಮುಂದೆ ಸಾಗಿತು. ಅನಂತರ ಸ್ವಲ್ಪ ಹೊತ್ತಿನ ಮೇಲೆ ಬೈರಾಗಿಯು ನೀರ ಮೇಲೆ ಕಾಣಹತ್ತಿದನು. ಅವನು ಕೃಷ್ಣೆಯ ಮಹಾಪ್ರವಾಹದಲ್ಲಿ ಈಸುತ್ತ ಈಸುತ್ತ ದಂಡೆಯನ್ನು ತಲುಪಿದನು ದಂಡೆಗೆ ಬಂದ ಮೇಲೆ ಅವನು ಕೆಲವು ವೇಳೆಯವರೆಗೆ ಅಲ್ಲಿಯೇ ನಿಂತು, ಚದುರೆಯ ಮಾರ್ಗಪ್ರತೀಕ್ಷೆ ಮಾಡಿದನು. ನದೀತೀರದಲ್ಲಿ ಮನುಷ್ಯರ ಸುಳಿವು ಕಾಣದ್ದರಿಂದ ಅವನು ನಿರಾಶೆಗೊಂಡು ನರಸಿಂಹನ ದೇವಾಲಯದ ಕಡೆಗೆ ಸಾಗಿದನು. ದೇವಾಲಯುವನ್ನು ತಲುಪಿದ ಮೇಲೆ ಅವನು:—"ಅವ್ವಾ, ಅವ್ವಾ!'' ಎಂದು ಕೂಗಿದನು ಉತ್ತರಬಾರದ್ದರಿಂದ :—"ಸಟವಾಜಿ ಸಟವಾಜಿ!'' ಎಂದು ಕೂಗಿದನು, ಉತ್ತರಬರಲಿಲ್ಲ. ಎಲ್ಲ ಕಡೆಗೂ ಸ್ತಬ್ಧತೆಯು ನೆಲೆಗೊಂಡಿತ್ತು. ಅಂದು ದೇವಾಲಯದಲ್ಲಿ ಒಂದು ಹುಳುವು ಕೂಡ ಇದ್ದಿಲ್ಲ. ಅಲ್ಲಿಯ ಸ್ಥಿತಿಯನ್ನು ನೋಡಿ ಅವನಿಗೆ ಬಹಳೇ ಆಶ್ಚರ್ಯವಾಯಿತು ಅವನು ದೇವಾಲಯದ ಗವಿಯಲ್ಲಿಯೂ, ಗರ್ಭಾಗಾರದಲ್ಲಿಯೂ ನೋಡಿದನು; ಅಲ್ಲಿಯೂ ಯಾರೂ ಕಾಣಲಿಲ್ಲ. ತಾಯಿಯೂ ಮಗನೂ ಮಹಾಪ್ರವಾಹದಲ್ಲಿ ತೇಲಿಹೋಗಿರಬಹುದೇನು? ಎಂಬ ವಿಚಾರವು ಅವನಲ್ಲಿ ಹುಟ್ಟಿತು. ಅನಂತರದಲ್ಲಿ ಅವನು ನದಿಯ ಕಡೆಗೆ ಸಾಗಿದನು. ಆಕಾಶವು ನಿರಭ್ರವಾದುದರಿಂದ ಚಂದ್ರಿಕೆಯ ಪ್ರಕಾಶವು ನಿಚ್ಚಳವಾಗಿ ಬಿದ್ದಿತ್ತು. ಆ ಪ್ರಕಾಶದಲ್ಲಿ ಒಂದು ಶವವು ಅವನ ದೃಷ್ಟಿಗೆ ಬಿತ್ತು. ಕೂಡಲೆ ಅವನು ಧಾವಿಸಿ ಹೋದನು. ನೆಲದ ಮೇಲೆ ಅಸ್ತವ್ಯಸ್ತವಾಗಿ ಬಿದ್ದ ಶವವು ಯಾರದೆಂಬದನ್ನು ಅವನು ನಿರೀಕ್ಷಿಸತೊಡಗಿದನು. ಆ ಶವದ ರುಂಡವು ಸಿಡಿದು ದೂರ ಬಿದ್ದಿತ್ತು. ಬೈರಾಗಿಯು ಅದನ್ನು ಕೈಯಲ್ಲಿ ತೆಗೆದುಕೊಂಡು ನೋಡಿದನು. ಅದು ತನ್ನ ತಾಯಿಯದೇ ಎಂಬದನ್ನು ಅವನು ಗುರುತಿಸಿದನು. ಕೂಡಲೆ ಅವನು:—"ಅವ್ವಾ, ಅವ್ವಾ!'' ಎಂದು ರೋದಿಸತೊಡಗಿದನು. ಅಷ್ಟರಲ್ಲಿ ಉದಾಜಿಯ ಜನರು ಅಲ್ಲಿಗೆ ಬಂದು ಅವನ ಮೇಲೆ ಬಿದ್ದರು. ಬೈರಾಗಿಯ ಬಳಿಯಲ್ಲಿ ಒಂದು ಸಣ್ಣ ಕಠಾರಿಯು ಮಾತ್ರ ಇತ್ತು. ಉದಾಜಿಯ ಮರಾಟರು ಖಡ್ಗಪಾಣಿಗಳಾಗಿದ್ದರು. ಕೆಲವು ವೇಳೆಯವರೆಗೆ ಉಭಯತರಲ್ಲಿ ಹೊಡೆದಾಟವು ನಡೆಯಿತು. ಆ ಹೊಡೆದಾಟದಲ್ಲಿ ಮರಾಟರು ತೆಗೆದ ಉದ್ಗಾರದಿಂದ ಅವರು ಯಾರೆಂಬದೂ ಯಾಕೆ

ಬಂದಿರುವರೆಂಬದೂ ಬೈರಾಗಿಗೆ ತಿಳಿಯಿತು. ಆಗ ಅವನು ಮರಾಟರನ್ನು ಕುರಿತು:—"ನೀವು ಒಯ್ದ ಬಾಲಕನು ರಾಜಪುತ್ರನಲ್ಲ. ಹಾಗು ನೀವು ತಿಳಿದುಕೊಂಡ ರಜಪುತನು ನಾನಲ್ಲ.'' ಎಂದು ಬಹುಪರಿಯಾಗಿ ಹೇಳಿದನು; ಆದರೆ ಮರಾಟರಿಗೆ ಬೈರಾಗಿಯ ಮಾತಿನಲ್ಲಿ ವಿಶ್ವಾಸ ಹುಟ್ಟಲಿಲ್ಲ. ಅವರು ಬೈರಾಗಿಯನ್ನು ಸಂಹರಿಸಬೇಕೆಂದು ಸಂಕಲ್ಪಮಾಡಿಕೊಂಡಿದ್ದರು. ಬೈರಾಗಿ ಹಾಗು ಮರಾಟರು ಇವರ ನಡುವೆ ಹೊಡೆದಾಟವು ಬಹಳ ವೇಳೆ ನಡೆಯಿತು. ಒಬ್ಬನೇ ನಾಲ್ಕೈದು ಜನರೊಡನೆ ಕಾದುವದು ಬೈರಾಗಿಗೆ ಅಸಾಧ್ಯವಾಗ ತೊಡಗಿತು. ಮೊದಲೇ ಅವನು ನದಿಯಲ್ಲಿ ಈಸಿ ಈಸಿ ದಣಿದಿದ್ದನು. ಬಳಿಯಲ್ಲಿ ಹೇಳಿಕೊಳ್ಳುವಂಥ ಶಸ್ತ್ರವೂ ಇದ್ದಿಲ್ಲ ಹೀಗಾಗಿ ಅವನು ಬಹಳೇ ಪೇಚಾಟದಲ್ಲಿ ಬಿದ್ದನು. ಈ ಎಲ್ಲ ಅನರ್ಥಕ್ಕೆ ಕಾರಣನು ರಾಮದಾಸನೇ ಎಂಬದು ಬೈರಾಗಿಗೆ ತಿಳಿದುದರಿಂದ, ಅವನು ಸಂತಪ್ತನಾದನು; ಆದರೆ ಅವನ ಸಂತಾಪದಿಂದ ಯಾವ ಪ್ರಯೋಜನವೂ ಆಗುವಂತಿದ್ದಿಲ್ಲ. ಮರಾಟಿಗರು ಬೈರಾಗಿಯ ಮುಖದಿಂದ ರಜಪುತಸ್ತ್ರೀಯ-ರಾಜಪುತ್ರನ ಪಾಲಕಳ-ಇರವನ್ನು ತಿಳಕೊಳ್ಳಲಿಕ್ಕೆ ಬಹಳವಾಗಿ ಯತ್ನಿಸಿದರು. ಅವರ ಪ್ರಶ್ನೆಗೆ ಉತ್ತರ ಕೊಡುವದು ಬೈರಾಗಿಯಿಂದ ಹೇಗಾಗಬೇಕು? ತಮಗೆ ಬೇಕಾದ ಗೊತ್ತುವಳಿಯನ್ನು ಹೇಳಿಕೊಡದ್ದರಿಂದ ಮರಾಟಿಗರು ರುಷ್ಟರಾಗಿ, ಬೈರಾಗಿಯ ಮೇಲೆ ಬಲವಾಗಿ ದಾಳಿಮಾಡಿ, ಅವನನ್ನು ಗಾಯಗೊಳಿಸಿ ನೆಲಕ್ಕೆ ಕೆಡಹಿದರು. ಅನಂತರದಲ್ಲಿ ಮರಾಟಿಗರು:—"ಏನೋ ಗುಲಾಮಾ! ಸಾಯುವ ಕಾಲಕ್ಕಾದರೂ ನಿನ್ನ ಹೆಂಡತಿಯ ಇರವನ್ನು ತಿಳಿಸು!" ಎಂದು ಕೇಳಿದರು. "ಗೊತ್ತಿಲ್ಲದ ಸಂಗತಿಯ ಬಗ್ಗೆ ವಿಚಾರಿಸಿದರೆ ಏನು ಹೇಳಲಿ?" ಎಂದು ಬೈರಾಗಿಯು ಕ್ಷೀಣಕಂಠದಿಂದ ನುಡಿದನು. ಕೂಡಲೆ ಒಬ್ಬ ಕ್ರೂರನು ಅವನ ಮೇಲೆ ಖಡ್ಗಪ್ರಹಾರ ಮಾಡಿದನು. ಅಷ್ಟರಲ್ಲಿ ಹುಲಿಯ ಗರ್ಜನೆಯಾದ್ದರಿಂದ ಕೊಲೆಗಡಕರು ಅಂಜಿ, ಅಲ್ಲಿಂದ ನೌಕೆಯ ಕಡೆಗೆ ಓಡಿದರು.

ಖಡ್ಗಾಘಾತದಿಂದ ಬೈರಾಗಿಗೆ ಪ್ರಾಣಾಂತಿಕವಾದ ಗಾಯಗಳಾಗಿದ್ದವು. ಅಂಥ ಸ್ಥಿತಿಯಲ್ಲಿಯೆ ಅವನು ದೇವಾಲಯದ ವರೆಗೆ ಹೋಗಿ ನರಳುತ್ತ ಬಿದ್ದುಕೊಂಡನು. ಅವನು ಹೇಗಾದರೂ ಮಾಡಿ ಆ ರಾತ್ರಿಯನ್ನು ಕಳೆದನು ಸೂರ್ಯೋದಯ ಸಮಯಕ್ಕೆ ಚದುರೆಯು ಇಬ್ಬರು ಸಂಗಡಿಗರೊಡನೆ ಅಲ್ಲಿಗೆ ಬಂದಳು. ನದಿಯಲ್ಲಿ ಈಸುತ್ತ, ತೇಲುತ್ತ, ಮುಳುಗುತ್ತ, ಕಲ್ಲು ಬಂಡೆಗಳಿಗೆ ಅಪ್ಪಳಿಸುತ್ತ ಹೇಗಾದರೂ ದಂಡೆಯನ್ನು ತಲುಪಿದ ಚದುರೆಯ ಅವಸ್ಥೆಯಾದರೂ ಚಿಂತಾಜನಕವಾಗಿತ್ತು. ಮೊದಲು ಬೈರಾಗಿಗೆ ಅವಳ ಗುರುತೇ

ಹತ್ತಲಿಲ್ಲ. ಅನೇಕ ಗಾಯಗಳಿಂದ ಜರ್ಜರಿತನಾದ ಬೈರಾಗಿಯ ಗುರುತನ್ನಾದರೂ ಚದುರೆಯು ಒಮ್ಮೆಲೆ ಹಿಡಿಯಲಿಲ್ಲ. ಪರಸ್ಪರರು ಪರಸ್ಪರರ ಹೆಸರು ಹೇಳಿದ ಮೇಲೆಯೇ ಪರಿಚಯವಾಯಿತು. ಅನಂತರದಲ್ಲಿ ಬೈರಾಗಿಯು:—"ಚದುರೆ! ನೀನು ಹೇಗೆ ಉಳಿದೆ?'' ಎಂದು ಕೇಳಿದನು.

''ಈಸುವದರಲ್ಲಿ ಪ್ರವೀಣಳಾದ ನನ್ನ ಶಕ್ತಿಯು ನಿಂತುಹೋಗಿತ್ತು. ಈ ಜನರೇ ನನ್ನನ್ನು ಉಳಿಸಿವರು'' ಎಂದು ಚದುರೆಯು ತನ್ನ ಜೊತೆಯಲ್ಲಿದ್ದ ಇಬ್ಬರನ್ನು ತೋರಿಸಿದಳು

''ಇವರು ನನ್ನ ಶಿಷ್ಯರು' ಎಂದು ಬೈರಾಗಿಯು ನುಡಿದು, ತನ್ನ ಅವಸ್ಥೆಯನ್ನು ಈ ಪರಿಯಾಗಿ ಮಾಡಿಸಿದ ರಾಮದಾಸನ ದುಷ್ಕೃತ್ಯಗಳನ್ನೆಲ್ಲ ಸವಿಸ್ತರವಾಗಿ ಹೇಳಿದನು

''ಅಯ್ಯೋ! ರಾಮದಾಸನು ನನ್ನ ಮಗನಾದ ಸಟವಾಜಿಯನ್ನು ಕೊಲ್ಲಿಸುವನೆ! ಸಟವಾಜಿ, ಸಟವಾಜಿ!'' ಎಂದು ಚದುರೆಯು ಪ್ರಳಾಪಿಸತೊಡಗಿದಳು.

ಒಂದು ವೇಳೆ ಇಷ್ಟೊತ್ತಿಗೆ ನಿನ್ನ ಸಟವಾಜಿಯು ಇಹಲೋಕವನ್ನು ಬಿಟ್ಟಿದ್ದರೂ ಬಿಟ್ಟಿರಬಹುದು." ಎಂದು ಬೈರಾಗಿಯು ನುಡಿದು, ದೀರ್ಘವಾಗಿ ನಿಟ್ಟುಸಿರುಗರೆದನು.

ಚದುರೆಯ ರೋದನವು ನಡೆದೇ ಇತ್ತು. ಆಗ ಬೈರಾಗಿಯು ಕ್ಷೀಣ ಕಂಠದಿಂದ.—"ಚದುರೆ! ಇಲ್ಲಿ ಬಾ; ಕುಳಿತುಕೋ. ನೀನು ಮಾಡಿದ ಪ್ರತಿಜ್ಞೆಯು ನೆನಪಿರುವದಲ್ಲವೆ? ಅದನ್ನು ಪೂರೈಸುವದಕ್ಕಾಗಿ ಹೆಣಗು. ಮಿಂಚಿ ಹೋದ ಕೆಲಸಕ್ಕಾಗಿ ಚಿಂತಿಸಿ ಫಲವೇನು?"

''ನಾನು ಜೀವದಿಂದಿರುವ ವರೆಗೆ ಸಂಕಲ್ಪಚ್ಯುತಳಾಗುವದಿಲ್ಲ."

''ಆನಂದವಾಯಿತು; ಮರಣಪ್ರಾಯವಾದ ವೇದನೆಯಲ್ಲಿಯೂ, ಪ್ರಾಣಾಂತಿಕ ದುಃಖದಲ್ಲಿಯೂ ಆನಂದವಾಯಿತು. ನನಗೆ ಬಲವಾದ ಗಾಯಗಳಾಗಿರುವದರಿಂದ ನಾನು ಇನ್ನು ಬಹಳ ವೇಳೆ ಬದುಕುವದಿಲ್ಲ. ರಾಣಿಯೂ, ರಾಜನೂ, ರಾಮದಾಸನೂ, ಉದಾಜಿಯೂ ನನ್ನ ವಂಶವನ್ನೇ ಉಚ್ಛೇದಗೊಳಿಸುವದಕ್ಕಾಗಿ ಬದ್ಧಕಂಕಣರಾಗಿ, ಕಾರಸ್ಥಾನ ರಚಿಸಿ, ತಮ್ಮ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಂಡರು. ನೀನು ಅವರ ಈ ಅತ್ಯಾಚಾರದ ಸೇಡು ತೀರಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದರೆ, ನಾನು ಸ್ವರ್ಗದಲ್ಲಿ ಆನಂದ ಪಡುವೆನು.'' ಎಂದು ಬೈರಾಗಿಯು ಮಾತಾಡುತ್ತಿರಲು, ಅವನ ಬಾಯಿಂದ ರಕ್ತವು ಹೊರಬಿದ್ದಿತು. ಚದುರೆಯು ತನ್ನ ಬೊಗಸೆಯಲ್ಲಿ ಅದನ್ನು ತೆಗೆದು

ಕೊಂಡು ಚಲ್ಲಿ:—"ಇನ್ನು ನೀವು ಬಹಳ ಮಾತಾಡಬೇಡಿರಿ." ಎಂದು ಹೇಳಿದಳು

"ಹೆಚ್ಚು ಮಾತಾಡಿದರೇನು, ಕಡಿಮೆ ಮಾತಾಡಿದರೇನು? ನನ್ನ ಆಯುಷ್ಯವೇ ಮುಗಿಯುತ್ತ ಬಂದಿದೆ." ಎಂದು ಬೈರಾಗಿಯು ನುಡಿದು, ಚದುರೆಯ ಕೈಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡು:-"ಚದುರೆ! ನೀನು ನನ್ನನ್ನು ಗುರುತಿಸಿರುವೆಯೇನು?"

"ನೀವು ಬೈರಾಗಿಗಳೆಂಬದನ್ನಷ್ಟು ಬಲ್ಲೆನು"

"ನಾನು ನಿಜವಾದ ಬೈರಾಗಿಯಲ್ಲ. ನಾನೇ ನಿನ್ನ ಪತಿಯಾದ ಕೃಷ್ಣಾಜಿಯು ಪಟವಾಜಿಯೇ ನಮ್ಮ ಮಗನು. ನೀನು ಕೊಲೆಗಡಕರನ್ನು ನನ್ನ ಮೇಲೆ ಕಳುಹಿಸಿದ್ದೆಯಷ್ಟೆ? ನನ್ನ ಆಯುಷ್ಯತಂತುವು ಆಗ ಗಟ್ಟಿಯಾಗಿದ್ದುದರಿಂದ ಬದುಕಿದೆನು. ನೀನು ನಿನ್ನ ತಂದೆ-ತಾಯಿಗಳ ಬಳಿಯಲ್ಲಿ ಬಿಟ್ಟ ಪಟವಾಜಿಯನ್ನು ನಾನು ಕರೆದುಕೊಂಡು, ತಾಯಿಯೊಡನೆ ಅತ್ತಿತ್ತ ತಿರುಗತೊಡಗಿದೆನು. ಕೆಲವು ದಿವಸಗಳಿಂದೀಚೆಗೆ ನಾವೆಲ್ಲರು ಈ ದೇವಾಲಯದಲ್ಲಿ ವಾಸಿಸಹತ್ತಿದೆವು. ನೀನು ದುರ್ಮಾರ್ಗಪ್ರವೃತ್ತಳಾದಾಗಿನಿಂದ ನಾನು ಎಷ್ಟು ಬಗೆಯ ಗಂಡಾಂತರಗಳನ್ನು ಭೋಗಿಸಿದೆನೆಂಬದನ್ನು ಹೇಳುವಷ್ಟು ಅವಕಾಶವಿಲ್ಲ. ನಾನು ನಿನ್ನನ್ನು ದ್ವೇಷಿಸುತ್ತಿದ್ದುದು ನಿನ್ನ ದುರ್ಗುಣಕ್ಕಾಗಿ. ಈಗ ನಿನ್ನ ಸ್ವಭಾವವು ಸುಧಾರಿಸಿರುವದೆಂದು ನನಗೆ ನಂಬಿಗೆಯಾಗತೊಡಗಿದ್ದರಿಂದ ನಿನ್ನ ವಧೆ ಮಾಡಲಿಲ್ಲ. ನಾನು ಒಂದು ಕಟ್ಟಳೆಯಿಂದ ನಿನ್ನನ್ನು ಕ್ಷಮಿಸಿರುವೆನು. ನನ್ನ ಹಾಗು ನಿನ್ನ ಸಂಬಂಧವನ್ನು ತಪ್ಪಿಸಿ, ನಮ್ಮಿಬ್ಬರ ಸಂಸಾರವನ್ನು ಹಾಳುಮಾಡಿ, ನಮ್ಮ ವಂಶಾಂಕುರವನ್ನು ಚಿವುಟಿದ ಶತ್ರುಗಳನ್ನು ವಿಧ್ವಂಸಗೊಳಿಸಬೇಕೆಂಬ ಕಟ್ಟಳೆಯಿಂದಲೇ ನಾನು ನಿನಗೆ ಕ್ಷಮಾದಾನ ಮಾಡಿರುವೆನು. ನಾನು ಬದುಕಿದ್ದರೆ ಪ್ರತಿಜ್ಞೆಯನ್ನು ಪೂರೈಸಿಕೊಂಡು ಸುದಿನವನ್ನು ಕಾಣುತ್ತಿದ್ದೆವು; ಆದರೆ ಅಂಥ ಸುದೈವವು ನಮ್ಮದಿಲ್ಲ. ಅದೆಲ್ಲ ಇರಲಿ. ನನ್ನ ಆಯುಷ್ಯವು ಕೆಲವು ಕ್ಷಣಗಳಲ್ಲಿ ಮುಗಿಯುವ ಚಿಹ್ನವಿದೆ. ನೀನು ನನ್ನ ಅಂತಿಮ ಇಚ್ಛೆಯನ್ನು ಈಡೇರಿಸುವ ಬಗ್ಗೆ ವಚನಕೊಟ್ಟರೆ ಸಂತೋಷದಿಂದ ಮರಣ ಹೊಂದುವೆನು. ನೀನು ಕುಲಕಲಂಕಿನಿಯಾಗಿದ್ದರೂ ಪಶ್ಚಾತ್ತಾಪ ಪುನೀತಳಾಗಿರುವೆ. ಧರ್ಮಪತ್ನಿಯಿರುವೆ. ನಿನ್ನ ಭಾವೀ ಆಯುಷ್ಯದ ಧ್ಯೇಯವು ನನ್ನ ಮನಸ್ಸನ್ನು ಸಂತುಷ್ಟಗೊಳಿಸಬಹುದೆಂದು ನಂಬಿರುವೆನು"

ಈ ಭಾಷಣವನ್ನು ಕೇಳಿ ಚದುರೆಯು ಶಿಲಾಪ್ರತಿಮೆಯಂತೆ ಕುಳಿ

ತಳು. ಹರ್ಷ, ದುಃಖ, ವಿಸ್ಮಯ, ಅನುತಾಪ ಮೊದಲಾದ ಅನೇಕ ಭಾವನೆಗಳು ಅವಳಲ್ಲಿ ಉದ್ಭವಿಸಿ ಲಯಹೊಂದತೊಡಗಿದ್ದವು ಅವಳ ಕಣ್ಣುಗಳಿಂದ ಜಲಧಾರೆಗಳು ಅಖಂಡವಾಗಿ ಸುರಿಯಹತ್ತಿದವು. ಅವಳು ಪತಿಯನ್ನು ಕಣ್ಣುತುಂಬಾ ನೋಡತೊಡಗಿದ್ದಳು. ಗತಾಯುಷ್ಯದೊಳಗಿನ ಸಂಗತಿಗಳ ಪ್ರತಿಬಿಂಬಗಳು ಒಂದೊಂದೇ ಆಗಿ ಬಂದು ಅವಳ ಸಮ್ಮುಖದಲ್ಲಿ ನಿಂತವು. ಚದುರೆ-ಕೃಷ್ಣಾಜಿ ಜಗದಳೆಯರ ಸಂಸಾರವಿಚ್ಛೇದವಾಗಿ ಎಷ್ಟೋ ದಿನಗಳು ಗತಿಸಿದ್ದರೂ, ವಿವಾಹಕಾಲದ ಹಾಗು ಅನಂತರದಲ್ಲಿಯ ಸಂಸಾರದ ಸ್ಮೃತಿಯು ಅವಳ ಸ್ಮೃತಿಪಟಲದಲ್ಲಿ ದೇವಧರ್ಮಗಳ ಸಾಕ್ಷಿಯಿಂದ ಮೂಡಿದ್ದುದರಿಂದ, ಮುಂದಿನ ವಿಪರೀತ ಕಾಲದ ಆಘಾತದಿಂದ ಹೇಗೆ ನಷ್ಟವಾಗಬೇಕು? ಕರ್ಹಾಡದ ಬಳಿಯ ಪ್ರೀತಿಸಂಗಮದಲ್ಲಿ ಬೈರಾಗಿಯು ಭೆಟ್ಟಿಯಾದಾಗಿನಿಂದ ಅವಳಲ್ಲಿ ಅವನ ವಿಷಯವಾಗಿ ಸ್ವಕೀಯ ಭಾವನೆಯು ಹುಟ್ಟಿತ್ತು. ನಾಕೆಯಲ್ಲ ತೂ ಆ ಭಾವನೆಯು ಮತ್ತಿಷ್ಟು ಜಾಗೃತವಾಯಿತು. ಒಮ್ಮೊಮ್ಮೆ ಅವಳ ಮನಸ್ಸಿನಲ್ಲಿ ಬೈರಾಗಿಯು ತನ್ನ ಪತಿಯಾಗಿರಬಹುದೆಂಬ ಕಲ್ಪನೆಯು ಸಹ ಹುಟ್ಟುತ್ತಿತ್ತು; ಆದರೆ ಕೊಲೆಗಡಕರಿಂದ ಕೊಲ್ಲಿಸಿದ ಮೇಲೆ, ಅವನು ಹೇಗೆ ಜೀವಂತವಾಗಿ ಬರುವನೆಂಬ ವಿಚಾರವು ಅವಳಲ್ಲಿ ಹುಟ್ಟಿದ ಕೂಡಲೆ ಮೊದಲಿನ ಕಲ್ಪನೆಯು ನಷ್ಟವಾಗುತ್ತಿತ್ತು. ಬೈರಾಗಿಯು ನದಿಯಲ್ಲಿ ಈಸುತ್ತ ನರಸಿಂಹಪುರಕ್ಕೆ ಬಂದಮೇಲೆ ಅಲ್ಲಿಯ ತನ್ನ ಪರಿಚಯದ ಜನರನ್ನು ಕಂಡು, ತನ್ನ ನವಪರಿಣೀತ ವಧುವು ನದಿಯಲ್ಲಿ ಈಸುತ್ತ ಬರುತ್ತಿರುವಳೆಂದೂ ಅವಳಿಗೆ ನೇರವಾಗಿ ದಂಡೆಗೆ ತಲುಪಿಸಬೇಕೆಂದೂ ಹೇಳಿದ್ದನು. ಅವನ ಹೇಳಿಕೆಯ ಮೇರೆಗೆ ಕೆಲವು ಜನರು ದಂಡೆಯಲ್ಲಿ ಕಾಯುತ್ತ ಕುಳಿತು, ಚದುರೆಯು ಪ್ರವಾಹದ ಕೂಡ ಬರುತ್ತಿರುವದನ್ನು ನೋಡಿದ ಕೂಡಲೆ ಅವಳನ್ನು ದಂಡೆಗೆ ತಂದರು.

ಚದುರೆಯು ದೇಹದಿಂದ ಎಷ್ಟು ಪತಿತಳಾಗಿದ್ದಳೋ, ಅಷ್ಟು ಮನಸ್ಸಿನಿಂದ ಆಗಿರಲಿಲ್ಲ. ಎಷ್ಟಾದರೂ ಅವಳು ಆರ್ಯಲಲನೆಯಾಗಿದ್ದಳು. ಪತಿಯ ಸೌಜನ್ಯತೆಯು ಅವಳಿಗೆ ದೃಗ್ಗೋಚರವಾದ ಕೂಡಲೆ, ತನ್ನಿಂದ ಎಂತಹ ದುಷ್ಕೃತ್ಯವು ಘಟಿಸಿತಲ್ಲ! ಎಂದು ಅವಳು ಪಶ್ಚಾತ್ತಾಪ ಬಡತೊಡಗಿದಳು. ಬೈರಾಗಿಯೆ ತನ್ನ ಪತಿಯೆಂಬದು ಗೊತ್ತಾದ ಕೂಡಲೆ, ಅವಳ ಆಶ್ಚರ್ಯಕ್ಕೆ ಪಾರವೇ ಇಲ್ಲದಾಗಿ, ಅವಳು ಶಿಲಾಪ್ರತಿಮೆಯಂತೆ ಕುಳಿತುಬಿಟ್ಟಳು! ಅವಳು ತನ್ನ ಮಾತಿಗೆ ಉತ್ತರ ಕೊಡದ್ದನ್ನು ನೋಡಿ ಕೃಷ್ಣಾಜಿಯು:—"ಚದುರೆ! ನೀನು ಇಷ್ಟೇಕೆ ಗೊಂದಲದಲ್ಲಿ ಬಿದ್ದಿರುತ್ತೀ? ನೀನು ಇಂದಿನವರೆಗೆ ದುಷ್ಕೃತಿ

ಯಿಂದ ಮಾಡಿದ ಪಾಪಸಂಚಯವನ್ನು ಪರಿಮಾರ್ಜನೆಗೊಳಿಸಲಿಕ್ಕೆ ಮನಸ್ಸು ಮಾಡಿರುವೆಯಾ? ಇಡೀ ಆಯುಷ್ಯದಲ್ಲಿಲ್ಲದಿದ್ದರೆ ಅಷ್ಟೇ ಹೋಯಿತು; ಆಯುಷ್ಯದ ಕೊನೆಯ ಕ್ಷಣದಲ್ಲಾದರೂ ನನಗೆ ಶಾಂತಿದೊರೆಯುವಂತೆ ಮಾಡುವೆಯಾ?"

ಪತಿಯ ಮಾತುಗಳಿಂದ ಚದುರೆಯ ಕಂಠವು ಸದ್ಗದಿತವಾಯಿತು ಅವಳು ಪತಿಯ ಹೃದಯದ ಮೇಲೆ ಮಸ್ತಕವಿರಿಸಿ ದುಃಖಿಸುತ್ತ:—"ನಿಮ್ಮ ಅಪ್ಪಣೆಯು ಶಿರಸಾಮಾನ್ಯವಿರುವದು. ನಿಮ್ಮ ಹೇಳಿಕೆಯಂತೆ ನಾನು ನಿಶ್ಚಯವಾಗಿಯೂ ಆಚರಣೆಯಿಡುವೆನು."

"ಹಾಗಾದರೆ ನನ್ನ ಕೈ ಮೇಲೆ ಕೈ ಹಾಕು. ನನ್ನ ಆಶೀರ್ವಾದವನ್ನು ಪಡೆ. ನನ್ನ ಆಶೀರ್ವಾದವೆಂದು ತೆಗೆದುಕೊಳ್ಳದಿದ್ದರೂ, ಆರ್ಯಲಲನೆಯೆನಿಸಿಕೊಳ್ಳಲಿರುವ ನೀನು ಪತಿದೇವನ ಆಶೀರ್ವಾದವೆಂದಾದರೂ ಸ್ವೀಕರಿಸು. ಪತಿಯ ಪುಣ್ಯಕ್ಕೆ ಪತ್ನಿಯು ಪಾಲುಗಾರಳು; ಪತ್ನಿಯ ಪಾಪಕ್ಕೆ ಪತಿಯು ಪಾಲುಗಾರನು ನಾನು ನನ್ನ ಪುಣ್ಯವನ್ನು ನಿನಗೆ ಕೊಟ್ಟು ನಿನ್ನನ್ನು ದೋಷಮುಕ್ತಳನ್ನಾಗಿ ಮಾಡಬೇಕೆಂದು ಪರಮಾತ್ಮನಲ್ಲಿ ಬೇಡಿಕೊಳ್ಳುವದಕ್ಕೆ ಅಮರಧಾಮಕ್ಕೆ ತೆರಳುವೆನು, ಆದರೆ ಚದುರೇ, ನೀನು ನನ್ನ ಅಂತಿಮ ಇಚ್ಛೆಯನ್ನು ಮಾತ್ರ ಪೂರ್ಣಗೊಳಿಸಲಿಕ್ಕೆ ಹೆಣಗಬೇಕು."

"ನಿಮ್ಮ ಇಚ್ಛೆಯನ್ನು ನಿಮ್ಮ ಚರಣಸಾಕ್ಷಿಯಾಗಿಯೂ ಈಡೇರಿಸುವೆನು. ನಾನು ಕುಲಕಲಂಕಿನಿಯು, ಮಹಾಪಾತಕಿಯು. ಈ ಪತಿತಳನ್ನು ಕ್ಷಮಿಸಿರಿ!" ಎಂದು ನುಡಿದು, ಚದುರೆಯು ಅತಿಯಾಗಿ ರೋದಿಸುತ್ತ ಪತಿಯ ಕೈಮೇಲೆ ಕೈಹಾಕಿದಳು.

"ಪ್ರಿಯೆ! ಸಂತೋಷವಾಯಿತು. ನಾನು ನಿನ್ನನ್ನು ಕ್ಷಮಿಸಿರುವೆನು. ಚದುರ! ಚದುರೆ! ಬರುತ್ತೇನೆ.... ."

ಕೃಷ್ಣಾಜಿಯ ನಾಲಿಗೆಯು ಸೆಳೆಯಿತು. ಕಣ್ಣುಗಳು ಒಳಸೇರಿದವು. ಸ್ವಲ್ಪ ವೇಳೆಯಲ್ಲಿ ಅವನ ಜೀವಜ್ಯೋತಿಯು ನೊಂದಿ ಹೋಯಿತು! ಚದುರೆಯು ಪತಿಯ ಶವದ ಮೇಲೆ ಬಿದ್ದು ಬಿದ್ದು ರೋದಿಸಹತ್ತಿದಳು. ಅವಳು ಆಗ ಹಾಡಿಕೊಂಡು ಬೋರಾಡಿ ಅಳುವದನ್ನು ಕೇಳಿದರೆ, ಕಲ್ಲೆದೆಯು ಕೂಡ ಕರಗುವಂತಿತ್ತು. ಕೃಷ್ಣಾಜಿಯು ಬೈರಾಗಿ ವೇಷದಲ್ಲಿದ್ದಾಗ ಸಂಪಾದಿಸಿದ ಶಿಷ್ಯರು ತಮ್ಮ ಗುರುವಿನ ಅಂತಿಮ ಇಚ್ಛೆಯನ್ನು ನೆರವೇರಿಸುವದಕ್ಕಾಗಿ ಚದುರೆಗೆ ಸಹಾಯ ಮಾಡುವ ಬಗ್ಗೆ ಆಶ್ವಾಸನೆಯಿತ್ತರು; ಆದರೆ ಆಗಿನ ಪರಿಸ್ಥಿತಿಯಲ್ಲಿ ಚದುರೆಗೆ ಇಹಲೋಕದ ವ್ಯಾಮೋಹವು ತಪ್ಪಿತು. ಪತಿ

ಮರಣದ ತರುವಾಯ ಜೀವಿಸಿರಲಾರೆನೆಂದು ಅವಳು ಖಂಡಿತವಾಗಿ ಹೇಳಿದಳು ಕೆಲವು ಕ್ಷಣಗಳ ಮುಂಚೆ ಪತಿಗೆ ಕೊಟ್ಟ ವಚನವು ಸಹ ದುಃಖಾವೇಗದಲ್ಲಿ ಅವಳಿಗೆ ವಿಸ್ಮೃತಿಯಾಗಿ ಹೋಯಿತು. ಸಹಗಮನದಂತಹ ಆತ್ಮಯಜ್ಞದಿಂದ ಪತಿತನಾರಿಯಾದ ತನ್ನ ಜನ್ಮವು ಉದ್ಧಾರವಾಗುವದೆಂಬ ಸದ್ಭಾವನೆಯು ಅವಳಲ್ಲಿ ಹುಟ್ಟಿತು ಜನರು ಆವಳನ್ನು ಈ ಪವಿತ್ರ ವಿಚಾರದಿಂದ ಪರಾವರ್ತನಗೊಳಿಸಲಿಕ್ಕೆ ಧೈರ್ಯಮಾಡಲಿಲ್ಲ. ಕೃಷ್ಣಾಜಿಯ ಹಾಗು ಕಾವೇರಮ್ಮನ ಶವ ಸಂಸ್ಕಾರದ ಹಾಗು ಚದುರೆಯ ಸಹಗಮನದ ಸಿದ್ಧತೆಯು ಭರದಿಂದ ನಡೆಯಿತು.

ಊರ ಜನರ ನೆರವಿದ್ದುದರಿಂದ ಚದುರೆಯ ಸಹಗಮನ ಸಿದ್ಧತೆಯಾಗಲಿಕ್ಕೆ ಬಹಳ ವೇಳ ಹಿಡಿಯಲಿಲ್ಲ. ಗುರುಪತ್ನಿಯ ಸಹಗಮನವನ್ನು ನೋಡಲಿಕ್ಕೆ ಊರೊಳಗಿನ ಎಷ್ಟೋ ಜನ ಸ್ತ್ರೀ ಪುರುಷರು ನದೀತೀರದಲ್ಲಿ ನೆರೆದರು. ಸುವಾಸಿನಿಯರು ಚದುರೆಯನ್ನು ಎರೆದು, ಪೀತವಸ್ತ್ರವನ್ನು ಉಡಲಿಕ್ಕೆ ಕೊಟ್ಟರು ಅನಂತರದಲ್ಲಿ ಅವಳಿಗೆ ಪಟ್ಟಿಕುಂಕುಮಹಚ್ಚಿ ಆರುತಿ ಮಾಡಿದರು. ಚದುರೆಯು ಸಹಗಮನಕ್ಕೆ ಸಿದ್ಧಳಾದಳು. ಮೊದಲು ಕಾವೇರಮ್ಮನ ಶವಕ್ಕೆ ಅಗ್ನಿಸಂಸ್ಕಾರವು ಮಾಡಲ್ಪಟ್ಟಿತು. ತರುವಾಯ ಕೃಷ್ಣಾಜಿಯ ಶವವನ್ನು ಚಿತೆಯ ಮೇಲಿರಿಸಿದರು. ಚದುರೆಯು ಚಿತೆಗೆ ಪ್ರದಕ್ಷಿಣೆ ಮಾಡಿದಳು. ಇನ್ನು ಮೇಲೆ ಅದರಲ್ಲಿ ಹಾರತಕ್ಕವಳು; ಅಷ್ಟರಲ್ಲಿ ಚವ್ಹಾಣನ ಸೈನಿಕರು ಅಲ್ಲಿಗೆ ಹಠಾತ್ತಾಗಿ ಬಂದು, ನೆರೆದ ಜನರನ್ನು ಚದರಿಸಿ, ಚದುರೆಯನ್ನು ಎತ್ತಿಕೊಂಡು ವಾಯುವೇಗದಿಂದ ಸಾಗಿದರು ಸಶಸ್ತ್ರ ಸೈನಿಕರ ಮುಂದೆ ಊರವರ ಆಟವೇನೂ ನಡೆಯುವಂತಿದ್ದಿಲ್ಲವಾದ್ದರಿಂದ ಅವರು ಆ ಸೈನಿಕರನ್ನು ದೂಷಿಸುತ್ತ ಸುಮ್ಮನೆ ನಿಂತುಕೊಂಡರು. ಗುರುಪತ್ನಿಯಾದ ಚದುರಾದೇವಿಯು ಉದಾಜಿ-ಸಂಭಾಜಿ ರಾಜರ ಸೆರೆಯಲ್ಲಿ ಪುನಃ ಸಿಲುಕಿದಳೆಂದು ನರಸಿಂಹಪುರದ ನಿವಾಸಿಗಳೆಲ್ಲರೂ ಹಳಹಳಿಸತೊಡಗಿದರು.

ಮುಂದೆ ಸ್ವಲ್ಪ ವೇಳೆಯಲ್ಲಿ ರಾಮದಾಸನು ಅಲ್ಲಿಗೆ ಬಂದನು. ಅವನಿಗೆ ಅಲ್ಲಿಯ ಸಮಾಚಾರವೆಲ್ಲವೂ ಜನರಿಂದ ತಿಳಿಯಿತು. ಅವನು ಕೃಷ್ಣಾಜಿಯ ಚಿತೆಯ ಬಳಿಯಲ್ಲಿ ನಿಂತು ರೋದಿಸತೊಡಗಿದನು. ತಮ್ಮ ಬೈರಾಗಿಯ ವೈರಿಯಾದ ರಾಮದಾಸನು ಹೀಗೇಕೆ ದುಃಖಿಸುತ್ತಿರುವನೆಂದು ಜನರು ಸೋಜಿಗಗೊಂಡರು. ರಾಮದಾಸನನ್ನು ಚಿತೆಯಲ್ಲಿ ಚಲ್ಲಿ ತಮ್ಮ ಸಂತಾಪವನ್ನು ಶಾಂತಪಡಿಸಿಕೊಳ್ಳಬೇಕೆಂದು ಹವಣಿಸಿದ್ದ ಜನರು ಈ ಕೃತ್ಯದಿಂದ ಹಿಂಜರಿದರು. ಅವರು ರಾಮದಾಸನಿಗೆ ಅಳುವ ಕಾರಣವನ್ನು ಕೇಳಿದರು.

ರಾಮದಾಸನು ಹೇಳಿದ ಉತ್ತರದಿಂದ ಜನರ ಮನಸ್ಸು ಅಷ್ಟೊಂದು ಸಮಾಧಾನ ಹೊಂದದಿದ್ದರೂ, ಅವನು ಮರಣ ದಂಡನೆಗೆ ಅರ್ಹನಲ್ಲವೆಂಬದು ಅವರಿಗೆ ತಿಳಿಯಿತು. ತಮ್ಮ ಗುರುವು ರಾಮದಾಸನ ಮೇಲೆ ನಿಷ್ಕಾರಣವಾಗಿ ದ್ವೇಷ ಮಾಡುತ್ತಿದ್ದನೆಂದು ಅವರ ತಿಳವಳಿಕೆಯಾಯಿತು. ಗುರುಪತ್ನಿಯಾದ ಚದುರಯನ್ನು ತೆಗೆದುಕೊಂಡು ಹೋದ ಕಾರಸ್ಥಾನದಲ್ಲಿ ರಾಮದಾಸನ ಅಂಗವಿಲ್ಲೆಂಬ ಬಗ್ಗೆ ಅವರಿಗೆ ನಂಬಿಗೆಯಾದ್ದರಿಂದ, ಅವರು ಅವನ ಕೂದಲಿಗೆ ಸಹ ದಕ್ಕೆ ಹಚ್ಚದೆ ಊರಿಗೆ ಹೋದರು ಈ ಅನರ್ಥಕ್ಕೆ ಸಂಭಾಜಿಯೂ ಉದಾಜಿ ಚವ್ಹಾಣನೂ ಕಾರಣರೆಂಬ ಬಗ್ಗೆ ಅವರಿಗೆ ರಾಮದಾಸನಿಂದ ತಿಳಿದಿತ್ತು. ಆದ್ದರಿಂದ ಅವರು ರಾಜನ ಹಾಗು ಚವ್ಹಾಣನ ಮೇಲಿನ ಸೇಡು ತೀರಿಸಿಕೊಂಡು, ಚದುರೆಯ ಬಂಧವಿಮೋಚನೆ ಮಾಡಿಸಬೇಕೆಂದು ನಿಶ್ಚಯಿಸಿದರು.

ಬೈರಾಗಿಯ ಹಾಗು ಚದುರೆಯ ಕಟ್ಟುನಿಟ್ಟಿನ ವೈರಿಯಾಗಿದ್ದ ರಾಮದಾಸನು ಈಗ ಕಲ್ಪನಾತೀತವಾದ ಶೋಕಸಾಗರದಲ್ಲಿ ಮುಳುಗಲಿಕ್ಕೆ ಕಾರಣವೇನಿರಬಹುದು? ಈ ಘಟನೆಯಲ್ಲಿ ಏನಾದರೂ ರಹಸ್ಯವಿರಬಹುದಲ್ಲವೆ?



# ಅಮಾನುಷ ಅತ್ಯಾಚಾರ!

ದೈವಹತಳಾದ ತಾರಾಬಾಯಿಯು ಪನ್ಹಾಳಗಡದ ವಾಡೆಯಲ್ಲಿ ಜಪ ಮಾಲೆಯನ್ನು ಹಿಡಿದು ಶ್ರೀರಾಮನಾಮೋಚ್ಚಾರಣೆ ಮಾಡುತ್ತಿದ್ದರೂ, ಅವಳ ಲಕ್ಷ್ಯವು ಭಗವಂತನ ಕಡೆಗಿದ್ದಿಲ್ಲ. ತನ್ನ ಮೊಮ್ಮಗನಾದ ರಾಮ ರಾಜನ ಶೋಧಕ್ಕಾಗಿ ಸಂಭಾಜಿಯು ಶಿರಾಳೆಗೆ ಹೋಗಿರುವನೆಂಬ ವಾರ್ತೆ ಯು ಗಾಳಿಯ ಸುಳುವಿನಿಂದ ಅವಳ ಕಿವಿಗೆ ತಲುಪಿದ್ದರಿಂದ ಚಿಂತಾಕ್ರಾಂತ ಳಾಗಿ, ನಿಜಸ್ಥಿತಿಯನ್ನು ಶೋಧಮಾಡಿಕೊಂಡು ಬರುವ ಬಗ್ಗೆ ಅವಳು ತನ್ನ ಕಾರಭಾರಿಯಾದ ಯಾದೋ ಗೋಪಾಳನನ್ನು ಬಾವಡೆಯಲ್ಲಿದ್ದ ಅಮಾತ್ಯ ಭಗವಂತರಾಯನ ಕಡೆಗೆ ಕಳುಹಿಸಿದ್ದಳು ಬಾವಡೆಯು ಪನ್ಹಾಳೆಯಿಂದ ಒಂದು ದಿನದ ದಾರಿಯಲ್ಲಿತ್ತು, ಆದರೆ ಯಾದೋ ಗೋಪಾಳನು ಅಲ್ಲಗೆ ಹೊಗಿ ಎಂಟು ದಿನಗಳಾಗಿದ್ದರೂ ಅವನ ವಾರ್ತೆಯೇ ತಿಳಿದಿದ್ದಿಲ್ಲ ಆದ್ದರಿಂದ ಅವಳು ಯೋಚನೆಗೊಳಗಾಗಿದ್ದಳು. ಸಂಭಾಜಿಯು ತನ್ನ ಮೊಮ್ಮಗನನ್ನು ನಿಜವಾಗಿಯೂ ಕೊಂದಿರಬಹುದೇನು? ಯಾದೋ ಗೋಪಾಳನೂ ಭಗವಂತ ರಾಯನೂ ಒಡೆದು, ಸಂಭಾಜಿಯ ಪಕ್ಷವನ್ನು ವಹಿಸಿರಬಹುದೇನು? ಮೊದ ಲಾದ ವಿಚಾರಗಳಿಂದ ಅವಳು ಕ್ಲೇಶಪಡಹತ್ತಿದ್ದಳು ತಾರಾಬಾಯಿಗೆ ಅವಳ ಇಡೀ ಆಯುಷ್ಯದಲ್ಲೆಲ್ಲ ಸಾಕಾಗಿ ಉಳಿಯುವಂಥ ಪ್ರಸಂಗಗಳೆಂದರೆ ಎರಡೇ ಉಂಟಾಗಿದ್ದವು. ಸೆರೆಮನೆಯಲ್ಲಿ ಜಿಜಾಬಾಯಿಯಿಂದಲೂ ಸಂಭಾಜಿ ಯಿಂದಲೂ ಒದಗುತ್ತಿರುವ ಪೀಡೆಯು ಮೊದಲನೇ ಪ್ರಸಂಗವಾಗಿತ್ತು. ಈ ಪೀಡೆಯನ್ನು ಹೇಗೆ ಪರಿಹರಿಸಬೇಕೆಂದು ಅವಳು ದಿನಾಲು ವಿಚಾರಿಸುತ್ತಿ ದ್ದಳು. ಇನ್ನೊಂದು ಪ್ರಸಂಗವೆಂದರೆ, ತನ್ನ ಮೊಮ್ಮಗನಾದ ರಾಮರಾಜನ ಸುರಕ್ಷಿತೆಯ ವಿಷಯವು. ಅವಳಿಗೆ ರಾಜ-ರಾಣಿಯರ ಪೀಡೆಯು ಮೊದಲಿ ನಿಂದಲೆ ಇದ್ದಿತು. ರಾಮರಾಜನ ವಿಷಯವಾಗಿ ಮಾತ್ರ ಅವಳು ಸ್ವಲ್ಪ ಮಟ್ಟಿಗೆ ನಿಶ್ಚಿಂತಳಾಗಿದ್ದಳು; ಆದರೆ ರಾಜಪುತ್ರನು ರಜಪುತ ದಂಪತಿಗಳ ಬಳಿಯಲ್ಲಿ ಸುರಕ್ಷಿತವಾಗಿರುವನೆಂಬ ಸಂಗತಿಯು ರಾಜ-ರಾಣಿಯರಿಗೆ ತಿಳಿದ ಕೂಡಲೆ, ಅವರು ಈ ಕಾರಸ್ಥಾನದ ಶೋಧನೆಗಾಗಿಯೂ ರಾಜಪುತ್ರನು ದೊರೆತರೆ ಅವನ ಪಾರುಪತ್ಯಗೊಳಿಸುವದಕ್ಕಾಗಿಯೂ ಉದಾಜಿಯ ಆಮಂ ತ್ರಣದ ಮೇರೆಗೆ ಶಿರಾಳೆಗೆ ಹೋಗಿದ್ದರು. ಈ ವಾರ್ತೆಯು ಗಾಳಿಯ ಸುಳುವಿ ನಿಂದ ತಾರಾಬಾಯಿಗೂ ತಿಳಿದುದರಿಂದ, ಈ ವಿಷಯವಾಗಿ ನಿಜವಾದ ಸಂಗತಿ ಯನ್ನು ತಿಳಿದುಕೊಂಡು ಬರುವದಕ್ಕಾಗಿ ಯಾದೋ ಗೋಪಾಳನನ್ನು ಅವಳು ಕಳುಹಿಸಿದ್ದಳು. ಅವನು ಎಂಟು ದಿನಗಳಾದರೂ ಬಾರದ್ದರಿಂದ ತಾರಾ

ಬಾಯಿಯು ವ್ಯಸನಾಕ್ರಾಂತಳಾಗಿದ್ದಳು. ಇಂಥ ಸಮಯದಲ್ಲಿ ಸಂಭಾಜಿಯೂ ಜಿಜಾಬಾಯಿಯೂ ಪನ್ಹಾಳಗಡಕ್ಕೆ ಬರುತ್ತಿರುವರೆಂಬ ವಾರ್ತೆಯು ಅವಳಿಗೆ ತಿಳಿಯಿತು. ಯಾದೋ ಗೋವಾಳನು ಇಲ್ಲದ ಸಂಧಿಯಲ್ಲಿ ರಾಜ-ರಾಣಿಯರು ಬರುವರೆಂದು ಅವಳು ಮತ್ತಿಷ್ಟು ಚಿಂತಾಮಗ್ನಳಾದಳು. ಅವರು ಬಂದ ಮೇಲೆ ಕಾರಭಾರಿಯು ಎಲ್ಲಿರುವನೆಂದು ಕೇಳಿದರೆ ಉತ್ತರವನ್ನೇನು ಕೊಡಬೇಕೆಂದು ಅವಳು ಆಲೋಚಿಸತೊಡಗಿದಳು.

ತಾರಾಬಾಯಿಯು ಚಿಂತಾಮಗ್ನಳಾಗಿ ಕುಳಿತಾಗ ಅವಳ ವಿಶ್ವಾಸದ ಸೇವಕನಾದ ಪರಸೋಜಿಯು ಅಲ್ಲಿಗೆ ಬಂದನು. ಅವನನ್ನು ನೋಡಿ ತಾರಾಬಾಯಿಯು:—"ಪರಸೋಜಿ, ಮತ್ತೇನು ಸಮಾಚಾರ?" ಎಂದು ಕೇಳಿದನು

"ರಾಜ-ರಾಣಿಯರು ಬರುವರೆಂಬ ವಾರ್ತೆಯನ್ನು ನೀವು ಕೇಳಿರಬಹುದಲ್ಲವೆ?" ಎಂದು ಪರಸೋಜಿಯು ಕೇಳಿದನು

"ಕೇಳಿರುವೆನು."

"ಸಂಭಾಜಿರಾಜರು ರಾಮದಾಸನ ಸಹಾಯದಿಂದ ರಾಜಪುತ್ರನ ಶೋಧನೆ ನಡೆಯಿಸಿರುವರಂತೆ!"

ಪರಸೋಜಿಯು ಹೇಳಿದ ವಾರ್ತೆಯು ಅಷ್ಟು ಹೊಸದಾಗಿರದಿದ್ದರೂ, ಆ ವಾರ್ತೆಯು ಸಹ ತಾರಾಬಾಯಿಯ ಅಂತಃಕರಣವನ್ನು ಹೊಯ್ದಾಡಿಸಿತು ಅವಳು ನಿಟ್ಟುಸಿರ್ಗರೆದು: "ರಾಮದಾಸನು ಸಹ ನಮ್ಮ ಮೇಲೆ ತಿರುಗಿಬಿದ್ದನೆ!" ಎಂದು ನುಡಿದಳು.

ಪರಸೋಜಿಯು ಹೇಳಿದ ವಾರ್ತೆಯು ಒಳಗಿದ್ದ ಭವಾನಿಬಾಯಿಗೆ ಗೊತ್ತಾಯಿತು. ಕೂಡಲೆ ಅವಳು ಹೊರಗೆ ಬಂದು.—"ರಾಜಪುತ್ರನ ಸಮಾಚಾರವೇನು?" ಎಂದು ಕೇಳಿದಳು.

"ನಿನಗೇಕೆ ಆ ಒಣ ಉಸಾಬರಿಯು? ಸುಮ್ಮನೆ ಒಳಗೆ ಹೋಗು!" ಎಂದು ತಾರಾಬಾಯಿಯು ಸೊಸೆಯನ್ನು ಬೆದರಿಸಿದಳು

"ರಾಜಪುತ್ರನ ಹೆಸರು ಹೊರಟದ್ದರಿಂದ ವಿಚಾರಿಸಿದೆನು ರಾಜ-ರಾಣಿಯರು ಏನಾದರೂ ಅತ್ಯಾಚಾರ ಮಾಡಿದರೇನು?"

"ಭವಾನಿ!" ತಾರಾಬಾಯಿಯು ಸಿಟ್ಟಿನಿಂದ.—"ನೀನು ನನ್ನೆದುರಿಗೆ ಈ ಬಾಷ್ಕಳತನ ಮಾಡತೊಡಗಿರುವೆಯಾ? ನಾನು ದೆವ್ವನಂತಿರಲಾಗಿ, ನಿನಗೇಕೆ ಈ ಇಲ್ಲದ ಉಸಾಬರಿಯು?'

"ರಾಣೀಸಾಹೇಬರೆ!" ಪರಸೋಜಿಯು.—"ನೀವು ಒಳಗೆ ಹೋಗಿರಿ. ಬಾಲರಾಜರು ಸುರಕ್ಷಿತವಾಗಿರುವರು"

ಭವಾನಿಬಾಯಿಯು ತಾರಾಬಾಯಿಯ ಕಟ್ಟುನಿಟ್ಟಿನ ಸ್ವಭಾವವನ್ನು ತಿಳಿದವಳಾಗಿದ್ದಳು ರಾಜಪುತ್ರನು ಸುರಕ್ಷಿತವಾಗಿರುವನೆಂಬ ವಾರ್ತೆಯನ್ನು ಕೇಳಿ, ಆನಂದಭರಿತಳಾಗಿ ಅವಳು ಒಳಗೆ ಹೊರಟುಹೋದಳು. ಅಷ್ಟರಲ್ಲಿ ಯಾದೋ ಗೋಪಾಳನೂ ಭಗವಂತರಾಯನೂ ಅಲ್ಲಿಗೆ ಬಂದರು. ಆಗ ತಾರಾಬಾಯಿಯು ಹರ್ಷನಿರ್ಭರಳಾದಳು. ಅವಳು ಕಾರಭಾರಿಯನ್ನು ಕುರಿತು.—'ಯಾದವರಾಯರೆ, ನೀವು ಬರುವದಕ್ಕೆ ಇಷ್ಟು ದಿನಗಳೇಕೆ ಹಿಡಿದವು?''

"ಅಪ್ಪನವರ, ಅಮಾತ್ಯರ ಸಲುವಾಗಿ ಇಷ್ಟು ತಡವಾಯಿತು."

'ನನ್ನ ಇಳಿಕೆಯ ಕಾಲವನ್ನು ನೋಡಿ, ಕಾರಭಾರಿಗಳೂ ಅಮಾತ್ಯರೂ ಪಕ್ಷಾಂತರ ಮಾಡಿದರೆಂದು ನನ್ನ ಭಾವನೆಯಾಗಿತ್ತು 'ಬಲವಿಲ್ಲದ ಕಾಲದಲ್ಲಿ ನೆಲವೆದ್ದು ಬಡೆಯಿತೆ'ಂಬಂತೆ ಎಲ್ಲಿ ಆಗುವುದೋ ಎಂದು ನಾನು ಭಯಗೊಂಡಿದ್ದೆನು."

"ಹೀಗೆ ಎಂದಾದರೂ ಆಗಬಹುದೆ?'' ಎಂದು ತಾರಾಬಾಯಿಯನ್ನು ಯಾದೋ ಗೋಪಾಳನು ಕೇಳಿದನು.

"ಆಗಿಲ್ಲವೇಕೆ? ನಾನು ಇಂತಹ ಅನೇಕ ಪ್ರಸಂಗಗಳನ್ನು ಅನುಭವಿಸಿರುವೆನು ಪರಶುರಾಮಪಂತ ಪ್ರತಿನಿಧಿಯು ನನ್ನ ವಿಶ್ವಾಸಘಾತ ಮಾಡಲಿಲ್ಲವೆ?''

"ರಾಣೀಸಾಹೇಬರೆ!" ಭಗವಂತರಾಯನು ಆವೇಶದಿಂದ —"ನೀವು ಪರಶುರಾಮಪಂತರನ್ನೇ ಎಲ್ಲರಿಗೂ ಹೋಲಿಸಬೇಡಿರಿ. ಅಮಾತ್ಯರ ಮಾತು ಬೇರೆ, ಪ್ರತಿನಿಧಿಗಳ ಮಾತು ಬೇರೆ. ಅಮಾತ್ಯರ ಮನೆತನದಲ್ಲಿ ಒಡಕಿನ ಗಂಧವೇ ಇರುವದಿಲ್ಲವೆಂಬದನ್ನು ನೀವು ಮನಗಂಡಿರುತ್ತೀರಿ. ಅಮಾತ್ಯರ ಹಾಗೆ ಪ್ರತಿನಿಧಿಗಳು ನಡಕೊಳ್ಳುವದಿಲ್ಲವೆಂಬದೂ ನಿಮಗೆ ಗೊತ್ತಿದೆ ಪರಶುರಾಮಪಂತನ ಅನುಕರಣವನ್ನು ಅವನ ಚಿರಂಜೀವನು ಮಾಡುತ್ತಿರುವದನ್ನು ನೀವು ನೋಡುತ್ತಿರುವಿರಿ. ಇಷ್ಟರ ಮೇಲಿಂದ ನನ್ನ ಮಾತಿನ ಸತ್ಯತೆಯು ವ್ಯಕ್ತವಾಗಬಹುದು. ಎಂತಹ ಆಪತ್ಕಾಲದಲ್ಲಾದರೂ ನನ್ನ ಹಿರಿಯರಾದ ರಾಮಚಂದ್ರಪಂತರು ನಿಮ್ಮನ್ನು ತ್ಯಜಿಸಲಿಲ್ಲವಷ್ಟೆ? ನಾನು ಅವರ ಅನುಕರಣೆ ಮಾಡುವದರಲ್ಲಿ ಸ್ವಲ್ಪಾದರೂ ಹಿಂದಾಗಿಲ್ಲ''

"ಆದರೂ ಬ್ರಾಹ್ಮಣರನ್ನು ನಂಬುವಂತಿಲ್ಲ."

"ಈಗ ಮಾತ್ರ ನೀವು ಕೊಲ್ಹಾಪುರದ ಪ್ರಚಲಿತ ರಾಜಕಾರಣಕ್ಕನುಗುಣವಾಗಿಯೇ ಮಾತನಾಡಿದಿರಿ!'' ಅಮಾತ್ಯನು ಗಂಭೀರತೆಯಿಂದ:—"ಈ

ಭೇದಭಾವದ ರಾಷ್ಟ್ರವಿಘಾತಕ ರಾಜಕಾರಣದ ವಿಷವೃಕ್ಷವು ಮೊದಲು ಕೊಲ್ಹಾಪುರದ ರಾಜ್ಯದಲ್ಲಿ ಇರಲಿಲ್ಲ. ಅದು ಹಿಂದು ದ್ವೇಷ್ಟಿಯಾದ ನಿಜಾಮನ ಅಂತಃಕರಣದಲ್ಲಿ ಉದ್ಭವಿಸಿತು. ಆವನ್ನೇ ಅವನು ಕೊಲ್ಹಾಪುರದಲ್ಲಿ ನೆಟ್ಟನು; ಆದರೆ ಇತ್ತೀಚೆಗೆ ಕೊಲ್ಹಾಪುರದವರು ಈ ವಿಷಯದಲ್ಲಿ ನಿಜಾಮನಿಗೇ ಗುರುಗಳಾಗಿ ಶೋಭಿಸುತ್ತಿರುವರು."

"ಛೀ! ಛೀ! ಅಮಾತ್ಯರೆ, ನಮ್ಮ ವಿಷಯದಲ್ಲಿ ನೀವು ತಪ್ಪು ತಿಳುವಳಿಕೆಯುಳ್ಳವರಾಗಿರುತ್ತೀರಿ. ನೀವು ತಿಳಿದುಕೊಂಡಿರುವ ಅರ್ಥದಿಂದ ನಾನು ಮಾತನಾಡಲಿಲ್ಲ."

"ನೀವು ಯಾವ ಅರ್ಥದಿಂದಲೇ ಮಾತನಾಡಿರಿ, ನಾನು ಆಡಿದ್ದು ಮಾತ್ರ ವಸ್ತುಸ್ಥಿತಿಗನುಸಾರವಾಗಿಯೇ ಇರುವದು. ಜಿಜಾಬಾಯಿ ರಾಣಿಸಾಹೇಬರು ಬ್ರಾಹ್ಮಣರ ವಿರುದ್ಧವಾಗಿ ಬ್ರಾಹ್ಮೇತರರನ್ನು ಎಬ್ಬಿಸಿಕುಳ್ಳಿರಿಸಿರುವರು ಸಂಭಾಜಿರಾಜರು ಅವರ ಸಲಹೆಯಿಂದ ಬ್ರಾಹ್ಮಣರಲ್ಲಿ ದೇಶಸ್ಥ, ಕೊಂಕಣಸ್ಥ ಭೇದವನ್ನು ಕಲ್ಪಿಸತೊಡಗಿರುವರು. ಉದಾಜಿ ಚವ್ಹಾಣನು ಮರಾಟ-ಮರಾಟೇತರರನ್ನು ಕಲ್ಪಿಸುತ್ತಿರುವನು. ಪ್ರತಿನಿಧಿಯು ದೇಶಸ್ಥ, ಚಿತ್ಪಾವನ ಭೇದವನ್ನು ಕಲ್ಪಿಸಗೊಡಗಿರುವನು. ಈ ಭೇದದಿಂದ ಲಾಭವೇನು? ಧರ್ಮದ ದುರಭಿಮಾನಕ್ಕೊಳಗಾಗಿ, ನಿಜವಾದ ಕೆಲಸವು ಯಾರಿಂದಾಗುವದೆಂಬದನ್ನು ಲಕ್ಷಿಸದಿದ್ದರೆ ರಾಷ್ಟ್ರದ ಹಾನಿಯಾಗದೆ ಇರುವದೆ? ಶ್ರೀಪತಿರಾಯ ಪ್ರತಿನಿಧಿಯು ಪೇಶವೆಯು ಚಿತ್ಪಾವನನೆಂದು ನೀರಲ್ಲಿ ನೋಡುತ್ತಿರುವನು. ಸಾತಾರೆಯ ರಾಜ್ಯದ ಅಭ್ಯುದಯವು ಯಾರನ್ನು ಅವಲಂಬಿಸಿರುವದೆಂಬದನ್ನು ನೀವು ಬಲ್ಲಿರಿ. ಪೇಶವೆಯನ್ನು ನಿಂದಿಸುವದೆಂದರೆ, ಸೂರ್ಯನನ್ನು ಗೂಗೆಯು ನಿಂದಿಸಿದಂತೆಯೇ ಸರಿ! ಪೇಶವೆಯು ಇಂತಹ ಅನೇಕ ಪ್ರತಿನಿಧಿಗಳಿಗೆ, ಇಂತಹ ಸಂಭಾಜಿ-ನಿಜಾಮರಿಗೆ, ಇಂತಹ ಉದಾಜಿ-ಕೃಷ್ಣಾಜಿಯವರಿಗೆ ಸಾಕಾಗಿ ಉಳಿಯುವಷ್ಟು ಪ್ರತಾಪಶಾಲಿಯಾಗಿರುವನು. ಬ್ರಾಹ್ಮಣರು ನಿಮ್ಮ ಸೇವೆಯನ್ನು ಉತ್ತಮವಾದ ರೀತಿಯಿಂದ ಮಾಡಿದ್ದನ್ನು ನೀವು ಮನಗಂಡಿಲ್ಲವೆ? ಪರಶುರಾಮಪಂತನಂತೆ ನನ್ನ ತೀರ್ಥರೂಪರವರಿಗೆ ಸಾತಾರೆಯವರ ಪಕ್ಷವನ್ನು ವಹಿಸಲಿಕ್ಕೆ ಯಾವ ಅಡ್ಡಿಯಿತ್ತು? ಶಾಹೂ ಮಹಾರಾಜರ ಇಲ್ಲವೆ ಸಂಭಾಜಿರಾಜರ ಪಕ್ಷ ಹಿಡಿಯಲಿಕ್ಕೆ ನನಗಾದರೂ ಯಾರು ಅಡ್ಡಿ ಮಾಡುವರು? ಈಗ ನಾನು ನಿಮ್ಮ ಪಕ್ಷಪಾತಿಯಾಗಿದ್ದುದರಿಂದ ಕೊಲ್ಹಾಪುರದವರೂ ಸಾತಾರೆಯವರೂ ಕೂಡಿಯೇ ನನ್ನನ್ನು ನೀರಲ್ಲಿ ನೋಡುತ್ತಿರುವರು. ನನ್ನ ಆಶ್ರಯದಾತರಾದ ನೀವಾದರೊ ವಿಪನ್ನಾವಸ್ಥೆಗೆ

ಗುರಿಯಾಗಿ ತೊಳಲುತ್ತಿರುವಿರಿ. ಇಂಥ ಅವಸ್ಥೆಯಲ್ಲಿ ನಾನು ನಿಮ್ಮ ಸೇವೆ ಮಾಡುತ್ತಿರುವದನ್ನು ನೋಡಿದರೆ, ನೀವು ಆಡಿದ ಮಾತುಗಳು ಎಷ್ಟು ಅನುಚಿತವಾದವುಗಳೆಂಬದು ವ್ಯಕ್ತವಾಗುವದು. ಒಟ್ಟಿನ ಮೇಲೆ ಕೊಲ್ಹಾಪುರ ರಾಜ್ಯದಲ್ಲಿ ಗುಣದ ಪರೀಕ್ಷೆಯಿಲ್ಲ. ರಾಜ್ಯಕರ್ತರು ಮದಾಂಧರಾಗಿರುವರು. ಉಪಾಯವಿಲ್ಲ!''

ಅಮಾತ್ಯನಾಡಿದ ಮಾತುಗಳಿಂದ ತಾರಾಬಾಯಿಯು ಮೆತ್ತಗಾದಳು. ಆಗ ಅವಳು ದೀನವಾಣಿಯಿಂದ:—"ಅಮಾತ್ಯರೆ! ನಾನು ನಿಮ್ಮ ಘನವಂತಿಕೆಯ ವಿಷಯಕ್ಕೆ ಮಾತಾಡಲಿಲ್ಲ; ನನ್ನ ದೈವಕ್ಕೆ ಆಡಿದೆನು. ನಾನು ದೈವಾಹತಳಿರುವುದರಿಂದ ಎಂಥ ಏಕನಿಷ್ಠರಾದರೂ ಒಡೆದು ಹೋಗುವರೆಲ್ಲಿಯೋ ಎಂಬ ಭಯದಿಂದ ಹಾಗೆ ಆಡಿದೆನು. ನೀವು ನನ್ನ ಅಪರಾಧವನ್ನು ಕ್ಷಮಿಸಿರಿ."

''ತಾವು ಕ್ಷಮಾಯಾಚನೆ ಮಾಡಬೇಕೆಂಬ ಉದ್ದೇಶದಿಂದ ನಾನು ಮಾತಾಡಲಿಲ್ಲ. ಮಾತಿನ ಓಘದಲ್ಲಿ ಇದ್ದ ಸ್ಥಿತಿಯನ್ನು ಆಡಿ ತೋರಿಸಬೇಕಾಯಿತು ''

''ನೀವು ಏಕನಿಷ್ಠ ಹೃದಯದವರಿರುವಿರೆಂಬದನ್ನು ನಾನು ಬಲ್ಲೆನು. ನಿಮ್ಮ ಮೇಲೆಯೆ ನನ್ನ ಕಾರಸ್ಥಾನದ ಮಂದಿರವು ನಿಂತಿದೆ. ಅಮಾತ್ಯರೆ, ನೀವು ಇಲ್ಲಿಗೆ ಬರಲಿಕ್ಕೆ ತಡಮಾಡಿದಿರೇಕೆ?"

"ರಾಜಪುತ್ರನ ಶೋಧದಲ್ಲಿ ತೊಡಗಿದ್ದೆನು. ರಜಪುತ ದಂಪತಿಗಳು ಸದ್ಯಕ್ಕೆ ಎಲ್ಲಿರುವರೆಂಬದು ಗೊತ್ತು ಹತ್ತಲಿಲ್ಲ.''

"ಮುಂದೇನು ಗತಿ?''

''ನೀವು ನಿಶ್ಚಿಂತರಾಗಿರ್ರಿ ನಾನು ಬಾಲರಾಜನನ್ನು ಶೋಧಿಸಿ, ಘಟ್ಟದ ಕೆಳಗೆ ಕಳುಹಿಸುವೆನು. ಸದ್ಯದ ಪ್ರಕ್ಷುಬ್ಧ ವಾತಾವರಣವು ಶಾಂತವಾಯಿತೆಂದರೆ, ನಿಂಬಾಳಕರ ದರ್ಯಾಬಾಯಿಯ ಬಳಿಯಲ್ಲಿ ಇಡುವೆನು. ನಾನು ರಾಜಕುಮಾರನನ್ನು ಶೋಧಿಸದೆ ಬಿಡುವದಿಲ್ಲ. ನೀವು ಈ ವಿಷಯದಲ್ಲಿ ನಿಶ್ಚಿಂತರಾಗಿರ್ರಿ.''

''ಭಗವಂತರಾಯರೆ, ಇದೇ ವಿಷಯವಾಗಿ ಗೊತ್ತುವಳಿ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ನಾನು ನಿಮ್ಮನ್ನು ಕರೆಯಿಸಿದೆನು. ರಾಮದಾಸನು ಸಂಭಾಜಿಗೆ ರಾಜಕುಮಾರನ ಗೊತ್ತುವಳಿ ತಿಳಿಸಿರುವನಂತೆ. ಮುಂದೆ ಏನು ಮಾಡಬೇಕು?''

''ಮುಂದೆ ಏನು ಮಾಡಬೇಕೆಂಬದು ತಿಳಿಯಲೊಲ್ಲದೇನು? ಹಣೆ ಹಣೆ ಬಡಕೊಂಡು ಅಳಬೇಕು! ಇದಕ್ಕಿಂತ ಹೆಚ್ಚಾಗಿ ನೀನೇನು ಮಾಡುವೆ?''

ಎಂದು ನುಡಿಯುತ್ತ ಜಿಜಾಬಾಯಿಯು ಒಳಗೆ ಬಂದಳು.

ರೌದ್ರರೂಪಹೊಂದಿದ ಜಿಜಾಬಾಯಿಯನ್ನು ನೋಡಿ ತಾರಾಬಾಯಿ, ಅಮಾತ್ಯ ಮೊದಲಾದವರು ಭಯಚಕಿತರಾದರು. ಅವರು ಪರಸ್ಪರರು ಪರಸ್ಪರರನ್ನು ನೋಡತೊಡಗಿದರು. ಆಗ ಜಿಜಾಬಾಯಿಯು ಕರ್ಕಶವಾಣಿಯಿಂದ:—"ಮುದಿಹದ್ದೇ! ನಮ್ಮನ್ನು ಮೋಸಗೊಳಿಸಿ ಹುಚ್ಚನ ಮಗನನ್ನು ರಕ್ಷಿಸುತ್ತಿದ್ದೆಯಲ್ಲವೆ? ಅವನಿಗೆ ರಾಜ್ಯ-ವೈಭವಗಳು ದೊರೆಯುವಂತೆ ತಂತ್ರ ಮಾಡುವದಕ್ಕಾಗಿ ರಾಮದಾಸನಿಗೆ ಹೇಳಿದ್ದೆಯಲ್ಲವೆ? ರಾಮದಾಸನೆಂದರೆ ಯಾದೋ ಗೋಪಾಳ-ಭಗವಂತರಾಯರೆಂದು ನೀನು ತಿಳಿದಿರುವೆಯೇನು? ಇನ್ನು ನೀನು ಮೊಮ್ಮಗನನ್ನು ಸ್ವರ್ಗದಲ್ಲಿ ಕಾಣುವೆ ನಿನ್ನ ಬಳಿಯಲ್ಲಿ ಅಮಾತ್ಯರೂ ಕಾರಭಾರಿಗಳೂ ಏಕೆ ಬಂದಿರುವರೆಂಬದು ನನಗೆ ಗೊತ್ತಾಗಿದೆ. ಮೊಮ್ಮಗನ ಮರಣ ವಾರ್ತೆಯನ್ನು ಕೇಳ ಅಳಲಿಕ್ಕೆ ಬಹಳ ಜನರಿಲ್ಲವೆಂದು ನೀನು ಈ ಅಳುಮೋರೆಯ ರಾಹುತರನ್ನು ಕರೆಯಿಸಿರುವೆ. ಅಳು, ಅಳು; ಹೊಟ್ಟೆ ತುಂಬಾ ಅಳು. ಹುಡುಗನ ಮರಣ ಸಮಯದಲ್ಲಿ ಯಾರೂ ಅಳಲಿಲ್ಲ. ನಮಗೆ ಅಳು ಬರಲಿಲ್ಲ. ಹುಚ್ಚನ ಮಗನ ಮರಣವಾರ್ತೆಯನ್ನು ನಿನಗೆ ಹೇಳುವದಕ್ಕಾಗಿ ನಾನೇ ಇಲ್ಲಿಗೆ ಬಂದಿರುವೆನು. ನೀನು ಈ ಅಳುಬುರುಕ ಅಮಾತ್ಯ-ಕಾರಭಾರಿಗಳಿಗೆ ಬಳಿ ಇಡಿಸಿ, ಸ್ವರಕ್ಕೆ ಸ್ವರಕೂಡುವ ಹಾಗೆ ಅಳಬೇಕೆಂದು ಹೇಳು."

ಜಿಜಾಬಾಯಿಯು ಹೀಗೆ ನುಡಿಯುತ್ತಿರುವಾಗ ಸಂಭಾಜಿರಾಜನೂ ಅಲ್ಲಿಗೆ ಬಂದನು. ಅವನ ಮುಖವಾದರೂ ಸಂತಾಪದಿಂದ ಕೆಂಪಡರಿತ್ತು. ಅವನು ಒಳಗೆ ಬಂದ ಕೂಡಲೆ:—"ಅಮಾತ್ಯರ, ಇಂಥ ರಾತ್ರಿಯಲ್ಲಿ ನೀವು ಇತ್ತಕಡೆಗೇಕೆ ಬಂದಿರಿ?" ಎಂದು ನುಡಿದು, ಯಾದವರಾಯನನ್ನು ಕುರಿತು. "ಕಾರಭಾರಿಗಳೆ! ರಾತ್ರಿಯ ವೇಳೆಯಲ್ಲಿ ನಮ್ಮ ಅಪ್ಪಣೆಯು ಹೊರತು ಯಾರನ್ನೂ ಒಳಗೆ ಬಿಡಬಾರದೆಂಬ ಕಟ್ಟಳೆಯನ್ನು ನೀವು ಪೂರಾ ಮರೆತಂತೆ ತೋರುವದು!"

"ಛೇ! ಇವರು ಹೇಗೆ ಮರೆತಾರು? ರಾಜ-ರಾಣಿಯರು ಸಮೀಪದಲ್ಲಿಲ್ಲವೆಂದು ತಿಳಿದು, ಇಂಥ ರಾತ್ರಿಯಲ್ಲಿ ಕಾರಸ್ಥಾನ ನಡೆಯಿಸಿರುವರು. ಇವರು ಎಚ್ಚರಗೇಡಿಗಳಾಗಿದ್ದರೆ ಹಗಲುಹಾಡೇ ಒಳಸಂಚು ನಡೆಯುತ್ತಿತ್ತು. ಅಮಾತ್ಯರೆ, ಯಾದವರಾಯರೇ, ನಿಮ್ಮ ಕಾರಸ್ಥಾನಗಳನ್ನು ನಾನು ಅರಿತಿರುವೆನು. ರಜಪುತ ದಂಪತಿಗಳ ಕಡೆಗೆ ರಾಜಪುತ್ರನನ್ನು ಕಳಿಸಿ, ರಾಣಿಯು ಹೆಣ್ಣು ಹಡೆದಳೆಂತಲೂ, ಹುಟ್ಟಿದ ಶಿಶುವು ಮೃತಪಟ್ಟಿತೆಂತಲೂ ಸುದ್ದೀ ಹರಡಿದ

ಸುದ್ದೀ ಸೂರಕ್ಷಗಳು ನೀವೇ ಅಲ್ಲವೆ? ರಾಜಪುತ್ರನಿಗೆ ಸಿಂಹಾಸನವು ದೊರೆಯುವಂತೆ ಮಾಡಬೇಕೆಂದು ನೀವು ಹೆಣಗುತ್ತಿರುವಿರಲ್ಲವೆ? ಆ ಹುಚ್ಚನ ಮಗನು ಪಾತಾಳದಲ್ಲಿದ್ದರೂ ಶೋಧಿಸಿ ಪಾರುಪತ್ಯಗೊಳಿಸುವಷ್ಟು ಸಾಮರ್ಥ್ಯವೂ ಚತುರತೆಯೂ ಇತ್ತಲಿನವರಲ್ಲಿಲ್ಲವೆಂದು ನೀವು ತಿಳಿದಿರುವಿರಿ. ನಿಮ್ಮ ತಿಳುವಳಿಕೆಯು ಎಷ್ಟು ಹುಚ್ಚತನದ್ದೆಂಬದು ಬೇಗನೆ ನಿಮಗೆ ಕಂಡು ಬರುವದು.''

ಜಿಜಾಬಾಯಿಯಾಡಿದ ಮಾತುಗಳಿಂದ ತಾರಾಬಾಯಿ, ಅಮಾತ್ಯ, ಕಾರಿಭಾರಿಗಳ ಹೃದಯುಗಳು ಕಂಪಿಸತೊಡಗಿದವು. ಈ ಅನಿಷ್ಟವನ್ನು ನೋಡಿ ಅಮಾತ್ಯನು ಚಾತುರ್ಯದಿಂದ.--"ನೀವು ಸತ್ತಾಧೀಶರು; ನಾವು ಸೇವಕರು. ನೀವು ಬೇಕಾದ ಹಾಗೆ ಆಡಿದರೂ ನಾವು ಸಹಿಸಬೇಕಾಗುವದು. ನೀವು ನಮ್ಮ ಮೇಲೆ ಯಾವ ದೋಷಾರೋಪಣೆ ಮಾಡುತ್ತಿರುವರೋ ಅದರ ಸಂಬಂಧವು ನನಗೆ ತಿಲಾಂಶವೂ ಇರುವದಿಲ್ಲ."

"ಸಂಬಂಧವಿರಲಿಕ್ಕಿಲ್ಲ! ನೀವು ಯಾವ ರಜಪುತನ ವಶಕ್ಕೆ ರಾಜಪುತ್ರನನ್ನು ಒಪ್ಪಿಸಿದ್ದಿರೋ ಅವನಾದರೂ ನಿಮಗೆ ಗೊತ್ತದೆಯೋ?"

"ಯಾವ ರಜಪುತನು?" ಎಂದು ಅಮಾತ್ಯನು ಜಿಜಾಬಾಯಿಯನ್ನು ಕೇಳಿದನು

"ನೋಡಿರಿ! ಹೇಗೆ ಅರಿಯದವರಂತೆ ಮಾತಾಡುವರು?" ಎಂದು ಜಿಜಾಬಾಯಿಯು ನುಡಿದು, ತಾರಾಬಾಯಿಯನ್ನು ಕುರಿತು. "ಏ ಮುದಾಡಿ! ನಿನಗಾದರೂ ಈ ವಿಷಯವು ಗೊತ್ತಿರಲಿಕ್ಕಿಲ್ಲವಲ್ಲವೆ?"

"ಚಾಂಡಾಲಿನಿ!" ತಾರಾಬಾಯಿಯು ಸಂತಾಪದಿಂದ.--"ನೀನು ಸುಮ್ಮನೆ ನನ್ನ ಛಲನೆ ಮಾಡುತ್ತಿರುವದೇಕೆ? ನನ್ನ ಮೊಮ್ಮಕ್ಕಳಿಬ್ಬರೂ ಮೃತರಾದರೆಂದು ದಿವರಾತ್ರಿಯಲ್ಲಿ ನನ್ನ ಪ್ರಾರಬ್ಧಕ್ಕಾಗಿ ಅಳುತ್ತಿರುವೆನು. ಅಂಥದರಲ್ಲಿ ನೀನು ಗಾಯದ ಮೇಲೆ ಬರೆಕೊಟ್ಟಂತೆ ಮಾಡುತ್ತಿರುವೆ. ನನ್ನ ವಂಶವು ನಿರ್ವಂಶವಾದರೂ ನಿನಗೆ ಸಮಾಧಾನವಾಗಿಲ್ಲ. ಅಂತೆಯೆ ನೀನು ಹೀಗೆ ಹೊಸ ಹೊಸ ಹಂಚಿಕೆಗಳನ್ನು ಹುಡುಕಿ ಛಲಿಸುತ್ತಿರುವೆ. ಈ ಮುದುಕೆಯ ತಳಮಳವು ನಿನಗೆ ಹತ್ತದೆ ಇರುವದೆ?" ಎಂದು ನುಡಿದು, ಅವಳು ಲಟಕು ಮುರಿದಳು.

ತಾರಾಬಾಯಿಯ ಈ ಮಾತು ಕೇಳಿ ರಾಜ-ರಾಣಿಯರಿಗೆ ಆಶ್ಚರ್ಯವಾಯಿತು. ರಾಮದಾಸನ ಹೇಳಿಕೆಯಂತೆ ಕೊಲೆ ಮಾಡಿದ ಹುಡುಗನು ನಿಜವಾದ ರಾಜಪುತ್ರನಾಗಿರಲಿಕ್ಕಿಲ್ಲವೆಂಬ ಸಂದೇಹವು ಅವರಲ್ಲಿ ಹುಟ್ಟಿತು.

ಆಗ ಸಂಭಾಜಿರಾಜನು ತಾರಾಬಾಯಿಯನ್ನು ಕುರಿತು—"ನೀವು ರಾಮದಾಸಸ್ವಾಮಿಗಳಲ್ಲಿ ಈ ವಿಷಯವಾಗಿ ಮಾತಾಡಿದ್ದಿರೇನು?"

"ನನ್ನ ಮೊಮ್ಮಗನು ಜೀವಂತನಿರುವನೆಂಬ ಹುಚ್ಚು ನಿಮ್ಮಂತೆ ನನಗೂ ಹಿಡಿದಿದ್ದರೆ ನಾನು ಮಾತನಾಡಬೇಕಷ್ಟೆ? ನನ್ನ ವಂಶವು ಎಂದೋ ನಷ್ಟವಾಗಿ ಹೋಗಿದೆ."

"ಹಾಗಾದರೆ ರಾಜಮಂದಿರದಲ್ಲಿದ್ದ ಘಾಶೀರಾಮ ರಜಪುತನು ಎಲ್ಲಿರುವನು?" ಜಿಜಾಬಾಯಿಯು ಯಾದವರಾಯನನ್ನು ಕೇಳಿದಳು.

"ಅವನನ್ನು ಕೆಲಸದಿಂದ ತಳ್ಳಿ ಎಷ್ಟೋ ದಿನಗಳಾದವು."

"ನೀವು ಆ ಕಪಟ ರಾಮದಾಸನ ತಂತ್ರಕ್ಕೊಳಪಟ್ಟಿರುವಿರಿ. ಅವನು ನಿಮ್ಮನ್ನು ವಶಪಡಿಸಿಕೊಂಡು, ಸಿಂಹಾಸನವನ್ನು ತನ್ನ ಸ್ವಾಧೀನಪಡಿಸಿಕೊಳ್ಳುವ ಹವಣಿಕೆ ಮಾಡಿರುವನು. ಅವನು ನಿಜವಾದ ಸಾಧುವಲ್ಲ." ಎಂದು ಅಮಾತ್ಯನು ಹೇಳಿದನು.

"ನೀವು ಸಾಧು-ಸಂತರ ವಿಷಯವಾಗಿ ಹೀಗೆ ಅನುಚಿತವಾಡಿ, ಪಾಪದ ಪಾಲುಗಾರರಾಗಬೇಡಿರಿ."

"ರಾಮದಾಸನನ್ನು ನೀವು ಮಾತ್ರ ಸಾಧು-ಸಂತನೆಂದು ತಿಳಿದಿರುತ್ತೀರಿ; ಆದರೆ ಅವನು ಕಾರ್ಯಸಾಧುವು. ರಾಮದಾಸನು ಚದುರೆಯ ಗಂಡನು!"

"ಏನು!" ಎಂದು ಸಂಭಾಜಿಯು ವಿಸ್ಮಯದಿಂದ ಕೇಳಿದನು.

"ರಾಮದಾಸನು ಚದುರೆಯ ಗಂಡನೇ?" ಜಿಜಾಬಾಯಿಯೂ ಬೆರಗಾಗಿ ಅಮಾತ್ಯನನ್ನು ಕೇಳಿದಳು.

"ನಾನು ನಿಜವನ್ನೇ ಹೇಳುತ್ತಿರುವೆನು. ನಿಮ್ಮ ಆ ಪೂಜ್ಯ ಸಾಧುವಾದ ರಾಮದಾಸನು ನಿಮ್ಮ ನಾಶಕ್ಕಾಗಿ ಹೊಂಚು ಹಾಕಿ ಕುಳಿತಿರುವನು. ನನ್ನ ಮಾತಿನ ಅನುಭವವು ನಿಮಗೆ ಬೇಗನೆ ಆಗುವದು. ರಾಮದಾಸನು ಒಬ್ಬ ಹುಡುಗನನ್ನು ಸಾಕಿದ್ದು, ಅವನನ್ನು ಕೊಲ್ಲಾಪುರದ ಸಿಂಹಾಸನಕ್ಕೆ ಒಡೆಯನನ್ನಾಗಿ ಮಾಡಬೇಕೆಂದಿರುವನು."

"ಹಾಗಾದರೆ ಅವನು ನನ್ನಿಂದ ಯಾವದೋ ಒಂದು ಹುಡುಗನನ್ನು ನಿಷ್ಕಾರಣವಾಗಿ ಕೊಲ್ಲಿಸಿದನು!" ಸಂಭಾಜಿರಾಜನು ಕ್ಲೇಶದಿಂದ ನುಡಿದನು.

"ನಾವು ಅವನನ್ನು ಶೋಧಿಸಿ ಪಾರುಪತ್ಯಗೊಳಿಸಲಿಕ್ಕೆ ಬೇಕು." ಎಂದು ಜಿಜಾಬಾಯಿಯು ಉದ್ಗಾರತೆಗೆದಳು.

ರಾಜಪುತ್ರನು ನಿಜವಾಗಿಯೂ ನಮ್ಮ ಕೈಯಲ್ಲಿ ಸಿಕ್ಕಿರದಿದ್ದರೆ ತಾರಾ

ಬಾಯಿಯ ರೋಷವನ್ನು ಸಂಪಾದನೆ ಮಾಡಿಕೊಳ್ಳುವದರಲ್ಲಿ ಅರ್ಥವಿಲ್ಲೆಂದು ತಿಳಿದು, ಸಂಭಾಜಿಯು ದೊಡ್ಡಿಸ್ತಿಕೆಯಿಂದ ತಾರಾಬಾಯಿಯನ್ನು ಕುರಿತು - "ಅಮ್ಮನವರೇ, ನಾನು ನಿಮ್ಮ ಮೊಮ್ಮಕ್ಕಳ ವಿಷಯವಾಗಿ ಕ್ರೂರತನವನ್ನು ತೋರಿಸಿದ್ದಕ್ಕಾಗಿ ನನ್ನನ್ನು ನೀವು ರಾಕ್ಷಸನೆಂದೂ, ಕ್ರೂರನೆಂದೂ ಸಂಬೋಧಿಸುತ್ತಿರಬಹುದು. ನಾನು ಅಚ್ಚ ಭೋಸಲೇ ವಂಶಜನಿರುವೆನು. ನನಗೆ ನನ್ನ ಮನೆತನದ ಅಭಿಮಾನ ಬಹಳ. ವಂಶದ ಪಾವಿತ್ರ್ಯದ ರಕ್ಷಣೆಗಾಗಿ ನನ್ನ ಆತ್ಮವನ್ನೇ ಬಲಿಯಾಗಿ ಒಪ್ಪಿಸುವೆನು. ಅಂದಮೇಲೆ ಇತರರ ಪಾಡೇನು? ಶಿವಾಜಿರಾಜರ ನಿಧನಾನಂತರದಲ್ಲಿ ಅವರ ರಾಣಿಯರು ಪ್ರಸೂತರಾದರು. ನಮ್ಮದೇ ಬಾಯಿ, ನಮ್ಮದೇ ನಾಲಿಗೆಯೆಂದು ಮಾತನಾಡಬಾರದು; ಆದರೆ ಈಗ ಪ್ರಸಂಗವೇ ಒದಗಿತೆಂದು ಹೇಳಬೇಕಾಗಿದೆ. ಇಬ್ಬರೂ ರಾಣಿಯರ ವಿಷಯವಾಗಿ ನನ್ನ ಮನಸ್ಸು ಸಾಶಂಕವಾಗಿದೆ ಅವರಿಬ್ಬರ ವರ್ತನದ ವಿಷಯವಾಗಿ ಜನರು ಹಿಂದು ಮುಂದೆ ಆಡಿಕೊಳ್ಳುತ್ತ ನಗತೊಡಗಿದ್ದರು. ಆದ್ದರಿಂದ ನಾನು ನಿರ್ದಯತೆಯ ಮಾರ್ಗವನ್ನು ಅವಲಂಬಿಸಬೇಕಾಯಿತು."

"ಸಂಭಾಜಿ!" ತಾರಾಬಾಯಿಯು ತಲ್ಲಣಗೊಂಡವಳಾಗಿ —"ನೀನು ಸತ್ತಾಧಾರಿಯು. ಏನು ಮಾತಾಡಿದರೂ ನಾನು ಸಹನ ಮಾಡಲಿಕ್ಕೇಬೇಕು; ಆದರೆ ನನ್ನ ಸೊಸೆಯಂದಿರ ಪಾವಿತ್ರ್ಯದ ವಿಷಯವಾಗಿ ನಾನು ಬೇಕಾದಂಥ ದಿವ್ಯವನ್ನು ಮಾಡಿತೋರಿಸಲಿಕ್ಕೆ ಸಿದ್ಧಳಾಗಿರುವೆನು. ಅವರು ಸುಚರಿತೆಯರಿರುವರು. ಅಂಥವರಿಗೆ ಏನಾದರೂ ಅಂದರೆ, ಬಾಯಲ್ಲಿ ಹುಳಗಳೇ ಬೀಳಬಹುದು!"

"ನಿಮ್ಮ ಮಾತು ನಿಮ್ಮಷ್ಟಕ್ಕೆ ನಿಜವಿರಬಹುದು; ಆದರೆ ಜನರಿಗೆ ಹೇಗೆ ನಂಬಿಗೆಯಾಗಬೇಕು? ಜನರ ಬಾಯಿ ಮುಚ್ಚುವದಾದೀತೆ?" ಎಂದು ಜಿಜಾಬಾಯಿಯು ಚುಚ್ಚಿ ಮಾತಾಡಿದಳು.

"ಜಿಜಾ! ಜನರ ಬಾಯಿ ಮುಚ್ಚುವರಾರೆಂದು ನೀನು ನನಗೆ ಪ್ರಶ್ನೆ ಮಾಡುವೆಯಾ? ಮೊದಲು ತನ್ನನ್ನು ನೋಡಿಕೊಂಡು ಹಿಂದಿನಿಂದ ಜನರಿಗೆ ಹೆಸರಿಡಬೇಕು. ಲೋಕಾಪವಾದದ ಮೇಲೆ ಇಷ್ಟು ವಿಶ್ವಾಸವಿಟ್ಟು ನ್ಯಾಯನಿಷ್ಠುರತೆಯಿಂದ ನಡೆಯಲಿಕ್ಕೆ ನಿನ್ನ ಪತಿಯೇನೂ ದಾಶರಥೀ ರಾಮನ ಅವತಾರವಲ್ಲ." ಎಂದು ತಾರಾಬಾಯಿಯು ನುಡಿದು, ಸಂಭಾಜಿಯನ್ನು ಕುರಿತು: "ಸಂಭಾಜಿ! ಲೋಕಾಪವಾದದ ಮಹತ್ವವು ನಿನಗೆ ಬಹಳವಾಗಿದ್ದರೆ ನನ್ನ ಸೊಸೆಯಂದಿರ ಚಾರಿತ್ರ್ಯದ ದುರ್ವಾರ್ತೆಯಷ್ಟೇ ನಿನಗೇಕೆ ಕೇಳಿತು?

ಉದಾಜಿ ಚವ್ಹಾಣನು ಮನೆಯವನಂತೆ ಯಾವಾಗಲೂ ನೀನು ಇರುವಾಗಲೂ ಇಲ್ಲದಿರುವಾಗಲೂ ಅಂತಃಪುರದಲ್ಲಿ ಅಂಡಲೆಯುತ್ತಿರುವದನ್ನು ನೋಡಿ ಜನರು ಏನು ಅನ್ನುವರೆಂಬದು ಮಾತ್ರ ನಿನ್ನ ಕಿವಿಗೆ ಬಿದ್ದಂತೆ ತೋರುವದಿಲ್ಲ.''

''ಏನು? ಜನರು ರಾಣಿಯ ವಿಷಯಕ್ಕೆ ದುರ್ಭಾಷಣವಾಡುವರೆ? ಯಾರು ಮಾತಾಡುವರು ಹೇಳಿರಿ; ಈ ಕ್ಷಣದಲ್ಲಿ ಅವರ ನಾಲಿಗೆ ಶೀಳಿ ಹಾಕುವೆನು '' ಸಂಭಾಜಿಯು ಆವೇಶದಿಂದ ನುಡಿದನು.

''ಈ ಮಾತಿನಲ್ಲಿ ಸಂಶಯವಿಲ್ಲ. ನಿರಪರಾಧಿಗಳಿಗೆ ಶಾಸನ ಮಾಡಲಿಕ್ಕೆ ಹಿಂದು ಮುಂದೆ ನೋಡದ ನೀನು, ನಿಜವಿರಲಿ ಸುಳ್ಳಿರಲಿ ಹೆಂಡತಿಯ ವಿಷಯವಾಗಿ ದುರಪವಾದ ಹೊರಿಸಿದ ನಿರಪರಾಧಿ ಜನರ ಮೇಲೆ ನೀನು ಹೇಗೆ ದಯೆ ತೋರುವೆ? ಅಧಿಕಾರ ಮದವೆಂದು ಇದಕ್ಕೇ ಅನ್ನುತ್ತಾರೆ. ಅಪವಾದ ಹೊರಿಸುವವರಿಗೆ ಶಿಕ್ಷೆ ವಿಧಿಸುವದರಿಂದ ದೋಷವೇನೂ ತೊಳೆದು ಹೋಗುತ್ತಿರುವದಿಲ್ಲ. ನಿನ್ನ ಸಲುವಾಗಿ ಕೆಟ್ಟ ಮಾತಾಡುವವರಿಗೆ ಯಾವ ಶಿಕ್ಷೆಯನ್ನು ವಿಧಿಸುವೆಯೋ, ಅದೇ ಶಿಕ್ಷೆಯನ್ನು ನಾನು ನನ್ನ ಸೊಸೆಯಂದಿರ ಸಲುವಾಗಿ ಆಡಿದವರಿಗೆ ವಿಧಿಸಿದರೆ ನಿನಗೆ ಹೇಗಾದೀತು ಹೇಳು!''

''ನಿಮ್ಮಲ್ಲಿ ಅಷ್ಟು ಯೋಗ್ಯತೆಯಿದ್ದರೆ, ಅಂತಹ ಎದೆಗಾರಿಕೆಯಿದ್ದರೆ ವಿಧಿಸಿರಿ! ಅಮ್ಮನವರೆ! ನೀವು ಯಾರೊಡನೆ ಮಾತಾಡತೊಡಗಿರುವಿರೆಂಬದರ ಪರಿವೆಯಿರುವದೇನು?''

''ನೀನು ಯಾರ ವಿಷಯವನ್ನು ಆಡುತ್ತಿರುವೆಯೆಂಬದರ ಎಚ್ಚರಿಕೆ ಇರುವದೆ?'' ಜಿಜಾಬಾಯಿಯು ಕೇಳಿದಳು.

"ಎಲ್ಲ ಪರಿವೆಯೂ ಉಂಟು. ಅಧಿಕಾರ ಮದದಿಂದ ನಾನೇನು ಎಚ್ಚರಗೆಟ್ಟಿರುವದಿಲ್ಲ.

''ಅಧಿಕಾರ ಮದವೆ? ಅವ್ವಾ, ನನ್ನ ಅಧಿಕಾರವು ನಿಮ್ಮ ಕಣ್ಣುಗಳಲ್ಲಿ ಒತ್ತುತ್ತಿರುವದಲ್ಲವೆ?''

''ಶಲ್ಯವು ಯಾರ ಕಣ್ಣಲ್ಲಾದರೂ ಚುಚ್ಚತಕ್ಕದ್ದೆ!'' ಎಂದು ತಾರಾಬಾಯಿಯು ಸಂಭಾಜಿಗೆ ಹೇಳಿದಳು.

''ಇಂಥ ಪಾಪಿಯಾದ ಕಣ್ಣುಗಳಲ್ಲಿ ಕಾದ ಸಲಾಕೆಗಳನ್ನೇ ಚುಚ್ಚಿಸಲಿಕ್ಕೆ ಬೇಕು!'' ಸಂಭಾಜಿಯು ಕ್ರೋಧದಿಂದ ನುಡಿದನು.

"ಗಂಡನ, ಮಗನ ಹಾಗು ಮೊಮ್ಮಕ್ಕಳ ಹಿಂದೆ ಇಷ್ಟಕ್ಕಾಗಿಯೇ ದೇವರು ನನ್ನನ್ನಿಟ್ಟಿರುವನು. ನಾನು ಇನ್ನೂ ಎಷ್ಟು ಯಾತನೆಗಳನ್ನು

ಭೋಗಿಸಬೇಕಾಗುವದೋ ಏನೊ!" ಎಂದು ತಾರಾಬಾಯಿಯು ರೋದಿಸುತ್ತ ನುಡಿದಳು.

"ಅಳು, ಮುದಾಡಿ! ಇದೇ ಮೇರೆಗೆ ಸಾಯುವವರೆಗೂ ಅಳು; ನೀನು ನಮ್ಮನ್ನು ಅಪಮಾನಗೊಳಿಸಿದ ಸೇಡನ್ನು ತೀರಿಸಿಕೊಳ್ಳದೆ ಬಿಡುವೆನೆ?" ಎಂದು ನುಡಿದು, ಜಿಜಾಬಾಯಿಯು ಅಲ್ಲಿಂದ ಎದ್ದು ಹೋದಳು. ಹಿಂದಿನಿಂದ ಸಂಭಾಜಿರಾಜನೂ ಹೊರಟು ಹೋದನು. ಅನಂತರದಲ್ಲಿ ಭಗವಂತರಾಯನು:-"ರಾಣೀಸಾಹೇಬರೆ! ಇಂದಿನ ಪ್ರಕರಣವು ಬಹಳೇ ಬೆಳೆಯಿತು."

"ಬಂದ ಸಂಕಟಕ್ಕೆ ನಾನು ಎದೆಗೊಡುವೆನು ಅದಕ್ಕಾಗಿ ನೀವು ಯೋಚಿಸಬೇಡಿರಿ." ಎಂದು ತಾರಾಬಾಯಿಯು ನುಡಿದು, ಉದ್ವಿಗ್ನತೆಯಿಂದ:—"ಬಾಲರಾಜನ ಕೊಲೆಯ ಸಂಗತಿಯು ನಿಜವಾಗಿರಬಹುದೆ?"

"ಈಗ ಈ ವಿಷಯದಲ್ಲಿ ಹೇಗೆ ಮತಕೊಡಬೇಕು? ನಾನು ಎಲ್ಲ ಸಂಗತಿಗಳನ್ನೂ ಶೋಧಿಸುವೆನು"

"ಈಗ ರಾತ್ರಿಯು ಬಹಳವಾಯಿತು. ಮಲಗಿಕೊಳ್ಳಲಿಕ್ಕೆ ಹೋಗಿರಿ." ಎಂದು ತಾರಾಬಾಯಿಯು ಅಮಾತ್ಯ-ಕಾರಭಾರಿಗಳಿಗೆ ಹೇಳಿ ಕಳಿಸಿ, ತಾನು ರಾಜಕುಮಾರನ ವಿಷಯಕ್ಕೆ ಆಲೋಚಿಸುತ್ತ ಕುಳಿತಳು ಕೆಲವು ಹೊತ್ತಿನ ಮೇಲೆ ದಾಸಿಯು ಬಂದು:—"ಅವ್ವನವರೆ! ಭವಾನಿಬಾಯಿಯವರನ್ನು ರಾಣೀಸಾಹೇಬರು ಸೆರೆಹಿಡಿದರು!" ಎಂದು ಹೇಳಿದಳು.

ಈ ಸುದ್ದಿಯನ್ನು ಕೇಳಿದ ಕೂಡಲೆ ತಾರಾಬಾಯಿಯ ಮೇಲೆ ವಿದ್ಯುತ್ಪಾತವಾದಂತಾಯಿತು! ಆಗ ಅವಳು: "ಅಯ್ಯೋ ದೈವವೇ!' ಎಂದು ಹಣೆ ಹಣೆ ಬಡಕೊಳ್ಳಹತ್ತಿದಳು. ಬೆಳಗಾದ ಕೂಡಲೆ ಜಿಜಾಬಾಯಿಯು ದಾಸ-ದಾಸಿಯರೊಡನೆ ಅಲ್ಲಿಗೆ ಬಂದು, ತಾರಾಬಾಯಿಯನ್ನೂ ಸೆರೆಹಿಡಿದಳು. ಅನಂತರದಲ್ಲಿ ಅವಳು ತಾರಾಬಾಯಿಯನ್ನು ಕುರಿತು:—"ನಿನ್ನ ಆ ನಾಡಭವಾನಿಯು ಓಡಿ ಹೋಗಬೇಕೆಂದು ಮಾಡಿದ್ದಳು. ಅವಳನ್ನು ಸೆರೆಯಲ್ಲಿರಿಸಿರುವೆನು. ನಿನಗಾಗಿಯೂ ಅಲ್ಲಿ ಸ್ಥಳವು ಕಾಯ್ದಿಡಲ್ಪಟ್ಟಿದೆ. ಮುದಾಡಿ! ಕಣ್ಣುಕಟ್ಟಿನಲ್ಲಿಟ್ಟರೆ ನಿನ್ನ ತಂತ್ರವು ನಿಲ್ಲುವದೆ? ಅನುಭವಿಸು, ಕತ್ತಲೆ ಕೋಣೆಯ ಸುಖವನ್ನು!"

"ಜಿಜಾ, ನೀನು ರಾಕ್ಷಸಿಯು! ಹಿರಿಯ ಮನುಷ್ಯರೆಂಬ ಮರ್ಯಾದೆಯನ್ನು ನೀನು ಕಾಯುವವಳಲ್ಲ. ಆ ಸಂಭ್ಯಾನೂ ನಿನ್ನಂತೆಯೇ ಅತ್ಯಾಚಾರಿಯಾದ ರಾಕ್ಷಸನಾಗಿರುವನು."

"ಬಾಯಿಮುಚ್ಚು, ಮುದಿಹಡ್ಡೆ! ಹಿರಿಯರೆಲ್ಲರೂ ಸ್ಮಶಾನಕ್ಕೆ ಹೋಗಿರು

ವರು. ನಿನಗೆ ಹಿರಿಯರೆಂದು ಆದಾರು ಅನ್ನುವರು?"

"ರಾಣೀಸಾಹೇಬರೆ!" ತಾರಾಬಾಯಿಯ ಪರಸೋಜಿಯೆಂಬ ಸೇವಕನು:-"ನೀವು ಹಿರಿ ಜನರಿಗೆ ಈ ಬಗೆಯಾಗಿ ಮಾತಾಡಬಾರದು. ನಮ್ಮಂಥ ಸೇವಕರೆದುರಿಗೆ ಪೂಜ್ಯರಾದ ಆಯಿಸಾಹೇಬರ ಉಪಮರ್ದ ಮಾಡುವದು ಉಚಿತವೆ?"

"ನನಗೆ ಬುದ್ಧಿಗಲಿಸುವೆಯಾ? ಆರಾಮುಖೋರಾ!" ಎಂದು ನುಡಿದವಳೇ ಜಿಜಾಬಾಯಿಯು ನಿಂತಲ್ಲಿಯೇ ಪರಸೋಜಿಯ ಶಿರವನ್ನು ಕಡಿದು ಚಲ್ಲಿದಳು!"

"ರಾಕ್ಷಸೀ ಅತ್ಯಾಚಾರ! ರಾಕ್ಷಸೀ ಅತ್ಯಾಚಾರ!" ತಾರಾಬಾಯಿಯು ಪ್ರಳಾಪಿಸುತ್ತ ನುಡಿದಳು.

ಶಾಹೂ ಮಹಾರಾಜನೊಡನೆ ಯುದ್ಧವನ್ನು ಹೂಡಬೇಕಾದುದರಿಂದ ಸೈನ್ಯವು ಶಿರೋಳಕ್ಕೆ ಕಳಿಸಲ್ಪಟ್ಟಿತ್ತು. ಸಂಭಾಜಿ, ಜಿಜಾಬಾಯಿ ಮೊದಲಾದ ರಾಜಪರಿವಾರವೂ, ಸೆರೆಯಲ್ಲಿ ಸಿಲುಕಿದ ತಾರಾಬಾಯಿ-ಭವಾನಿಬಾಯಿಯರೂ ಪನ್ಹಾಳಗಡದಿಂದ ಶಿರೋಳಕ್ಕೆ ಸಾಗಿದರು.





ಇತ್ತೀಚೆಗೆ ರಾಮದಾಸನ ವಿಷಯವಾಗಿ ಜನರಲ್ಲಿ ಪ್ರೇಮ-ಭಕ್ತಿ-ವಿಶ್ವಾಸ ಗಳು ಹಾರತೊಡಗಿದ್ದವು ಕೆಲವರು ರಾಮದಾಸನನ್ನು ರಾಜಕಾರಣವನ್ನು ಈಡೇರಿಸಲಿಕ್ಕೆ ವೇಷಾಂತರ ಧರಿಸಿ ಸಾಧುವೆಂದೂ, ಕೆಲವರು ಅವನನ್ನು ಚದುರೆಯ ಪತಿಯೆಂದೂ, ಕೆಲವರು ಚದುರೆಯ ಅಣ್ಣನೆಂದೂ ತಿಳಿದಿದ್ದರು. ಅಲ್ಪ ಸ್ವಲ್ಪ ಜನರು ಮಾತ್ರ ಇನ್ನೂ ಅವನ ವಿಷಯದಲ್ಲಿ ಮುಂಚಿನಂತೆ ಭಕ್ತಿ-ಶ್ರದ್ಧೆಗಳನ್ನಿಟ್ಟು ವರ್ತಿಸುತ್ತಿದ್ದರು. ರಾಜಪುತ್ರನೆಂದು ನಾಮನಿರ್ದೇಶ ಹೊಂದಿದ ಬಾಲಕನ ಕೊಲೆಯಾದ ಕೂಡಲೆ ಅವನು ಶಿರಾಳಿಯಿಂದ ಹೊರಟು ಬಹೇಬೋರಗಾಂವದ ಮಾರ್ಗವಾಗಿ ನರಸಿಂಹಪುರಕ್ಕೆ ಹೋದನು. ಅಲ್ಲಿ ಅವನಿಗೆ ಚದುರೆಯು ದೊರೆಯಲಿಲ್ಲ. ಬೈರಾಗಿಯು ಇಹಲೋಕವನ್ನು ತ್ಯಜಿಸಿದನೆಂಬದು ಅಲ್ಲಿಯ ಜನರಿಂದ ಗೊತ್ತಾಯಿತು. ಕೂಡಲೆ ಅವನು ನೈರಾಶ್ಯಗೊಂಡು, ಬಹೇಬೋರಗಾಂವಕ್ಕೆ ತಿರುಗಿ ಬಂದನು. ಅಲ್ಲಿ ಕೆಲವು ದಿನ ಇರುವಷ್ಟರಲ್ಲಿ ಸಂಭಾಜಿಯೂ ಜಿಜಾಬಾಯಿಯೂ ತನ್ನ ಮೇಲೆ ರುಷ್ಟ ರಾದ ವಾರ್ತೆಯು ಅವನಿಗೆ ಕರ್ಣೋಪಕರ್ಣವಾಗಿ ತಿಳಿಯಿತು. ಇನ್ನು ಮೇಲೆ ಇಲ್ಲಿರುವದು ಸುರಕ್ಷಿತವಲ್ಲೆಂದು ಅಜರೆಗೆ ಪ್ರಯಾಣ ಮಾಡಿ, ಅಲ್ಲಿಯ ರಾಮಲಿಂಗನ ದೇವಾಲಯದಲ್ಲಿ ಧ್ವಜವೂರಿದನು. ರಾಮದಾಸನ ವಿಷಯ ವಾಗಿ ಕೊಲ್ಹಾಪುರದ ಸಂಭಾಜಿರಾಜ-ಜಿಜಾಬಾಯಿಯರಂತೆ ಸಾತಾರೆಯ ಶಾಹುಮಹಾರಾಜನೂ ಬಾಜಿರಾಯ ಪೇಶ್ವೆಯೂ ಸಂತಪ್ತರಾಗಿದ್ದರು. ಪ್ರಳಯಕಾರಿಯಾದ ಅವನನ್ನು ಸೆರೆ ಹಿಡಿದು ಶಾಸನ ಮಾಡಬೇಕೆಂದು ಶ್ರೀ ಬ್ರಹ್ಮೇಂದ್ರ ಸ್ವಾಮಿಗಳು ಬಾಜೀರಾಯನಿಗೂ ಛತ್ರಪತಿಗೂ ದುಂಬಾಲ ಬಿದ್ದು ಹೇಳಿದ್ದರು. ಶಂಭುಸಿಂಗ ಜಾಧವನು ಅವನನ್ನು ಸೆರೆ ಹಿಡಿದು ತರು ವದಕ್ಕೆ ಒಪ್ಪಿಕೊಂಡಿದ್ದನು. ಮೊದಲು ಶಂಭುಸಿಂಗನು ಮಲ್ಹಾರಿಯೆಂಬ ಹೆಸರಿನಿಂದ ರಾಮದಾಸನ ಶಿಷ್ಯತ್ವದಲ್ಲಿದ್ದನು. ಆಗ ಅವನಿಗೆ ಈ ದೇವ-ರ್ಷಿಯ ರಹಸ್ಯವು ಬಹುಮಟ್ಟಿಗೆ ತಿಳಿದಿತ್ತು. ಕೆಲವು ದಿವಸಗಳಿಂದೀಚೆಗೆ ರಾಮದಾಸನು ಅಜ್ಞಾತವಾಸದಲ್ಲಿದ್ದುದರಿಂದ ಶಂಭುಸಿಂಗನಿಗೆ ಅವನ ಗೊತ್ತುವಳಿಯಾಗಲಿಲ್ಲ. ಆದರೂ ಅವನು ತನ್ನ ಶೋಧನೆಯ ಕೆಲಸವನ್ನು ಬಿಟ್ಟಿದ್ದಿಲ್ಲ.

-ರಾಮದಾಸನು ಅಜರೆಯಲ್ಲಿಯ ರಾಮಲಿಂಗನ ದೇವಾಲಯದಲ್ಲಿರ ತೊಡಗಿದಂದಿನಿಂದ ಅವನು ತನ್ನ ಪ್ರಭಾವವನ್ನು ಅಲ್ಲಿಯ ಜನರ ಮೇಲೂ

ಕೆಡಹಿದ್ದನು. ಘೋರಪಡೆ ವೆಂಕಟರಾಯನ ಪತ್ನಿಯೂ ಬಾಜೀರಾಯನ ಭಗಿನಿಯೂ ಆದ ಅನೂಬಾಯಿಯು ಈ ದೇವರ್ಷಿಯಲ್ಲಿ ಭಕ್ತಿಶ್ರದ್ಧೆಯುಳ್ಳವಳಾಗಿದ್ದಳು. ರಾಮದಾಸನು ಕರ್ತುಮಕರ್ತುಮನ್ಯಥಾಕರ್ತುಂ ಶಕ್ತಿಯುಳ್ಳವನೆಂಬದನ್ನು ಅವಳು ಮೊದಲೇ ಕೇಳಿದ್ದಳು. ಅಂಥವನು ತನ್ನ ಜಹಗೀರಿಯ ಗ್ರಾಮಕ್ಕೆ ಬಂದದ್ದರಿಂದ ಅವಳು ಮತ್ತಿಷ್ಟು ಶ್ರದ್ಧೆಯುಳ್ಳವಳಾದಳು. ಅವಳು ದಿನಾಲು ಅರುಣೋದಯದಲ್ಲೆದ್ದು ರಾಮಲಿಂಗನ ಹಾಗು ರಾಮದಾಸನ ದರ್ಶನಕ್ಕೆ ಹೋಗುವ ಪರಿಪಾಠವಿಟ್ಟಿದ್ದಳು. ಒಂದು ದಿನ ಪ್ರಾತಃಕಾಲಕ್ಕೆ ಅವಳು ರಾಮದಾಸನ ದರ್ಶನಕ್ಕಾಗಿ ಬಂದಿದ್ದಳು. ಆಗ ರಾಮದಾಸನು ಅನೂಬಾಯಿಯ ಕೈ ಹಿಡಿದು ಭವಿಷ್ಯವನ್ನು ಹೇಳತೊಡಗಿದ್ದನು. ಕೆಲವು ವೇಳೆ ಭವಿಷ್ಯಹೇಳಿದ ಮೇಲೆ ಅನೂಬಾಯಿಯು— "ಸ್ವಾಮಿ ಮಹಾರಾಜರೆ! ತ್ರಿಕಾಲಜ್ಞಾನಿಗಳಾದ ನಿಮ್ಮ ಪ್ರಭಾವವು ಅಗಾಧವಾದದ್ದಿರುವದು."

ಅನೂಬಾಯಿಯ ವರ್ಣನೆಯಿಂದ ರಾಮದಾಸನು ಹಿಗ್ಗಿದನು. ಅವನು ಅವಳ ಕೈಯನ್ನು ಮತ್ತಿಷ್ಟು ಎಳೆದು, ಅವಳನ್ನು ಪ್ರೇಮ ದೃಷ್ಟಿಯಿಂದ ನೋಡುತ್ತ:—"ಅನೂ, ನಿನಗೆ ನನ್ನಂತೆ ದಿವ್ಯದೃಷ್ಟಿಯು ಪ್ರಾಪ್ತವಾದರೆ, ನಾನು ಹೇಳುವ ಮಾತಿನ ಪ್ರತ್ಯಯವಾಗಬಹುದು."

"ಇಂಥ ಮಾತುಗಳು ನನಗೆ ಹೇಗೆ ತಿಳಿಯುವವು? ನಾನು ಮೂಢಮತಿಯಿರುವೆನು." ಎಂದು ಅನೂಬಾಯಿಯು ನಮ್ರಭಾವದಿಂದ ನುಡಿದಳು.

"ಅಂತೆಯೆ ನನ್ನ-ನಿನ್ನ ಗುರುವಿನ-ಮಾತಿನ ಮೇಲೆ ನಂಬಿಗೆಯಿಟ್ಟು ನಡೆಯಬೇಕೆಂದು ಹೇಳಿದೆನು." ಎಂದು ನುಡಿದು, ರಾಮದಾಸನು ಅನೂಬಾಯಿಯ ಎಡಗೈಯನ್ನು ದಿಟ್ಟಿಸಿ ನೋಡುತ್ತ:—"ನೋಡು! ನಿನ್ನ ಅನಂತ ಪೂರ್ವಜನ್ಮದೊಳಗಿನ ಕರ್ಮಗಳು ಸೂರ್ಯ-ಚಂದ್ರರಂತೆ ನನಗೆ ಸ್ಪಷ್ಟವಾಗಿ ಕಾಣಹತ್ತಿವೆ."

ಅನೂಬಾಯಿಗೆ ರಾಮದಾಸನ ಮನೋದಯವು ಸ್ಪಷ್ಟವಾಗಿ ತಿಳಿಯಿತು. ಅವಳು:—"ಸ್ವಾಮಿಯವರೆ! ಅದು ಹೇಗೆಯೋ ಇರಲಿ. ಇಂದು ಮಾತ್ರ ನಿಮ್ಮ ಬುದ್ಧಿಯು ಚಲ-ವಿಚಲವಾಗತೊಡಗಿರುವದೆಂದು ನನಗೆ ತೋರುತ್ತದೆ. ನನ್ನನ್ನು ಹೋಗಗೊಡಿರಿ. ಇಲ್ಲಿ ಅರಕ್ಷಣವಾದರೂ ಕುಳಿತುಕೊಳ್ಳಲಿಕ್ಕೆ ನನಗೆ ಭಯವೇನಿಸುವದು." ಎಂದು ನುಡಿದು, ಕೈಯನ್ನು ಕೊಸರಿಕೊಂಡು ಹೊರಗೆ ಹೋಗುವ ಯತ್ನಮಾಡತೊಡಗಿದಳು. ರಾಮದಾಸನು ಅವಳನ್ನು ಹೋಗಗೊಡದೆ:—"ಅನೂ! ಹೀಗೇಕೆ ಮಾಡುವೆ?

ಸ್ವಲ್ಪ ನಿಲ್ಲು!" ಎಂದು ನುಡಿದಷನೇ ಅನೂಬಾಯಿಗೆ ಅಡ್ಡಾಗಿ ಬಂದು ನಿಂತನು. ಅಷ್ಟರಲ್ಲಿ ಇಬ್ಬರು ಅಪರಿಚಿತರು ಆ ದೇವಾಲಯವನ್ನು ಪ್ರವೇಶಿಸಿದರು. ಅವರಲ್ಲಿ ಒಬ್ಬನು:—''ತಂಗಿ!'' ಎಂದು ಕೂಗಿದನು

ಮತ್ತೊಬ್ಬನು:—''ಗುರುಮಹಾರಾಜ!" ಎಂದು ಒದರಿದನು.

ಈ ಕೂಗಿನಿಂದ ಅನೂಬಾಯಿ-ರಾಮದಾಸರು ಬೆಚ್ಚಿಬಿದ್ದರು. ಅನೂಬಾಯಿಗೆ ಪ್ರಾಪ್ತಪರಿಸ್ಥಿತಿಯಿಂದ ಧೈರ್ಯಬಂದರೂ, ರಾಮದಾಸನಿಂದ ಜರುಗಿದ ಅಸಹ್ಯ ಕೃತ್ಯಕ್ಕಾಗಿ ಅವಳು ತಲೆಬಾಗಿಸಬೇಕಾಯಿತು. ಸಾಧ್ವೀ ಹೃದಯ! ರಾಮದಾಸನ ಹೇಸಿ ಕೃತ್ಯಕ್ಕಾಗಿ ಅವಳು ಬಹಳೇ ನೊಂದುಕೊಂಡಳು. ಆಗಂತುಕರನ್ನು ನೋಡಿ ರಾಮದಾಸನು ಹೌಹಾರಿದನು! ಅನೂಬಾಯಿಯು.—"ಅಣ್ಣಾ! ಅಣ್ಣಾ! ನೀವು ಯಾವಾಗ ಬಂದಿರಿ?'' ಎಂದು ಒಬ್ಬನನ್ನು ಕೇಳಿದಳು.

''ಇದೇ ಬಂದೆನು'' ಎಂದು ಅವನು ಹೇಳಿದನು.

"ಮಲ್ಲಾರಿ! ನೀನು ಇತ್ತಕಡೆಗೇಕೆ?" ಎಂದು ರಾಮದಾಸನು ಮತ್ತೊಬ್ಬನನ್ನು ಕೇಳಿದನು.

''ಗುರುಮಹಾರಾಜರ ದಿವ್ಯಪಾದಂಗಳ ದರ್ಶನಕ್ಕಾಗಿ ಬಂದೆನು.''

''ರಾಮದಾಸನು 'ಮಲ್ಲಾರಿ'ಯೆಂದು ಸಂಬೋಧಿಸಿದವನೂ, ಅನೂಬಾಯಿಯು 'ಅಣ್ಣಾ' ಎಂದು ಸಂಬೋಧಿಸಿದವನೂ ಶಂಭುಸಿಂಗ-ಬಾಜೀರಾಯರಾಗಿದ್ದರು.

''ಇವರು ಯಾರು?'' ಎಂದು ರಾಮದಾಸನು ಶಂಭುಸಿಂಗನನ್ನು ಕೇಳಿದನು.

''ಇವರೇ ಶ್ರೀಮಂತ ಪೇಶವೆ ಸರಕಾರ!''

ಬಾಜೀರಾಯನೆಂಬ ಹೆಸರು ಕೇಳಿದೊಡನೆಯೆ ರಾಮದಾಸನು ಅರೆಸತ್ತಂತಾದನು. ಇದೀಗ ತಾನು ಅನೂಬಾಯಿಗೆ ಸೈತಾನೀ ಉಪದೇಶ ಮಾಡಿದ್ದನ್ನು ಅವಳ ಅಣ್ಣನು ಕೇಳಿದನೆಂದು ಅವನು ಭಯಗೊಂಡನು. ಆಗ ಬಾಜೀರಾಯನು ರಾಮದಾಸನ ಕೃತ್ಯದಿಂದ ಸಂತಾಪಗೊಂಡಿದ್ದರೂ ಅವನಿಗೆ ಏನೂ ಅನ್ನದೆ, ಶಂಭುಸಿಂಗನನ್ನು ಕುರಿತು:—''ನೀವು ಈ ಸಾಧು ಮಹಾರಾಜರ ಸಮಾಚಾರ ತಕ್ಕೊಳ್ಳಿರಿ. ನಾನು ತಂಗಿಯೊಡನೆ ವಾಡೆಗೆ ಹೋಗುವೆನು'' ಎಂದು ಹೇಳಿ, ಅನೂಬಾಯಿಯೊಡನೆ ಅಲ್ಲಿಂದ ತೆರಳಿದನು. ದಾರಿಯಲ್ಲಿ ಅನೂಬಾಯಿಯೂ ಬಾಜೀರಾಯನೂ ಯಾವ ಮಾತುಗಳನ್ನೂ ಆಡಲಿಲ್ಲ. ರಾಮದಾಸನ ಅನುಚಿತ ಕೃತ್ಯವನ್ನು ನೋಡಿ ಅಣ್ಣನು ಮನಸ್ಸಿನಲ್ಲಿ ತನ್ನ ವಿಷಯವಾಗಿ ಏನಾದರೂ ವಿಕಲ್ಪಭಾವಿಸಿದನೋ ಏನೋ?

ಎಂದು ಅನೂಬಾಯಿಯು ಕ್ಲೇಶಪಡತೊಡಗಿದ್ದಳು. ಆ ವಿಷಯದಲ್ಲಿ ಅಣ್ಣನು ಏನಾದರೂ ಕೇಳಿದರೆ, ಏನು ಉತ್ತರ ಕೊಡಬೇಕೆಂದು ಅವಳು ಯೋಚಿಸತೊಡಗಿದಳು. ಬಾಜೀರಾಯನಿಗೆ ತನ್ನ ತಂಗಿಯ ಸಚ್ಛೀಲತೆಯ ವಿಷಯವಾಗಿ ತುಂಬಾ ನಂಬಿಗೆಯಿದ್ದಿತು. ರಾಮದಾಸನ ನೀಚಮನೋವೃತ್ತಿ ಯನ್ನಾದರೂ ಅವನು ಕಂಡುಹಿಡಿದಿದ್ದನು. ಆದ್ದರಿಂದಲೇ ದೇವಾಲಯದಲ್ಲಿ ನಡೆದ ವಿಷಯದ ಬಗ್ಗೆ ಮಾತಾಡಿ, ತಂಗಿಯ ಮನಸ್ಸನ್ನು ನೋಯಿಸಬಾರ ದೆಂದು ಅವನು ಗೊತ್ತುಮಾಡಿಕೊಂಡಿದ್ದನು. ವಾಡೆಗೆ ಬಂದ ಮೇಲೆ ಅವನು ಅನೂಬಾಯಿಯನ್ನು ಕುರಿತು:—"ತಂಗೀ! ವೆಂಕಟರಾಯರು ಎಲ್ಲಿರುವರು?"

"ಉದಾಜಿ ಚವ್ಹಾಣನು ಅಗತ್ಯದಿಂದ ಕರೆಯಿಸಿದ್ದರಿಂದ ಅವನ ಕಡೆಗೆ ಹೋಗಿರುವರು. ಹೋಗಿ ಎಂಟು ದಿನಗಳಾದವು."

"ಯಾತಕ್ಕೆ ಹೋಗಿರುವರು?"

"ಚವ್ಹಾಣನೂ ಸಂಭಾಜಿರಾಜರೂ ನಮ್ಮ ಜಹಾಗೀರಿಯ ವಿಷಯ ವಾಗಿ ಇಲ್ಲದ ವ್ಯಾಜ್ಯ ಹೂಡಿರುವರು."

"ಇಷ್ಟೇ ಯೊ?"

"ಮತ್ತೇನಾದರೂ ಕೆಲಸವಿತ್ತೋ ಹೇಗೆಂಬದು ನನಗೆ ಗೊತ್ತಾಗಲಿಲ್ಲ. ಒಟ್ಟಿನ ಮೇಲೆ ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಕೆಲವು ದಿವಸಗಳ ಹಿಂದೆ ಪ್ರತಿನಿಧಿ ಬಂಧುಗಳೂ ಮುತಾಲಿಕನೂ ಬಂದಿದ್ದರು. ಇವರ ಸಂಗಡ ಅವರು ಏನೇನೋ ಅರೆದಾಟ ನಡೆಯಿಸಿದ್ದರು. ಆ ಮಾತುಗಳು ನನಗೆ ಚನ್ನಾಗಿ ಕೇಳಿಸಲಿಲ್ಲ ಒಟ್ಟಿನ ಮೇಲೆ ಶಾಹೂ ಮಹಾರಾಜರ ವಿರುದ್ಧವಾಗಿ ಭಯಂ ಕರ ಕಾರಸ್ಥಾನಗಳು ನಡೆದಿರುವವೆಂದು ನನಗೆ ತಿಳಿಯಿತು. ಸಂಭಾಜಿ ರಾಜರು ಶಾಹೂ ಮಹಾರಾಜರೊಡನೆ ಯುದ್ಧವನ್ನು ಪ್ರಾರಂಭಿಸುವರೆಂಬ ಲಕ್ಷಣ ತೋರುವದು."

"ಲಕ್ಷಣವೇಕೆ? ಯುದ್ಧವು ಪ್ರಾರಂಭವಾಗಿಬಿಟ್ಟದೆ.'

"ಸದ್ಯಕ್ಕೆ ಕೊಲ್ಹಾಪುರದ ಪಕ್ಷದ ಸರದಾರರೆಲ್ಲರೂ ರಣಭೂಮಿಯ ಮೇಲೆ ಇನ್ನೂ ಬಂದಿಲ್ಲ. ಚವ್ಹಾಣನೊಬ್ಬನು ಮಾತ್ರ ಈಗ ಎದೆಗೊಟ್ಟು ನಿಂತಿರುವನು. ತಮ್ಮ ಪಕ್ಷವನ್ನು ಹಿಡಿದು ಯುದ್ಧಮಾಡಬೇಕೆಂದು ನಮ್ಮವ ರಿಗೆ ಸಂಭಾಜಿರಾಜರೂ ಚವ್ಹಾಣನೂ ಒತ್ತಾಯ ಮಾಡುತ್ತಿರುವರು. ನಾವು ಕೊಲ್ಹಾಪುರದವರ ಪಕ್ಷವನ್ನು ಹಿಡಿದು ಯುದ್ಧ ಮಾಡದಿದ್ದರೆ ಅಜರೆ ಮಹಾ ಲನ್ನು ಕಸಿದುಕೊಳ್ಳುವೆವೆಂದು ಸಂಭಾಜಿರಾಜರು ಭಯ ತೋರಿಸತೊಡಗಿ-ರುವರಂತೆ!"

“ಅಜರೆ ಮಹಾಲಿಗೆ ಸಂಭಾಜಿರಾಜರ ಸಂಬಂಧವೇನು? ಮಹಾಲು ಕೊಟ್ಟವರು ಶಾಹೂಮಹಾರಾಜರು.”

“ಇದೇ ಸಂಗತಿಯನ್ನು ನಾನು ನಮ್ಮವರಿಗೆ ಹೇಳಿದೆನು; ಆದರೆ ನನ್ನ ಹೇಳಿಕೆಯು ಉಪಯೋಗವಾಗಲಿಲ್ಲ.”

“ಒಟ್ಟಿನ ಮೇಲೆ ವೆಂಕಟರಾಯರು ಉಂಡ ಮನೆಯ ಗಳ ಎಣಿಸಲಿಕ್ಕೆ ಸಿದ್ಧರಾಗಿರುವರೆಂದಂತಾಯಿತು. ಈ ಸಂಗತಿಯು ನನಗೆ ತುಸಮಟ್ಟಿಗೆ ತಿಳಿದದ್ದರಿಂದಲೇ ನಾನು ಇಷ್ಟು ಲಗುಬಗೆಯಿಂದ ಇಲ್ಲಿಗೆ ಬಂದೆನು.”

“ಅವರು ಬಹಳಮಾಡಿ ಕೊಲ್ಹಾಪುರದವರ ಪಕ್ಷ ಹಿಡಿಯಲಿಕ್ಕಿಲ್ಲ.”

“ಯಾತರ ಮೇಲಿಂದ?”

“ಆದರಂತೆ ಅವರು ಪ್ರತಿಜ್ಞೆ ಮಾಡಿರುವರು.”

“ವೆಂಕಟರಾಯರು ಕೊಲ್ಹಾಪುರದವರ ಪಕ್ಷಕ್ಕೆ ಸೇರಿರುವರೆಂಬದು ನನಗೆ ಗೊತ್ತಾಗಿದೆ. ಇದರಿಂದ ಅವರು ದೊಡ್ಡ ಕೆಲಸವನ್ನೇನೂ ಮಾಡಿದಂತಾಗಲಿಲ್ಲ ಅವರು ಮನೋದೌರ್ಬಲ್ಯದವರು. ನಮ್ಮ ಬಾಯಿ, ನಮ್ಮ ನಾಲಿಗೆಯೆಂದು ಮಾತಾಡಬಾರದಾಗಿದೆ. ವೆಂಕಟರಾಯರು ಶಾಹೂಮಹಾರಾಜರ ವಿರುದ್ಧವಾಗಿ ನಿಂತದ್ದು ಅನ್ಯಾಯವು ಮಹಾರಾಜರ ಕಡೆಯಿಂದ ಅಜರೆ ಜಹಾಗೀರಿಯು ದೊರೆತದ್ದು ಅವರ ಪರಾಕ್ರಮದಿಂದಲ್ಲ; ಪೇಶವೆಯ ಭಗಿನಿಯ ಪುಣ್ಯವು ಅವರಿಗೆ ಫಲವಿತ್ತಿರುವದು. ಪರಾಕ್ರಮದಿಂದ ಮಹಾರಾಜರ ಮನಸ್ಸನ್ನು ಪ್ರಸನ್ನಗೊಳಿಸಿ, ರಾಜ್ಯಕರ್ತರ ಮಾಲಿಕೆಯಲ್ಲಿ ಬಹು ಮಾನದಿಂದ ಕುಳಿತುಕೊಳ್ಳುವ ಯೋಗ್ಯತೆಯೂ ಪಾತ್ರತೆಯೂ ಇರದಿದ್ದರೆ ಇಲ್ಲ; ರಾಜನಿಷ್ಠೆಯೂ ಸ್ವರಾಜ್ಯಾಭಿಮಾನವೂ ರಾಷ್ಟ್ರಪ್ರೇಮವೂ ಇದ್ದರೆ ಎಷ್ಟೋ ಲೇಸಾಗುತ್ತಿತ್ತು. ನಿಜಾಮನಂತಹ ಬಲಾಢ್ಯ ಶತ್ರುಗಳನ್ನು ಹಲ್ಲಿನಲ್ಲಿ ಕಡ್ಡಿಕಚ್ಚಿಕೊಂಡು ಕುಳಿತುಕೊಳ್ಳಹಚ್ಚಿದ ಪೇಶವೆಗೆ, ಕೊಲ್ಹಾಪುರದವರ ಪೀಡೆಯನ್ನು ನಿವಾರಣೆ ಮಾಡುವದು ಅಸಾಧ್ಯವಿರುವದೇನು? ವೆಂಕಟರಾಯರು ಸಾರಾಸಾರ ವಿಚಾರ ಮಾಡದೆ ಶತ್ರುಗಳನ್ನು ಕೂಡಿದರು. ಪೇಶವೆಯ ಬೀಗನು ಒಡೆದನೆಂಬ ಮಾತು ನನ್ನ ಗೌರವಕ್ಕೆ ಕಲಂಕವನ್ನುಂಟು ಮಾಡುವಂತಹದಲ್ಲವೆ? ಆಪ್ತ-ಸ್ವಕೀಯತನದ ಸಂಬಂಧವನ್ನು ಮರೆತು ಶಸ್ತ್ರವೆತ್ತುವದೆಂದರೆ, ಪರ್ಯಾಯದಿಂದ ಬೆನ್ನಿಲೆ ಬಿದ್ದ ತಂಗಿಯ ಸೌಭಾಗ್ಯದ ಮೇಲೆ ಪ್ರಹಾರ ಮಾಡಿದಂತಾಗುವದಿಲ್ಲವೆ? ಪರಮೇಶ್ವರಾ! ಇಂಥ ಕಟುಕರ್ತವ್ಯವನ್ನು ನೀನು ನನ್ನ ಪಾಲಿಗೆ ತರಬಾರದಾಗಿತ್ತು!”

“ಅಣ್ಣಾ!” ಅನೂಬಾಯಿಯು ಬಾಜೀರಾಯನನ್ನು ಕುರಿತು:--“ನೀವು

ಅವರ ಮೇಲೆ ಹೀಗೆ ಸಿಟ್ಟಾದರೆ ಹೇಗೆ ನಡೆಯುವದು? ಅವರಿಂದ ಅಪರಾಧವು ಘಟಿಸಬಾರದಾಗಿತ್ತು; ಆದರೆ ಅಪರಾಧವಾಯಿತೆಂದು ಅವರನ್ನು ಉಪೇಕ್ಷಿಸ ಬಹುದೆ?'' -

''ಈ ಮಾತು ನಿಜವು; ಆದರೆ ಇಂಥ ಸ್ಥಿತಿಯಲ್ಲಿ ನಾನು ಏನು ಮಾಡಲಿ? ಆಪ್ತತ್ವದಿಂದ ಇವತ್ತಿನ ವರೆಗೆ ನಾನು ವೆಂಕಟರಾಯರ ಕಲ್ಯಾಣ ಕ್ಕಾಗಿ ಯಾವ ಕೆಲಸ ಮಾಡುವುದುಳಿದಿರುವದು? ಅವರು ಬಹಿರಂಗದಲ್ಲಿ ಶತ್ರು ಪಕ್ಷವನ್ನು ವಹಿಸಿರಲು ನನ್ನ ಬೀಗರನ್ನು ರಕ್ಷಿಸಬೇಕೆಂದು ಪ್ರತಿನಿಧಿಗಳಿಗೆ ಯಾವ ಬಾಯಿಂದ ಹೇಳಲಿ? ಪ್ರಸ್ತುತ ಸಂಗ್ರಾಮದ ನಾಯಕತ್ವವನ್ನು ಮಹಾರಾಜರು ಬುದ್ಧಿಪೂರ್ವಕವಾಗಿ ಪ್ರತಿಸಿಧಿಯಕಡೆಗೆ ಒಪ್ಪಿಸಿರುತ್ತಾರೆ.''

"ಪ್ರತಿನಿಧಿಗಳೇ ಮೊದಲು ಇವರಿಗೆ ಇಲ್ಲದ್ದೊಂದು ಬೋಧಿಸಿ ಮನಸ್ಸು ಕೆಡಿಸಿದವರು."

''ನಮ್ಮ ಕೈಯು ಕೆಟ್ಟದ್ದು. ಆದಕ್ಕೆ ಯಾರೇನು ಮಾಡಬೇಕು?'' ಎಂದು ನುಡಿಯುತ್ತಿರುವಾಗ ಬಾಜೀರಾಯನ ನೇತ್ರಗಳು ಅಶ್ರುಪೂರ್ಣ ವಾಗಿದ್ದವು. ಅವುಗಳನ್ನು ಅವನು ತನ್ನ ದೋತರದಿಂದ ಒರಸಿಕೊಂಡು:— ''ತಂಗಿ! ಪೇಶವೆ ಮನೆತನಕ್ಕೆ ಕಲಂಕ ಹಚ್ಚುವ ಕೃತ್ಯವು ವೆಂಕಟರಾಯ ರಿಂದ ಘಟಿಸಿತು. ಭಾರತೀಯ ಮಹಾಯುದ್ಧದಲ್ಲಿ ತನ್ನ ಬಂಧುಗಳ ಮೇಲೆಯೇ ಶಸ್ತ್ರಾಸ್ತ್ರಗಳನ್ನೆತ್ತುವ ಪ್ರಸಂಗವೊದಗಿದಾಗ ಅರ್ಜುನನು ಹೇಗೆ ತೊಂದರೆಯಲ್ಲಿ ಬಿದ್ದಿದ್ದನೋ, ಆದೇ ತೊಂದರೆಯು ನನ್ನ ಪಾಲಿಗೂ ಬರುವ ಚಿಹ್ನಗಳು ಕಾಣುತ್ತಿರುವವು ನನ್ನ ಮಧ್ಯಸ್ಥಿಕೆಯ ಉಪಯೋಗವಾಗದ ಮೇಲೆ ಹಾಗೆಯೇ ಪ್ರಸಂಗವೊದಗುದದು. ಆಗ ನಾನು ಆಪ್ತ-ಸ್ವಕೀಯ ತನವನ್ನು ಮುಂದೆ ತಂದರೆ, 'ಪೇಶವೆಯ ಬೋಧದಿಂದ ವೆಂಕಟರಾಯನು ಒಡೆದಿರುವನೆ'ಂದು ಮೊದಲೇ ಸಾರುತ್ತಿರುವ ಶ್ರೀಪತಿರಾಯಪ್ರತಿನಿಧಿ ಯಂತಹ ಜನರಿಗೆ ಮತ್ತಿಷ್ಟು ಸಂಧಿದೊರೆತಂತಾಗುವದು."

''ಮುಂದೆ ಗತಿ ಏನು?" ಅನೂಬಾಯಿಯು ಭಯವಿಹ್ವಲಳಾಗಿ ಕೇಳಿ ದಳು.

''ಆದೇ ದೊಡ್ಡ ಪ್ರಶ್ನೆಯು. ವೆಂಕಟರಾಯರನ್ನು ಉಳಿಸ ಹೋದರೆ, ರಾಜದ್ರೋಹಿ-ಸ್ವರಾಜ್ಯದ್ರೋಹಿಯೆಂಬ ಅಪಕೀರ್ತಿ ಬರುವದು; ಸ್ವರಾಜ್ಯದ ಗೌರವನ್ನು ಕಾಯಹೋದರೆ, ಒಡಹುಟ್ಟಿದ ತಂಗಿಯ ಮೋರೆಯನ್ನು ಸಹ ನೋಡಲಿಲ್ಲೆಂಬ ಅಪಯಶಬರುವದು. ವೆಂಕಟರಾಯರು ನನ್ನ ಉಪದೇಶ ದಿಂದ ದಾರಿಗೆ ಬರದಿದ್ದರೆ ದೊಡ್ಡ ಸಂಕಟವೇ ಪ್ರಾಪ್ತವಾಗುವದು."



ಅವರು ಹಟವನ್ನೇ ಹಿಡಿದರೆ ವೀರಭಗಿನಿಯೂ ಸ್ವರಾಜ್ಯ ಭಕ್ತಳೂ ಆದ ನಾನು ಪತಿ-ಪತ್ನಿಯರೆಂಬ ಪಾರ್ಥಿವ ಸಂಬಂಧವನ್ನು ಮರೆತು, ಪತಿವಿರೋಧಿಯಾಗಿ ಯುದ್ಧಕ್ಕೆ ಸನ್ನದ್ಧಳಾಗುವಳೇ! (ಪುಟ ೧೪೦)

"ನಾನೂ ನಿಮ್ಮೊಡನೆ ಇಚಲಕರಂಜಿಗೆ ಬಂದು, ಅವರಿಗೆ ಎರಡು ಮಾತು ಹೇಳಬೇಕೆಂದಿರುವೆನು."

"ನನ್ನ ಮಾತುಗಳನ್ನೇ ಕೇಳುವರೋ-ಇಲ್ಲವೋ ಸಂಶಯವಿದೆ. ಇಂಥ ಸ್ಥಿತಿಯಲ್ಲಿ ನೀನು ಬಂದು ಮಾಡುವದೇನು?"

"ಅಣ್ಣಾ, ಅವರು ನಿಮ್ಮ ಮಾತಿನಂತೆ ನಡೆಯದಿದ್ದರೆ ನೀವು ನಿಮ್ಮ ಕರ್ತವ್ಯವನ್ನು ಅವಶ್ಯವಾಗಿ ನೆರವೇರಿಸಿರಿ. ಸ್ವದೇಶಾಭಿಮಾನ-ಸ್ವಾಮಿ ನಿಷ್ಠೆಗಳು ಯಾರ ರಕ್ತದಲ್ಲಿ ವಾಸಿಸಿರುವವೋ ಅಂಥವರ ಮನೆತದಲ್ಲಿ ಜನಿಸಿದ ನಾನು, ಕರ್ತವ್ಯಕ್ಕಾಗಿ ಸ್ವಜನಶಾಸನ ಮಾಡುವಂಥ ನಿಮಗೆ ಎಂದೂ ಅಡ್ಡಾಗುವದಿಲ್ಲ. ಕರ್ತವ್ಯಚ್ಯುತಿಹೊಂದಿದ ಅವರನ್ನು ಕರ್ತವ್ಯಕ್ಕೆ ತೊಡಗಿಸುವದು ಅವರ ಸಹಧರ್ಮಚಾರಿಣಿಯಾದ ನನ್ನ ಕರ್ತವ್ಯವಿರುವದು. ಅಂತೆಯೇ ನಾನು ನಿಮ್ಮೊಡನೆ ಇಚಲಕರಂಜಿಗೆ ಬರಬೇಕೆನ್ನುವೆನು."

ಅನೂಬಾಯಿಯು ಹೀಗೆ ನುಡಿಯುವಷ್ಟರಲ್ಲಿ ಶಂಭುಸಿಂಗನು ರಾಮಲಿಂಗನ ದೇವಾಲಯದಿಂದ ಅಲ್ಲಿಗೆ ಬಂದನು. ಕೂಡಲೆ ಪೇಶವೆಯು ಅವನನ್ನು ಕುರಿತು:—"ರಾಮದಾಸನೆಲ್ಲಿ?" ಎಂದು ಕೇಳಿದನು.

"ನಾನು ಅವನನ್ನು ಬುದ್ಧಿಪೂರ್ವಕವಾಗಿ ಸೆರೆಹಿಡಿಯಲಿಲ್ಲ; ಯಾಕಂದರೆ, ಈಗ ಅವನ ಹಾಗು ಚವ್ಹಾಣ-ಸಂಭಾಜಿರಾಜರ ನಡುವೆ ವೈರಭಾವವು ಉತ್ಪನ್ನವಾಗಿರುವದರಿಂದ, ಅವರ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ರಾಮದಾಸನು ಸಂಕಲ್ಪಮಾಡಿಕೊಂಡಿರುವನು. ಮಹಾರಾಜರ ಹಾಗು ನಿಮ್ಮ ಮೇಲೆ ಅವನು ತನ್ನ ವಾಮಮಾರ್ಗೀಯ ವಿದ್ಯೆಯ ಉಪಯೋಗ ಮಾಡಿದ್ದರೆ, ಅದನ್ನು ಅವನಿಂದಲೇ ನಿವಾರಣೆ ಮಾಡಿಸಲಿಕ್ಕೆ ಸಂಧಿಯು ದೊರೆತಿದೆ. ಅದಕ್ಕಾಗಿ ನಾನು ಅವನನ್ನು ಸೆರೆಹಿಡಿಯಲಿಲ್ಲ. ಅವನಿಂದ ನಮಗೆ ಪ್ರಯೋಜನವಾಗದಿದ್ದರೆ ಆಗಿಂದಾಗಲೆ ಶಾಸನ ಮಾಡಲಿಕ್ಕೆ ಬರುವದಿಲ್ಲವೆಂಬಂತಿಲ್ಲ." ಎಂದು ಶಂಭುಸಿಂಗನು ಹೇಳಿದನು.

"ಅವನು ನಿಮಗೆ ಇಲ್ಲದ್ದೊಂದು ಹೇಳಿ ಪಾರಾಗಲಿಕ್ಕೆ ಹಂಚಿಕೆ ತೆಗೆದಿದ್ದರೆ?"

"ಹಾಗಿದ್ದರೆ ಅವನು ಎಲ್ಲಿ ಪಾರಾಗಿ ಹೋಗುವನು? ಅವನು ನೀಚ ಮನೋವೃತ್ತಿಯವನೆಂಬದು ಗೊತ್ತಾಗಿದ್ದರೂ, ನಾನು ಸ್ವಕಾರ್ಯವನ್ನು ಈಡೇರಿಸಿಕೊಳ್ಳುವದಕ್ಕಾಗಿ ಅವನನ್ನು ಬಂಧನೆಗೊಳಪಡಿಸಲಿಲ್ಲ."

"ಒಳ್ಳೇದು. ಪ್ರಸಂಗ ಹೇಗ್ಹೆಬರುವದೋ ನೋಡೋಣ." ಎಂದು ಬಾಜೀರಾಯನು ನುಡಿಯುವಷ್ಟರಲ್ಲಿ, ಒಬ್ಬ ದೂತನು ಅಲ್ಲಿಗೆ ಬಂದು ಬಾಜೀ

ರಾಯನಿಗೂ ಶಂಭುಸಿಂಗನಿಗೂ ನಮಸ್ಕಾರ ಮಾಡಿ, ಶಂಭುಸಿಂಗನನ್ನು ಕುರಿತು:—"ಕಾಗಲದ ಬಳಿಯಲ್ಲಿದ್ದ ನಿಮ್ಮ ಪಾಳ್ಯದ ಮೇಲೆ ದಾಳೀಮಾಡ ಬೇಕೆಂದು ಶತ್ರುಗಳು ಹೊಂಚು ಹಾಕಿದ್ದಾರೆ.'' ಎಂದು ಹೇಳಿದನು.

ಈ ಸುದ್ದಿಯನ್ನು ಕೇಳಿ ಬಾಜೀರಾಯನು ತನ್ನ ಕಾರ್ಯಕ್ರಮವನ್ನು ಬದಲಿಸಬೇಕಾಯಿತು. ಮೊದಲು ಕಾಗಲಕ್ಕೆ ಹೋಗಿ ಶತ್ರುಗಳ ನಿರ್ಮೂಲ ಮಾಡಿದ ಮೇಲೆ, ವೆಂಕಟರಾಯನ ಭೆಟ್ಟಿಗೆ ಹೋಗಬೇಕೆಂದು ಅವನು ನಿರ್ಧರಿಸಿದನು. ಆಗ ಅವನು ವೆಂಕಟರಾಯನಿಗೆ ಒಂದು ಪತ್ರವನ್ನು ಬರೆದು ಇಚಲಕರಂಜಿಗೆ ಕಳುಹಿಸಿದನು. ಶಾಹೂಮಹಾರಾಜರ ವಿರುದ್ಧ ವಾಗಿ ನಡೆಯುವದೆಂದರೆ ಉಂಡ ಮನೆಯ ಗಳ ಎಣಿಸಿದಂತಾಗುವದೆಂಬ ಆಶ ಯವು ಆ ಪತ್ರದಲ್ಲಿತ್ತು. ಪತ್ರವು ದೂತರೊಡನೆ ಕಳುಹಿಸಲ್ಪಟ್ಟಿತು. ಶಂಭು ಸಿಂಗ, ಅನೂಬಾಯಿ, ಬಾಜೀರಾಯ ಮೊದಲಾದವರು ಕಾಗಲದ ಬಳಿ ಯಲ್ಲಿದ್ದ ತಮ್ಮ ಪಥಕಕ್ಕೆ ಬಂದರು. ಅಲ್ಲಿ ಸರ್ಜೇರಾಯ ಘಾಟಗೆಯು ಶಂಭು ಸಿಂಗನ ಸೈನ್ಯದ ಮೇಲೆ ಬಿದ್ದನು ಶಂಭುಸಿಂಗನು ಮಹಾಶೂರನಿದ್ದನು ಅವನು ಘಾಟಗೆಯನ್ನು ಪರಾಭವಗೊಳಿಸಿದನು. ಘಾಟಗೆಯು ತನ್ನ ಉಳಿದ ಸೈನ್ಯದೊಡನೆ ಆತ್ಮರಕ್ಷಣೆಗೆಂದು ಸಂಭಾಜಿಯ ಆಶ್ರಯಕ್ಕಾಗಿ ಶಿರೋಳಕ್ಕೆ ಓಡಿದನು.

ಘಾಟಗೆಯನ್ನು ಸೋಲಿಸಿದ ಮೇಲೆ ಬಾಜೀರಾಯನೂ ಶಂಭು ಸಿಂಗನೂ ಕಾಗಲದಲ್ಲಿಯ ಶಂಭುಸಿಂಗನ ಪಾಳ್ಯದಲ್ಲಿಯೇ ಎರಡುದಿನ ಉಳಿ ದರು. ಅಷ್ಟರಲ್ಲಿ ಘೋರ್ಪಡೆ ವೆಂಕಟರಾಯನ ಕಡೆಗೆ ಹೋದ ದೂತನು ಬಾಜೀರಾಯನ ಪತ್ರದ ಉತ್ತರವನ್ನು ತೆಗೆದುಕೊಂಡು ಬಂದನು. ಬಾಜೀ ರಾಯನು ಆ ಪತ್ರವನ್ನು ಓದಿ ನಿಟ್ಟುಸಿರು ಬಿಟ್ಟನು. ಆಗ ಅನೂಬಾಯಿಯು: "ಅಣ್ಣಾ! ಅವರು ಕ್ಷೇಮವಾಗಿರುವರೆ?"

"ಕ್ಷೇಮವಾಗಿರುವರು"

"ಪತ್ರವನ್ನೇನು ಬರೆದಿರುವರು?"

"ಶಂಭುಸಿಂಗ, ಈ ಪತ್ರವನ್ನೋದಿರಿ!'' ಎಂದು ಬಾಜೀರಾಯನು ಪತ್ರವನ್ನು ಅವನ ಕೈಯಲ್ಲಿ ಕೊಟ್ಟನು.

ಶಂಭುಸಿಂಗನು ಪತ್ರವನ್ನೋದತೊಡಗಿದನು:—

"ಶ್ರೀಮಂತ ಬಾಜೀರಾವ ಪೇಶ್ವೆ ಇವರಿಗೆ—

ಪೋಷ್ಯ ವೆಂಕಟರಾವ ಘೋರಪಡೆ ಮಾಡುವ ಶಿ. ಸಾ. ನ. ವಿ. ವಿ. ತಾವು ಕಳುಹಿಸಿದ ಪತ್ರ ತಲುಪಿತು. ನೀವು ಬರೆದಂತೆ ಶಾಹೂ ಮಹಾ

ರಾಜರ ಪಕ್ಷ ಸ್ವೀಕರಿಸಿ, ಸಂಭಾಜಿರಾಜರ ಪ್ರತಾರಣೆ ಮಾಡುವಂಥ ನೀಚನು ನಾನಲ್ಲ. ಶಾಹೂಮಹಾರಾಜರು ನಮಗೆ ಅಜರೆ ಮಹಾಲು ಕೊಟ್ಟು ವೈಭವವನ್ನು ಬೆಳೆಯಿಸಿದರೆಂದು ನೀವು ಅನ್ನುತ್ತೀರಿ, ಆದರೆ ಕೇವಲ ದಾನ ಪತ್ರ-ಪಾರಿತೋಷಕ ಪತ್ರಗಳಿಂದ ಪ್ರಯೋಜನವೇನು? ಇಂಥ ಪತ್ರಗಳಿಂದ ಇಡೀ ಪೃಥ್ವಿಯನ್ನೇ ಒಬ್ಬ ಹಾದಿಕಾರನು ಯಾರಿಗಾದರೂ ಧಾರೆಯೆರೆದು ಕೊಡಬಹುದು; ಆದರೆ ಉಪಯೋಗವೇನು? ಶಾಹೂಮಹಾರಾಜರು ಆಜರೆ ಜಹಾಗೀರಿಯನ್ನು ಪಾರಿತೋಷಕವಾಗಿ ಕೊಟ್ಟದ್ದು ನಿಜ; ಆದರೆ ಆ ಪ್ರಾಂತ ದಲ್ಲಿ ಕೊಲ್ಹಾಪುರದವರ ವರ್ಚಸ್ಸು ಎದ್ದಾಗ ನಮ್ಮನ್ನು ಯಾರು ಕೇಳಬೇಕು? ಜಹಾಗೀರಿಯು ಸ್ವಾಧೀನದಲ್ಲುಳಿಯುವದಕ್ಕಾಗಿ ನಾವು ಕೊಲ್ಲಾಪುರದವರ ಪಕ್ಷವನ್ನು ವಹಿಸದಿದ್ದರೆ ಗತ್ಯಂತರವಿಲ್ಲೆಂಬದನ್ನು ತಿಳಿದೇ ನಾವು ಸಂಭಾಜಿ ರಾಜರನ್ನು ನಮ್ಮ ಪ್ರಭುಗಳೆಂದು ತಿಳಿದುಕೊಂಡಿರುವೆವು. ಅಂತೆಯೇ ಅಲ್ಪ ಸ್ವಲ್ಪ ಜಹಾಗೀರಿಯು ಉಳಿದಿದೆ ಸಾಮೋಪಚಾರದ ವೇಳೆಯಲ್ಲಿ ನಮಗೆ ಸಾತಾರೆಯವರೂ ಕೊಲ್ಹಾಪುರದವರೂ ವಂದ್ಯರೇ ಇರುವರು; ಆದರೆ ಪ್ರಸಂಗ ದಲ್ಲಿ ನಮ್ಮ ಜಹಾಗೀರಿಯನ್ನು ನಡಯಿಸುವಂಥ ಕೊಲ್ಹಾಪುರದವರ ಸಹಾಯಕ್ಕಾಗಿ ಧಾವಿಸುವದು ನಮ್ಮ ಕರ್ತವ್ಯವಾಗಿದೆ. ಅವರು ಹೇಳಿದಂತೆ ನಡೆಯದಿದ್ದರೆ, ಅವರು ನಮ್ಮ ಮಂದಿರದ ಮೇಲೆ ರಂಟೆ ಹೊಡೆಯಿಸದೆ ಬಿಡುವರೆ? ಧನಿಗಳಾದ ಕೊಲ್ಹಾಪುರದ ರಾಜ್ಯಾಧಿಕಾರಿಗಳ ಸೇವೆ ಮಾಡು ವದು ನಮ್ಮ ಕರ್ತವ್ಯವಾಗಿದೆ. ಈ ಸೇವೆಯಿಂದ ಪರಾವರ್ತನಗೊಳಿಸುವ ಪ್ರಯತ್ನ ಮಾಡದಿರುವುದೇ ನಿಮಗೆ ಉಚಿತವಾಗಿರುವದು. ಆಪ್ತಸಂಬಂಧ ವನ್ನು ಇಂಥ ವೇಳೆಯಲ್ಲಿ ಲಕ್ಷಿಸಲಿಕ್ಕೆ ಬರುವದಿಲ್ಲ. ಶ್ರೀಪತಿರಾಯರ ವಿರುದ್ಧವಾಗಿ ಕೃಷ್ಣರಾಯ ಪ್ರತಿನಿಧಿಗಳು ನಿಂತಿರುವಂತೆ, ನೀವಾದರೂ ನಮ್ಮೆದುರಿಗೆ ಪ್ರತಿಸ್ಪರ್ಧಿಗಳಾಗಿ ನಿಂತುಕೊಳ್ಳುವ ಪ್ರಸಂಗವೊದಗಿತು. ಅದಕ್ಕೆ ಉಪಾಯವಿಲ್ಲ. ಕಾರ್ಯಾನಂತರದ ಪರಿಣಾಮವನ್ನು ಇಬ್ಬರೂ ಭೋಗಿಸಲಿಕ್ಕೆಬೇಕು. ಸಂಗ್ರಾಮವು ಕೊನೆಗಾಣುವ ವರೆಗೆ ನಮ್ಮಿಬ್ಬರ ಅಂತರಂಗಿಕ ಭೆಟ್ಟಿಯಾಗುವದು ಸಾಧ್ಯವಿಲ್ಲ; ಹಾಗೆ ಭೆಟ್ಟಿಯಾಗುವದು ಉಚಿತವೂ ಅಲ್ಲ ಸುಜ್ಞರಿಗೆ ಇದಕ್ಕಿಂತ ಹೆಚ್ಚಿಗೆ ಬರೆಯಬೇಕಾದುದಿಲ್ಲ"

ಪತ್ರವನ್ನೋದುವದಾದ ಮೇಲೆ ಬಾಜೀರಾಯನು ಅನೂಬಾಯಿ ಯನ್ನು ಕುರಿತು:—"ತಂಗೀ, ಮುಂದೆ ಹೇಗೆ ಮಾಡಬೇಕು?"

"ಅಣ್ಣಾ!" ಅನೂಬಾಯಿಯು ಆವೇಶದಿಂದ:-"ನಾನು ನಿಮ್ಮ ಕರ್ತವ್ಯ ಕ್ಕಾಗಿ ಅಡ್ಡಬರುವದಿಲ್ಲವೆಂದು ಮೊದಲೇ ಹೇಳಿಲ್ಲವೆ? ನಾನು ಬಾಳಾಜಿ ವಿಶ್ವ

ನಾಥಪಂತ ಪೇಶವೆಯ ಕನ್ಯೆಯೂ ಪ್ರತಾಪನಿಧಿ ಬಾಜೀರಾಯರ ಭಗಿನಿಯೂ ಆಗಿರುವೆನು. ಘೋರಪಡೆಯವರ ಮನೆತನವಾದರೂ ಶೌರ್ಯ-ಧೈರ್ಯ-ಸಾಹಸಗಳಲ್ಲಿ ನಿಮ್ಮ ಮನೆತನಕ್ಕೆ ಸರಿಯಾದದ್ದಿರುವದು ಇಂದಿಲ್ಲದಿದ್ದರೆ ನಾಳೆಯಾದರೂ. ಅವರು ಶಾಹೂ ಮಹಾರಾಜರಲ್ಲಿ ನಿಷ್ಠೆಯುಳ್ಳವರಾಗ ಬಹುದು. ಒಂದು ವೇಳೆ ಅವರು ದುರಾಗ್ರಹಿಗಳಾದರೆ ನೀವು ಅವರನ್ನು ಪರಾಭವಗೊಳಿಸುವದು ನಿಶ್ಚಯ. ಅನಂತರದಲ್ಲಿ ಅವರು ನಿಮ್ಮೆದುರಿಗೂ ಶಾಹೂಮಹಾರಾಜರೆದುರಿಗೂ ತಲೆ ಬಾಗಿಸಲೇಬೇಕಾಗುವದು. ತರುವಾಯ್ ನೀವು ನಮ್ಮ ಜಹಾಗೀರಿಯನ್ನೂ ವೈಭವವನ್ನೂ ಮೊದಲಿನಂತೆ ಕಾಯ್ದು ವಿರಿ. ನೀವು ನಿಮ್ಮ ಪರಾಕ್ರಮದಿಂದ ಹಿಂದು ಸ್ವರಾಜ್ಯದೇವತೆಯನ್ನು ಪೂಜಿಸುತ್ತಿರುವಿರಿ; ಅದರಲ್ಲಿ ನನ್ನದೊಂದು ತುಳಸೀ ದಳವನ್ನಿಡಬೇಕೆಂದ್ದು ನನ್ನ ಯೋಚನೆಯಿದೆ. ಅವರು ಹಟವನ್ನೇ ಹಿಡಿದರೆ, ವೀರಭಗಿನಿಯೂ ಸ್ವರಾಜ್ಯಭಕ್ತಳೂ ಆದ ನಾನು ಪತಿ-ಪತ್ನಿಯರೆಂಬ ಪಾರ್ಥಿವ ಸಂಬಂಧವನ್ನು ಮರೆತು, ಸ್ವರಾಜ್ಯಕಾರ್ಯಕ್ಕಾಗಿ ಮಹಾರಾಜರ ಪಕ್ಷದಿಂದ ಪತಿವಿರೋಧಿ ಯಾಗಿ ಯುದ್ಧಕ್ಕೆ ನಿಲ್ಲತಕ್ಕವಳೇ"

"ಧನ್ಯ! ಭಗಿನಿ, ಕರ್ತವ್ಯಪಾಲನೆಯ ನಿನ್ನ ಭಾಷಣವು ಕೌತುಕಾರ್ಹ ವಿರುವದು! ನಾನಾದರೂ ನಿನ್ನ ಇಚ್ಛೆಗೆ ವಿರೋಧ ಮಾಡುವದಿಲ್ಲ. ನೀನು ವೆಂಕಟರಾಯರ ಬಳಿಗೆ ಹೋಗಿ ಉಪದೇಶ ಮಾಡಿ ನೋಡು. ಅವರು ಒಳ್ಳೇ ಮಾತಿನಿಂದ ದಾರಿಗೆ ಬರದಿದ್ದರೆ ಮುಂದಿನ ಕೆಲಸ ಮಾಡುವದೇನೂ ದೊಡ್ಡ ಮಾತಲ್ಲ'' ಎಂದು ಬಾಜೀರಾಯನ ನುಡಿದನು. ಅಷ್ಟರಲ್ಲಿ ಒಬ್ಬ ಸೇವ ಕನು ಅಲ್ಲಿಗೆ ಬಂದು:—"ನೀವು ರಾಮದಾಸನ ಮೇಲೆ ದಯೆದೋರಿ ಬಿಟ್ಟು ಬಂದಿರಿ. ಅವನನ್ನು ಜಿಜಾಬಾಯಿಯ ಸೇವಕರು ಸೆರೆ ಹಿಡಿದು ತೆಗೆದು ಕೊಂಡು ಹೋದರು'' ಎಂದು ಬಾಜೀರಾಯನಿಗೆ ಹೇಳಿದನು. ಆಗ ರಾಮ ದಾಸನನ್ನು ಬಿಟ್ಟದ್ದು ಅನುಚಿತವಾಯಿತೆಂದು ಶಂಭುಸಿಂಗನು ಪಶ್ಚಾತ್ತಾಪ ಹೊಂದಿದನು.

ಪರಮಪೂಜ್ಯಸ್ಥಾನದಲ್ಲಿ ಕುಳಿತಿದ್ದ ರಾಮದಾಸನು ಮುಂದೆ ಜಿಜಾ ಬಾಯಿಯಿಂದ ಯಾವ ಅವಸ್ಥೆ ಹೊಂದಿರಬಹುದು?

---

# ಯೋಗ ಮಾಯೆ!

—ः※ः—

ಶಿರೋಳದ ಪೇಟೆಯ ಮಾರ್ಗದಿಂದ ಮೆರವಣಿಗೆಯು ಹೊರಟಿತ್ತು. ಆ ಮೆರವಣಿಗೆಯಲ್ಲಿ ಜನಸಂದಣಿಯಾದರೂ ಬಹಳವಿತ್ತು. ರಾಜಸೇವಕರು ಒಬ್ಬ ಸಾಧುವನ್ನು ಕತ್ತೆಯ ಮೇಲೆ ಕುಳ್ಳಿರಿಸಿದ್ದರು. ಅವನು ಶೃಂಖಲಾ ಬದ್ಧನಾಗಿದ್ದು, ರಾಜಸೇವಕರು ಅವನ ಸುತ್ತಲೂ ಕಾವಲು ಮಾಡುತ್ತ ನಡೆದಿದ್ದರು. ಆ ಗರ್ದಭವಾಹನ ಸಾಧುವಿನ ಮುಂದೆ ಒಬ್ಬ ಹುಡುಗನು ಕುಳಿತಿದ್ದನು. ಈ ಮೆರವಣಿಗೆಯು ಪೇಟೆಯ ದಾರಿಯಿಂದ ಸಂಭಾಜಿರಾಜರ ವಾಡೆಯ ಕಡೆಗೆ ಹೊರಟಿದ್ದಿತು. ಎಷ್ಟೋ ಜನರು ಆ ವಿಲಕ್ಷಣವಾದ ಮೆರವಣಿಗೆಯನ್ನು ನೋಡಿ ಸಖೇದಾಶ್ಚರ್ಯಗೊಂಡಿದ್ದರು. "ಅಯ್ಯೋ! ಸಾಧು-ಸಂತರ ವಿಡಂಬನೆ ಮಾಡಿದರೆ ಪರಮಾತ್ಮನು ಹೇಗೆ ಮೆಚ್ಚುವನು?" ಎಂದು ಜನರು ಸ್ವಗತ-ಪ್ರಕಾಶವಾಗಿ ಮಾತನಾಡಹತ್ತಿದ್ದರು.

"ಹಾ! ಯಾರೂ ಈ ದುಷ್ಟನಿಗೆ ಸಾಧುವೆನ್ನಕೂಡದು. ಇವನ ಸಲುವಾಗಿ ಯಾರೂ ಖೇದವನ್ನು ವ್ಯಕ್ತಪಡಿಸಬಾರದು. ಯಾರಾದರೂ ಈ ಮಾತಿನ ವಿರುದ್ಧವಾಗಿ ನಡೆದರೆ, ರಾಜದಂಡನೆಗೆ ಪಾತ್ರರಾಗಬೇಕಾಗುವರು" ಎಂದು ರಾಜಸೇವಕರು ವಿಷಾದವನ್ನು ವ್ಯಕ್ತಪಡಿಸುವ ಜನರಿಗೆ ಸೂಚಿಸುತ್ತಿದ್ದರು

ಶಿರೋಳದ ಪೇಟೆಯ ಬೀದಿಯಲ್ಲಿ ವಿಲಕ್ಷಣವಾದ ರೀತಿಯಿಂದ ಮೆರವಣಿಗೆಮಾಡಿಸಿಕೊಳ್ಳಹತ್ತಿದ್ದ ಸಾಧುವು ಮತ್ತಾರೂ ಆಗಿರದೆ ರಾಮದಾಸನೇ ಆಗಿದ್ದನು. ಭಗವಂತರಾಯ ಅಮಾತ್ಯನು ಸಂಭಾಜಿ-ಜಿಜಾಬಾಯಿಯರ ಕಿವಿಯಲ್ಲಿ ಅವನ ವಿಷಯವಾಗಿ ವಿಷವನ್ನು ಸುರುವಿದ್ದನು. ಕೂಡಲೆ ಜಿಜಾಬಾಯಿಯು ರಾಮದಾಸನನ್ನು ಹಿಡಿದು ತರುವದಕ್ಕಾಗಿ ಸೇವಕರನ್ನು ಅಟ್ಟಿದಳು ಆಗಿನ ಕೊಲ್ಹಾಪುರ ರಾಜ್ಯವೆಂದರೆ ಕಟ್ಟುಗೇಡಿಯಾಗಿತ್ತು. ಜಿಜಾಬಾಯಿಯು ರಾಮದಾಸನನ್ನು ತಲೆಯ ಮೇಲೇರಿಸಿಕೊಂಡದ್ದು ಅವನ ಸದ್ಗುಣಗಳನ್ನು ನೋಡಿಯಲ್ಲ, ಈಗ ಯಾವುದೊಂದು ದುರ್ಗುಣಗಳನ್ನು ಕಂಡು ಅವಳು ಅಸಂತುಷ್ಟಳಾಗಿದ್ದಳೆನ್ನುವಂತೆಯೂ ಇದ್ದಿಲ್ಲ. ರಾಣಿಯು ಸುಪ್ರಸನ್ನಳಿದ್ದಾಗ ರಾಮದಾಸನು ಅವಳಿಂದ ಪಾದಸೇವೆಯನ್ನಾದರೂ ಮಾಡಿಸಿಕೊಂಡಿದ್ದನು. ಅದೇ ರಾಮದಾಸನು ಈಗ ಆತನ ಯಾವದೊಂದು ಕಾರಣದಿಂದ ಆಕೆಯ ಪ್ರಸನ್ನತೆಗೆ ಹೊರತಾದೊಡನೆಯೇ ಕತ್ತೆಯ ಮೆರವಣಿಗೆ ಮಾಡಿಸಿಕೊಳ್ಳಬೇಕಾಯಿತು. ರಾಮದಾಸನನ್ನೂ ಅವನ ಮಗನೆನಿಸಿಕೊಳ್ಳುತ್ತಿದ್ದ ಭೈರವನನ್ನೂ ಕತ್ತೆಯ ಮೇಲೆ ಕುಳ್ಳಿರಿಸಿ, ರಾಜಮಾರ್ಗದಲ್ಲಿ

ಮೆರೆಯಿಸುತ್ತ ಕರಕೊಂಡು ಬರಬೇಕೆಂದು ಜಿಜಾಬಾಯಿಯು ಸೇವಕರಿಗೆ ಆಜ್ಞಾಪಿಸಿದ್ದಳು.

ಜಿಜಾಬಾಯಿಯು ರಾಮದಾಸನನ್ನು ಈ ಪರಿಯಾಗಿ ವಿಡಂಬನೆಗೊಳಿಸಲಿಕ್ಕೆ ಕೇವಲ ಭಗವಂತರಾಯನ ಹೇಳಿಕೆಯಷ್ಟೇ ಕಾರಣವಾಗಿರಲಿಲ್ಲ. ಈ ಕೆಲಸವನ್ನು ಬೇಗನೆ ಪ್ರಚಾರದಲ್ಲಿ ತರಬೇಕೆಂದು ಪ್ರವೃತ್ತಿಗೊಳಿಸಲಿಕ್ಕೆ ಇನ್ನೊಂದು ಶಕ್ತಿಯು ಕಾರಣವಾಗಿತ್ತು. ಆ ಶಕ್ತಿಯೆಂದರೆ, ಇತ್ತೀಚೆಗೆ ಜಿಜಾಬಾಯಿಯು ಯಾರ ಆರಾಧನೆಯಲ್ಲಿ ತೊಡಗಿದ್ದಳೋ ಆ ಯೋಗಮಾಯೆಯು. ಈ ತಪಸ್ವಿನಿಯು ಎಲ್ಲಿಯವಳು, ಎಲ್ಲಿಂದ ಬಂದಳು, ಅವಳು ರಾಜಮಂದಿರದಲ್ಲಿ ವಾಸಮಾಡಿದ ಕಾರಣವೇನು? ಅವಳ ನಿಜವಾದ ಹೆಸರೇನು? ಮೊದಲಾದ ಸಂಗತಿಗಳು ಯಾರಿಗೂ ಗೊತ್ತಿದ್ದಿಲ್ಲ. ಇವಳ ದರ್ಶನವು ಯಾರಿಗೂ ಯಾವ ವೇಳೆಯಲ್ಲಿಯೂ ಆಗುತ್ತಿದ್ದಿಲ್ಲ. ಇವಳ ಬಳಿಯಲ್ಲಿ ಮೂರ-ನಾಲ್ಕು ಶಿಷ್ಯರಿದ್ದು, ಅವರು ಮಾತ್ರ ಕೆಲಸವಿದ್ದಾಗ ಯೋಗಮಾಯೆಯನ್ನು ಕಾಣುತ್ತಿದ್ದರು. ಅವಳು ಎಲ್ಲಿಗಾದರೂ ಹೋಗಬೇಕಾದರೆ ಬುರುಕಿ ಹಾಕಿಕೊಳ್ಳುತ್ತಿದ್ದಳು. ಅವಳ ಸಂಚಾರವು ವಿಶೇಷವಾಗಿ ರಾತ್ರಿಯಲ್ಲಿಯೇ ಆಗುತ್ತಿತ್ತು. ಅವಳು ಮೊದಲು ಭೋಜನಪಾತ್ರ ದೇವಾಲಯದಲ್ಲಿ ಶ್ರೀ ದತ್ತಮಹಾರಾಜರ ಸ್ಥಾನದಲ್ಲಿ-ಪ್ರಕಟಳಾದಳು. ಕೆಲವು ದಿವಸ ಅವಳು ನರಸಿಂಹವಾಡಿಯಲ್ಲಿಯೇ ಸಂಚಾರ ಮಾಡುತ್ತಲಿದ್ದಳು ಜಿಜಾಬಾಯಿಯೂ ಸಂಭಾಜಿರಾಜನೂ ಶಿರೋಳಕ್ಕೆ ಬಂದ ಮೇಲೆ ಅವರಿಗೆ ಯೋಗಮಾಯೆಯ ಕೀರ್ತಿಯು ಗೊತ್ತಾಯಿತು. ಸಾಧು-ಸಂತರಲ್ಲಿ ಜಿಜಾಬಾಯಿಯ ವಿಶ್ವಾಸ ಬಹಳ. ಅವಳು ಪರಮಾರ್ಥಸಾಧನೆಗಾಗಿ ಸಾಧು-ಸಂತರನ್ನು ಆರಾಧಿಸುತ್ತಿದ್ದಿಲ್ಲ. ಅವಳಿಗೆ ಎಂದಿನಿಂದಲೂ ಸ್ವಾರ್ಥಸಾಧನೆಯ ಲವಲವಿಕೆಯೇ ಹೆಚ್ಚಾಗಿತ್ತು. ಗೃಹಕಲಹ-ರಾಜಕಲಹಗಳಿಂದ ಪೀಡಿತಳಾದ ಅವಳಿಗೆ ಯೋಗಮಾಯೆಯಂಥ ತ್ರಿಕಾಲಜ್ಞಾನಿಗಳ ಹಾಗು ಮನೋಭಿಲಾಷೆಗಳನ್ನು ವಾಮಮಾರ್ಗೀಯ ಪ್ರಯೋಗದಿಂದಾಗಲಿ, ತಪಸ್ಸಾಮರ್ಥ್ಯದಿಂದಾಗಲಿ ಈಡೇರಿಸಿ ತನ್ನ ಭಾಗ್ಯೋದಯವನ್ನು ಮಾಡುವ ಜನರ ಆವಶ್ಯಕತೆಯು ಬಹಳವಾಗಿತ್ತು. ಆದ್ದರಿಂದಲೇ ಅವಳು ಯೋಗಮಾಯೆಯನ್ನು ನರಸಿಂಹವಾಡೆಯಿಂದ ಸನ್ಮಾನಪೂರ್ವಕವಾಗಿ ಕರೆಯಿಸಿದ್ದಳು.

ಯೋಗಮಾಯೆಯು ಯಾವಾಗಲೂ ತೆರೆಯಲ್ಲಿ ಕುಳಿತುಕೊಂಡಿರುತ್ತಿದ್ದಳು. ಯಾರೊಡನೆಯಾದರೂ ಮಾತಾಡಬೇಕನಾದರೆ ಅವಳು ಅಲ್ಲಿಯೇ ಕುಳಿತು ಮಾತಾಡುತ್ತಿದ್ದಳು. ದರ್ಶನಾಪೇಕ್ಷಿಗಳು ಯೋಗಮಾಯೆಯು

ಉಟ್ಟು ಪಾವನಮಾಡಿಟ್ಟ ಒಂದು ವಸ್ತ್ರದ ದರ್ಶನ ಹೊಂದಿ ಕೃತಾರ್ಥರಾಗ ಬೇಕಾಗುತ್ತಿತ್ತು. ಪ್ರತ್ಯಕ್ಷ ಜಿಜಾಬಾಯಿಯಾದರೂ ವಸ್ತ್ರವನ್ನು ನೋಡಿಯೆ ತನ್ನ ದರ್ಶನಲಾಲಸೆಯನ್ನು ತೃಪ್ತಿಪಡಿಸಿಕೊಳ್ಳಬೇಕಾಗಿತ್ತು. ಯೋಗ ಮಾಯೆಯು ಜಿಜಾಬಾಯಿಯನ್ನು ಮಂತ್ರಮುಗ್ಧ ಸರ್ಪದಂತೆ ಮಾಡಿಬಿಟ್ಟಿ ದ್ದಳು. ಅವಳು ಜಿಜಾಬಾಯಿಯ ಭೂತ-ವರ್ತಮಾನಕಾಲೀನ ಸಂಗತಿಗಳ ನ್ನೆಲ್ಲ ಹೇಳಿದ್ದಳು; ಹಾಗು ಎಷ್ಟೋ ಭವಿಷ್ಯಕಾಲೀನ ಸಂಗತಿಗಳನ್ನಾದರೂ ತಿಳಿಸಿದ್ದಳು. 'ರಾಮದಾಸನು ಕಪಟಿ ನಂತನಿರುವನು, ಅವನು ಚದುರೆಯ ಸಂಗಡಿಗನಿರುವನು ಇಬ್ಬರೂ ಕೊಲ್ಹಾಪುರದ ಸಿಂಹಾಸನವನ್ನು ಸೆಳೆದು ಕೊಳ್ಳಬೇಕೆಂದು ಯೋಚಿಸಿರುವರು. ರಾಮದಾಸನು ಬೇರೊಬ್ಬ ಹುಡುಗ ನನ್ನು ಕೊಲೆ ಮಾಡಿಸಿ, ನಿಜವಾದ ರಾಜಪುತ್ರನನ್ನು ಸಂರಕ್ಷಿಸುತ್ತಿರುವನು. ಅವನಿಗೆ ರಾಜಸಿಂಹಾಸನವನ್ನು ದೊರಕಿಸಿಕೊಡಬೇಕೆಂದು ರಾಮದಾಸನ ಹಾಗು ಚದುರೆಯರ ಸಾಹಸವಿರುವದು.' ಮೊದಲಾದ ಸಂಗತಿಗಳನ್ನು ಯೋಗಮಾಯೆಯೇ ರಾಣಿಗೆ ಹೇಳಿದ್ದಳು. ಅಮಾತ್ಯನ ಹೇಳಿಕೆಯಿಂದ ಸಂಶಯಗ್ರಸ್ತವಾದ ಜಿಜಾಬಾಯಿಯ ಮನಸ್ಸು ಈಗ ಮತ್ತಿಷ್ಟು ಸಂಶಯ ಕ್ಕೀಡಾಯಿತು. ರಾಮದಾಸನನ್ನೂ ಅವನ ರಕ್ಷಣೆಯಲ್ಲಿದ್ದ ತಾರಾಬಾಯಿಯ ಮೊಮ್ಮಗನನ್ನೂ ತನ್ನೆದುರಿಗೆ ತರಬೇಕೆಂದೂ, ರಾಜಕುಮಾರನ ಕೊಲೆಯು ತನ್ನ ಸಮಕ್ಷ ನೆರವೇರಬೇಕೆಂದೂ ಯೋಗಮಾಯೆಯು ಹೇಳಿದ್ದಳು ರಾಜ ಕುಮಾರನ ಕೊಲೆಯಾದ ಮೇಲೆ ರಾಮದಾಸನಿಗೆ ಮರಣದಂಡಣೆಯು ವಿಧಿಸಲ್ಪಡಬೇಕೆಂದು ಅವಳು ರಾಣಿಗೆ ಸೂಚಿಸಿದ್ದಳು. ಅಂತೆಯೇ ರಾಮ ದಾಸನು ಅಪಮಾನ ಹೊಂದಿ ಗರ್ದಭವಾಹನನಾಗಿ ಮೆರೆಯುತ್ತ, ರಾಜ ಮಾರ್ಗ ಹಿಡಿದು ರಾಜಮಂದಿರದ ಕಡೆಗೆ ಸಾಗಿಸಲ್ಪಟ್ಟಿದ್ದನು.

ಜಿಜಾಬಾಯಿಯು ರಾಜಮಂದಿರದ ಬಳಿಯಲ್ಲಿ ಒಂದು ಅಂದವಾದ ಮಂದಿರವನ್ನು ಕಟ್ಟಿಸಿ ಯೋಗಮಾಯೆಗೆ ಅರ್ಪಿಸಿದ್ದಳು. ಆ ಮಂದಿರ ದಲ್ಲಿಯ ಒಂದು ಕೋಣೆಯಲ್ಲಿ ತೆರೆಯ ಮರೆಗೆ ಕುಳಿತು, ಯೋಗಮಾಯೆಯು ಭಕ್ತರ ಮನೋರಥಗಳನ್ನು ಪೂರ್ತಿಗೊಳಿಸುತ್ತಿದ್ದಳು. ಸ್ವತಃ ಜಿಜಾ ಬಾಯಿಯು ಸಹ ಆ ಪವಿತ್ರವಾತಾವರಣದಲ್ಲಿ ಹಗಲಲ್ಲಿಯೂ ರಾತ್ರಿಯಲ್ಲಿಯೂ ಪ್ರಹರಗಟ್ಟಲೆ ಕುಳಿತು ಅವಳೊಡನೆ ಸಂಭಾಷಣ ನಡೆಯಿಸುತ್ತಿದ್ದಳು. ರಾಮ ದಾಸನ ಮೆರವಣಿಗೆಯು ರಾಜಮಂದಿರದ ಕಡೆಗೆ ಹೊರಟಾಗ ಸಂಭಾಜಿಯೂ ಜಿಜಾಬಾಯಿಯೂ ಯೋಗಮಂದಿರದಲ್ಲೇ ಇದ್ದರು. ರಾಜಸೇವಕರು ರಾಮ ದಾಸನನ್ನೂ ಅವನ ಮಗನಾದ ಭೈರವನನ್ನೂ ಕತ್ತೆಯ ಮೇಲಿಂದ ಕೆಳಗಿಳಿಸಿ,

ರಾಜ-ರಾಣಿಯರು ಕುಳಿತಿದ್ದ ಯೋಗಮಾಯೆಯ ಮಂದಿರದಲ್ಲಿ ಒಯ್ದರು. ರಾಮದಾಸನು ತನ್ನ ಶೃಂಖಲಾಬದ್ಧಕೈಗಳಿಂದ ಭೈರವನನ್ನೆತ್ತಿಕೊಂಡಿದ್ದನು. ಬಹಳ ವೇಳೆಯವರೆಗೆ ಆವನನ್ನು ಹಿಡಿದುಕೊಂಡದ್ದರಿಂದ ರಾಮದಾಸನ ಕೈಗಳು ನೋಶಿದ್ದವು; ಅದ್ದರಿಂದ ಭೈರವನು ಕೈಯಿಂದ ಜಾರಿ ಕೆಳಗೆ ಬಿದ್ದನು ಕೂಡಲೆ ಆ ಬಾಲಕನು ಅಳತೊಡಗಿದನು. ಯಾವ ಬಾಲಕನನ್ನು ಜಿಜಾ ಬಾಯಿಯು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದು ಮುದ್ದಾದ ಮುದ್ದುಗಳನ್ನು ಕೊಡುತ್ತಿದ್ದಳೋ, ಅದೇ ಬಾಲಕನು ಈಗ ರಾಮದಾಸನ ಕಾಲಬಳಿಯ ಲ್ಲಿ ಬಿದ್ದು ಅಳುತ್ತಿದ್ದರೂ ಅತ್ತ ಕಡೆಗೆ ಕಣ್ಣೆತ್ತಿ ಸಹ ನೋಡ ಲಿಲ್ಲ; ಇಷ್ಟೇ ಅಲ್ಲ, ಬಿದ್ದ ಹುಡುಗನನ್ನೆಬ್ಬಿಸುವದಕ್ಕಾಗಿ ಮುಂದುವರಿದ ದಾಸಿಯನ್ನು ಸಹ ಸಿಟ್ಟುಮಾಡಿ ಹಿಂದಕ್ಕೆ ಅಟ್ಟಿದಳು. ರಾಮದಾಸನು ತನ್ನ ಈ ದೈವದುರ್ವಿಲಾಸವನ್ನು ನೋಡಿ ಕಣ್ಣುತುಂಬ ನೀರು ತಂದನು. ಅವನು ಕಫನಿಯಿಂದ ಕಣ್ಣೀರು ಒರಸಿಕೊಂಡು, ಬಿದ್ದ ಬಾಲಕನನ್ನು ಎತ್ತಿ ನಿಲ್ಲಿಸಿ. —"ಮಹಾರಾಜರೆ, ರಾಣೀಸಾಹೇಬರೆ! ಇಂದು ನನ್ನ ಮೇಲೆ ಇಷ್ಟು ಅವಕೃಪೆಯಾದ ಕಾರಣವೇನು?'' ಎಂದು ಕೇಳಿ, ಅವನು ರಾಜ ರಾಣಿಯ ರೆದುರಿಗೆ ಕೈಜೋಡಿಸಿ ಅಧೋವದನನಾಗಿ ನಿಂತನು

ಅವನ ಮಾತಿಗೆ ರಾಜ-ರಾಣಿಯರಿಂದ ಉತ್ತರವೇನೂ ದೊರೆಯಲಿಲ್ಲ. ರಾಣಿಯು ತೆರೆಯ ಕಡೆಗೆ ನೋಡಿ:—"ಮಾತಾಜಿ! ನಿಮ್ಮ ಆಜ್ಞೆಯಮೇರೆಗೆ ಅಪರಾಧಿಯಾದ ಈ ಕಪಟಿ ಸಾಧುವನ್ನು ಹಿಡತರಿಸಿ ಸಮ್ಮುಖದಲ್ಲಿ ನಿಲ್ಲಿಸಿರು ವೆನು. ಯಾವ ಶಿಕ್ಷೆ ವಿಧಿಸಬೇಕೆಂಬದನ್ನು ಹೇಳಿರಿ.''

ಯೋಗಮಾಯೆಯ ಹೆಸರು ಕೇಳಿದೊಡನೆಯೇ ರಾಮದಾಸನು ವಿಸ್ಮಿತ ನಾಗಿ ತೆರೆಯ ಕಡೆಗೆ ನೋಡಹತ್ತಿದನು.

"ರಾಣಿ!" ಯೋಗಮಾಯೆಯು ಅಧಿಕಾರಯುಕ್ತವಾಣಿಯಿಂದ.— "ಆವನು ತನ್ನ ಅಪರಾಧವನ್ನು ಒಪ್ಪುವನೋ ಹೇಗೋ ಅವನನ್ನು ವಿಚಾ ರಿಸು!''

''ರಾಮದಾಸಾ!'' ಸಂಭಾಜಿಯು ಸಂತಪ್ತವಾಣಿಯಿಂದ:—"ನೀನು ತಾರಾಬಾಯಿಯ ಕಾರಸ್ಥಾನದಲ್ಲಿ ಸೇರ್ಪಡೆಯಾಗಿರುವೆಯೋ ಇಲ್ಲವೋ? ಹೇಳು!"

''ಈಶ್ವರಸಾಕ್ಷಿಯಾಗಿಯೂ ಸೇರ್ಪಡೆಯಾಗಿಲ್ಲ.''

ರಾಮದಾಸನು ಪ್ರತಿಜ್ಞಾಪೂರ್ವಕವಾಗಿ ಹೀಗೆ ಹೇಳಿದ ಮೇಲೆ ಜಿಜಾ ಬಾಯಿಯು ಅವನನ್ನು ಕುರಿತು:—"ನೀನು ರಾಜಪುತ್ರನೆಂದು ಹೆಸರಿಟ್ಟು

ಚವ್ಹಾಣನಿಂದ ಒಬ್ಬ ಹುಡುಗನನ್ನು ತರಿಸಿದೆ. ಆ ಹುಡುಗನನ್ನು ನಾವು ಕೊಂದು ಹಾಕಿದೆವು. ಆ ಹುಡುಗನು ಯಾರು?''

ಜಿಜಾಬಾಯಿಯು ಹೀಗೆ ಪ್ರಶ್ನೆ ಮಾಡಿದ ಕೂಡಲೆ ತೆರೆಯಲ್ಲಿದ್ದ ಯೋಗಮಾಯೆಯು:-''ರಾಣಿ, ಇಂಥ ಪ್ರಶ್ನೆಗಳನ್ನು ಕೇಳುವದರಿಂದ ಏನೂ ಪ್ರಯೋಜನವಿಲ್ಲ. ಇವನು ಮೊದಲಿನಿಂದಲೇ ಸುಳ್ಳಾಡತೊಡಗಿರುವನು. ಮೋಸಗಾರನಾದ ಈ ರಾಮದಾಸನಿಗೆ ದೇಹಾಂತ ಶಾಸನವೇ ಯೋಗ್ಯವು.'' ಎಂದು ನುಡಿದು, ರಾಮದಾಸನನ್ನು ಕುರಿತು—''ಚಾಂಡಾಲಾ! ನಿನ್ನ ಬಳಿಯಲ್ಲಿದ್ದ ಹುಡುಗನೇ ರಾಜಪುತ್ರನಿದ್ದು, ಅವನನ್ನು ಸಂರಕ್ಷಣೆ ಮಾಡಿ ಕೊಲ್ಲಾಪುರದ ರಾಜ್ಯವನ್ನು ಸೆಳೆದುಕೊಳ್ಳುವ ಕಾರಸ್ಥಾನ ನಡೆಯಿಸಿರುವೆಯಲ್ಲವೆ? ರಾಣೀ, ಮೊದಲು ರಾಜಪುತ್ರನ ಕೊಲೆ ಮಾಡಿರಿ ಇಂದು ಮಧ್ಯರಾತ್ರಿಯಲ್ಲಿ ನಿರಪರಾಧಿ ಬಾಲಕನ ಕೊಲೆ ಮಾಡಿಸಿದ ಈ ಕ್ರೂರ ಗೋಸಾವಿಗೆ ದೇಹಾಂತ ಶಾಸನ ವಿಧಿಸತಕ್ಕದ್ದು. ಇವನನ್ನು ಒಂದು ತೆಗ್ಗಿನಲ್ಲಿ ನಿಲ್ಲಿಸಿ, ಸುತ್ತಲೂ ಸುಣ್ಣದ ಹರಳು ಹಾಕಿ ನೀರು ಸುರುವಿ, ಬೇಯಿಸಿ ಕೊಲ್ಲಲಿಕ್ಕೆ ಬೇಕು.''

ಯೋಗಮಾಯೆಯ ಮುಖದಿಂದ ಮಾತುಗಳು ಹೊರಡುವದೊಂದೇ ತಡ; ಸಂಭಾಜಿರಾಜನ ಖಡ್ಗವು ರಾಮದಾಸನ ಮಗನೆನಿಸಿಕೊಳ್ಳುತ್ತಲಿದ್ದ ಭೈರವನ ಎಳೆಯ ಹೃದಯವನ್ನು ಪ್ರವೇಶಿಸಿತು! ಪ್ರಾಣಾಂತಿಕ ಗಾಯದಿಂದ ರಕ್ತವು ಕಾರಂಜಿಯಂತೆ ಪುಟಿಯಿತು. ಭೈರವನಂತೆ ತನ್ನ ಅವಸ್ಥೆಯಾದರೂ ಆಗುವದೆಂಬ ವಿಷಯದಲ್ಲಿ ರಾಮದಾಸನಿಗೆ ಸಂಶಯವು ಉಳಿಯಲಿಲ್ಲ. ಅಂದು ಮಧ್ಯರಾತ್ರಿಯವರೆಗೆ ಅವನ ಆಯುಷ್ಯವಿತ್ತು. ವಿನಂತಿ ಮಾಡಿಕೊಳ್ಳುವದರಿಂದ ತನ್ನ ಮರಣವು ತಪ್ಪುವದಿಲ್ಲವೆಂಬದು ಅವನ ಮನವರಿಕೆಯಾಯಿತು. ಆದ್ದರಿಂದ ಆವನು ತನ್ನ ಜೀವದ ಮೇಲೆ ಉದಾರನಾಗಿ, ರಾಜ-ರಾಣಿಯರನ್ನು ಕುರಿತು:--''ದುಷ್ಟರೆ! ನೀವು ನನ್ನ ನಾಶ ಮಾಡುವಿರೆಂಬದನ್ನು ನಾನು ಗುರುತಿಸಿರುವೆನು; ಆದರೆ ನನ್ನ ಕೊಲೆಯಾದಮೇಲೆಯೂ ನಿಮ್ಮ ಆಸುರೀ ಮನಶ್ಶಾಂತಿಯನ್ನು ನಾಶಗೊಳಿಸುವದಕ್ಕಾಗಿ ನಿಜವಾದ ಸಂಗತಿಯನ್ನು ನಿಮಗೆ ಹೇಳಬೇಕೆಂದು ನಿಶ್ಚಯಿಸಿರುವೆನು. ನಾನು ನಿಮ್ಮ ವಿರೋಧಿಯಿರುವೆನು; ಕಪಟಿಯಿರುವೆನು. ಚವ್ಹಾಣನ ವಾಡೆಯಲ್ಲಿ ನೀವು ಯಾವ ಬಾಲಕನ ಕೊಲೆ ಮಾಡಿದಿರೋ, ಅವನು ನಿಜವಾದ ರಾಜಪುತ್ರನಲ್ಲ, ರಜಪುತನೆಂದು ಕೊಲೆ ಮಾಡಿಸಿದ ಮನುಷ್ಯನೂ ನಿಜವಾದ ರಜಪುತನಲ್ಲ!''

''ಹಾಗಾದರೆ ಆ ಬಾಲಕನಾರು? ಆ ಮನುಷ್ಯನಾರು?'' ಎಂದು ಜಿಜಾ

ಬಾಯಿಯು ಆತುರತೆಯಿಂದ ಕೇಳಿದಳು.

"ಅವರು ಯಾರೆಂಬದನ್ನು ನಾನೇಕೆ ಹೇಳಲಿ? ಇನ್ನೂ ನಿಮಗೆ ಹೇಳುವದು ಉಳಿದಿದೆ. ಚಾಂಡಾಲರೆ! ನೀವು ಈಗ ಕೊಂದ ಬಾಲಕನು ಮಾತ್ರ ರಾಜಪುತ್ರನು ನಿಜವು; ಆದರೆ ನೀವು ಅಪೇಕ್ಷಿಸುತ್ತಿರುವ ರಾಜಪುತ್ರನು ಇವನಲ್ಲ. ರಾಜಾ! ಇವನು ನಿನ್ನ ಪುತ್ರನು; ನಿನ್ನಿಂದ ಚದುರೆಯಲ್ಲಿ ಜನಿಸಿದ ಮಗನೇ ಇವನು! ನೀನು ನಿನ್ನ ಮಗನನ್ನು ನಿನ್ನ ಕೈಯಿಂದಲೇ ಕೊಂದೆ. ಬೇಕಾದರೆ ಈ ಹುಡುಗನನ್ನು ಚನ್ನಾಗಿ ನಿರೀಕ್ಷಿಸು ಇವನು ಅಚ್ಚಳಿಯದೆ ನಿನ್ನನ್ನೇ ಹೋಲುತ್ತಿರುವನು. ನಿನ್ನ ಎದೆಯ ಮೇಲೆ ತಿಲಕವಿದ್ದಂತೆ, ಈ ನಿನ್ನ ಕುಮಾರನಾದ ಭೈರವನ ಎದೆಯ ಮೇಲೆಯೂ ತಿಲಕವಿರುವದು. ನನ್ನ ಮಾತಿನಲ್ಲಿ ನಂಬಿಗೆ ಹುಟ್ಟದಿದ್ದರೆ ಹೋಗಲಿ; ನಾನು ಹೇಳಿದ ಗುರುತಿನಿಂದಲೂ, ಏಕರೂಪ ಮುಖಚಿಹ್ನದಿಂದಲೂ ನೀನೇ ಮನವರಿಕೆ ಮಾಡಿಕೋ. ನಿಜವಾದ ರಾಜಪುತ್ರನು ನಿಮ್ಮ ರಾಕ್ಷಸೀ ದೃಷ್ಟಿಕ್ಷೇತ್ರದ ಆಚೆಗೆ ಸುಖರೂಪವಾಗಿರುವನು. ವಸುದೇವ-ದೇವಕಿಯರ ಅಪತ್ಯದ ಬಗ್ಗೆ ಹೇಗೆ ಕಾರಸ್ಥಾನವಾಯಿತೋ, ಅದರಂತೆ ರಾಜಪುತ್ರನ ವಿಷಯದಲ್ಲಿಯೂ ಆಗಿದೆ. ಕಂಸಾರಿ ಶ್ರೀಕೃಷ್ಣನು ಗೋಕುಲದಲ್ಲಿ ಸುರಕ್ಷಿತವಾಗಿದ್ದಂತೆ, ನಿನ್ನ ಶತ್ರುವೂ ತಾರಾಬಾಯಿಯ ಮೊಮ್ಮಗನೂ, ಕೊಲ್ಹಾಪುರದ ಭಾವೀ ಛತ್ರಪತಿಯೂ ಆದ ರಾಮರಾಜನು ಎಲ್ಲಿಯೋ ಒಂದು ಅಜ್ಞಾತ ಸ್ಥಳದಲ್ಲಿ ಸುರಕ್ಷಿತವಾಗಿರುವನು. ರಾಜಾ! ಮತ್ತಿನ್ನೇನು ಹೇಳಲಿ?"

ರಾಮದಾಸನ ಈ ಮಾತುಗಳಿಂದ ಜಿಜಾಬಾಯಿಗೂ ಸಂಭಾಜಿರಾಜನಿಗೂ ಅತ್ಯಂತ ಖೇದವಾಯಿತು; ಆದರೆ ಅವರಿಬ್ಬರ ಖೇದದ ಕಾರಣಗಳು ಮಾತ್ರ ಬೇರೆಯಾಗಿದ್ದವು. ಇಷ್ಟು ಕಾರಸ್ಥಾನ ನಡೆಯಿಸಿದರೂ ನಿಜವಾದ ರಾಜಪುತ್ರನು ಜೀವದಿಂದ ಉಳಿದದ್ದಕ್ಕಾಗಿ ಜಿಜಾಬಾಯಿಗೆ ಖೇದವಾಯಿತು. ಸಂಭಾಜಿಗೆ ಇದೊಂದು ಕಾರಣದಿಂದಲ್ಲದೆ, ಚದುರೆಯಲ್ಲಿ ತನ್ನಿಂದ ಜನಿಸಿದ ಅರ್ಭಕನ ಕೊಲೆಯನ್ನು ತನ್ನ ಕೈ ಮುಟ್ಟಿ ಮಾಡಿದ್ದಕ್ಕಾಗಿ ಖೇದವೆನಿಸಿತ್ತು. ಚದುರೆಯ ಪುತ್ರನ ಮರಣದಿಂದ ಜಿಜಾಬಾಯಿಗೆ ದುಃಖದಲ್ಲಿಯೇ ಸ್ವಲ್ಪಮಟ್ಟಿಗೆ ಆನಂದದ ಮಿಶ್ರಣವಾಗಿತ್ತು. ಆಗ ಅವಳು ತನ್ನ ಪತಿಯ ಮುಖವನ್ನು ನಿರೀಕ್ಷಿಸಿದಳು ಪುತ್ರವಧೆಯಿಂದ ಅವನ ಕಣ್ಣುಗಳು ಅಶ್ರುಪೂರ್ಣವಾದದ್ದನ್ನು ನೋಡಿ, ಜಿಜಾಬಾಯಿಯ ಮನಸ್ಸಿನಲ್ಲಿ ಮತ್ತೊಂದು ವಿಧದ ವಿಕಲ್ಪವು ಹುಟ್ಟಿತು. 'ಚದುರೆಯು ಇನ್ನೂ ಜೀವಂತವಾಗಿದ್ದು, ರಾಮದಾಸನಿಗೆ ಅವಳ ಗೊತ್ತುವಳಿಯಿರುವದು. ಪತಿಯು ತನ್ನ ಮಧ್ಯ

ಕಾಲೀನ ಪ್ರಣಯಿನಿಯ ಶೋಧಕ್ಕಾಗಿ ರಾಮದಾಸನನ್ನು ವಿಚಾರಿಸುವನು. ರಾಮದಾಸ, ಚದುರೆ, ಮಹಾರಾಜರು ಒಂದಾದ ಮೇಲೆ ನನ್ನ ಮೇಲಿನ ಸೇಡು ತೀರಿಸಿಕೊಳ್ಳಲಿಕ್ಕೆ ಹಿಂದು ಮುಂದೆ ನೋಡುವದಿಲ್ಲ.' ಮೊದಲಾದ ವಿಚಾರಗಳು ರಾಣಿಯ ಮನಸ್ಸಿನಲ್ಲಿ ಹುಟ್ಟಿ, ಅವಳ ಹೃದಯವು ಭವಿಷ್ಯ ಕಾಲದ ಭೀಷಣ ಕಲ್ಪನಾಚಿತ್ರದಿಂದ ನಡುಗಿತು. ಕೂಡಲೆ ಅವಳು ಮುಂಜಾಗ್ರತೆಯಿಂದ ಸೇವಕರನ್ನು ಕುರಿತು:—"ಈ ಹರಾಮಖೋರ ಸಾಧುವನ್ನು ತೆಗೆದುಕೊಂಡು ಹೋಗಿ ಒಂದು ಕಡೆಯ ಮೀಸೆ-ಗಡ್ಡಗಳನ್ನು ತೆಗೆದು, ಮೋರೆಗೆ ಕಪ್ಪು ಬಡೆದು ಊರಲ್ಲಿ ಮೆರೆಯಿಸಿ, ಮಧ್ಯರಾತ್ರಿಯ ಹೊತ್ತಿಗೆ ಮಾತಾಜಿಯವರ ಹೇಳಿಕೆಯಂತೆ ಇವನಿಗೆ ಶಿಕ್ಷೆ ವಿಧಿಸಿರಿ!"

ರಾಜಸೇವಕರು ಜಿಜಾಬಾಯಿಯ ಹೇಳಿಕೆಯಂತೆ ಮೆರವಣಿಗೆಯ ಕಾರ್ಯವನ್ನು ಮುಗಿಸಿ ರಾಮದಾಸನನ್ನು ಸೆರೆಮನೆಯಲ್ಲಿರಿಸಿದರು. ರಾಮದಾಸನಿಗೆ ಮೃತ್ಯುವು 'ಆ' ಎಂದು ಬಾಯಿತೆರೆದು ಎದುರಿಗೆ ಕುಳಿತಂತಾಗಿತ್ತು; ಯಾಕಂದರೆ, ಮಧ್ಯರಾತ್ರಿಯ ವರೆಗಿನ ಅವಧಿಯೇನೂ ಅವನಿಗೆ ಯುಗವಾಗುವಂತಿದ್ದಿಲ್ಲ.

ಈ ಕೃತ್ಯವು ಯೋಗವಮಾಯೆಯಿಂದ ಜರುಗಿದ್ದರೂ ಅವಳು ಸುಖಿಯಾಗಿದ್ದಿಲ್ಲ. ತೆರೆಯ ಮರೆಗೆ ಕುಳಿತು ಅವಳು ಮುಳು ಮುಳು ಎಂದು ಅಳತೊಡಗಿದ್ದಳು ಅವಳು ಮರೆಯಲ್ಲಿದ್ದುದರಿಂದ ಆ ಸಂಗತಿಯು ಯಾರಿಗೂ ಗೊತ್ತಾಗಲಿಕ್ಕೆ ಮಾರ್ಗವಿದ್ದಿಲ್ಲ, ಆದರೆ ಅವಳ ದೀರ್ಘನಿಶ್ವಾಸಗಳು ರಾಜ-ರಾಣಿಯರಿಗೆ ಕೇಳಿಸಿದವು. ಭೂತದಯಾಪರಳಾದ ಮಾತಾಜಿಯು ಎರಡು ಜೀವಗಳ ಹತ್ಯೆಯಿಂದ ವ್ಯಥಿಥಾಂತಃಕರಣೆಯಾಗಿರುವಳೆಂದು ಅವಳ ನಿಶ್ವಾಸದಿಂದ ರಾಜ-ರಾಣಿಯರು ಕಲ್ಪನೆ ಮಾಡಿಕೊಂಡರು ಮಾತಾಜಿಯು ಎಷ್ಟೇ ಕೃಪಾಳುವಾಗಿದ್ದರೂ, ಆಸ್ಥಾನದಲ್ಲಿ ಭೂತದಯೆಯನ್ನು ತೋರದೆ, ಮಹಾಪರಾಧಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸಿದ್ದಕ್ಕಾಗಿ ಜಿಜಾಬಾಯಿಯು ಅವಳನ್ನು ಮನದಲ್ಲಿ ಮನಸ್ವೀಯಾಗಿ ಕೊಂಡಾಡಿದಳು.

ನಿಶ್ಚಯಿಸಿದ ವೇಳೆಗೆ ರಾಮದಾಸನು ಶಿರೋಳದೊಳಗಿನ ಭೋಜನಪಾತ್ರ ದೇವಾಲಯದ ಎದುರಿನ ಬೈಲು ಸ್ಥಳಕ್ಕೆ ತರಲ್ಪಟ್ಟನು. ಅವನ ದೀಪನಿರ್ವಾಣಕ್ಕೆ ಸರಿಯಾದ ಏರ್ಪಾಟು ಮಾಡಲ್ಪಟ್ಟಿತ್ತು ಒಂದು ದೊಡ್ಡ ತೆಗ್ಗಿನಲ್ಲಿ ಸುಟ್ಟ ಸುಣ್ಣದ ಕಲ್ಲುಗಳು ಸುರವಲ್ಪಟ್ಟಿದ್ದವು. ಇನ್ನೂ ಕೆಲವು ಚೀಲಗಳು ಮೇಲ್ಭಾಗದಲ್ಲಿ ಬಿದ್ದಿದವು. ದೊಡ್ಡ ದೊಡ್ಡ ಪಾತ್ರೆಗಳಲ್ಲಿ ನೀರು ತುಂಬಿಡಲ್ಪಟ್ಟಿತ್ತು. ಈ ಎಲ್ಲ ದೃಶ್ಯಗಳನ್ನು ನೋಡಿ ರಾಮ

ದಾಸನಿಗೆ ಅಲ್ಲಿಯೇ ಮೂರ್ಛೆ ಬಂದಿತು! ಅವನ ಅವಸ್ಥೆಯನ್ನು ಕಂಡು, ನಿಷ್ಠುರ ಹೃದಯದ ಸೇವಕರೂ ಕೂಡ ಮರುಗಿದರು ಸದ್ಯದ ಅಸಾವಧ ಸ್ಥಿತಿಯಲ್ಲಿಯೆ ಅವನನ್ನು ಸುಣ್ಣದ ತೆಗ್ಗಿನಲ್ಲಿ ಚಲ್ಲಿ ರಾಜಾಜ್ಞೆಯನ್ನು ಕೊನೆ ಗಾಣಿಸಬೇಕೆಂದು ಅವರು ಯೋಚಿಸಿದರು. ಮೈಮರೆದಾಗ ಭೀಷಣವಾದ ಶಿಕ್ಷೆಯಿಂದ ಅವನಿಗೆ ಅಷ್ಟು ಯಾತನೆಯಾಗಲಿಕ್ಕಿಲ್ಲೆಂಬ ಭಾವನೆಯಿಂದ ಅವರು ಈ ಮೇರೆಗೆ ಯೋಚನೆ ಮಾಡಿದರು. ಅವರು ರಾಮದಾಸನನ್ನು ಸುಣ್ಣದಲ್ಲಿ ಹಾಕಿದ ಕೂಡಲೆ ಎಚ್ಚತ್ತನು. ಆಗ ಅವನು ಸೇವಕರನ್ನು ಕುರಿತು ವಿನಯದಿಂದ:– "ದಯಮಾಡಿ ನನಗೆ ಜೀವದಾನ ಕೊಡಿರಿ." ಎಂದು ಬೇಡಿಕೊಂಡನು.

ಸಾಧು-ಸಂತರಿಗೆ ಪೀಡೆ ಕೊಟ್ಟರೆ ತಮಗೆ ದೋಷ ತಟ್ಟುವದೆಂಬ ವಿಚಾರವು ಸೇವಕರ ಮನಸ್ಸಿನಲ್ಲಿ ಹುಟ್ಟಿತು, ಆದರೆ ರಾಜಾಜ್ಞೆಯ ವಿರುದ್ಧ ವಾಗಿ ಹೇಗೆ ನಡೆಯುವರು? ಅಂಥದರಲ್ಲಿ ರಾಣಿಯ ಸ್ವಭಾವಪರಿಚಯವು ಅವರಿಗೆ ಚನ್ನಾಗಿತ್ತು ಆಗ ಅವರು:—"ಸ್ವಾಮಿಮಹಾರಾಜರೆ! ನೀವು ನಮ್ಮ ಮೇಲೆ ಮುನಿಸುಗೊಂಡು ಶಾಪಕೊಡಬೇಡಿರಿ. ನಾವು ರಾಜಾಜ್ಞೆಯ ದಾಸರು. ನಿಮಗೆ ಶಿಕ್ಷೆ ವಿಧಿಸುವದು ನಮಗೆ ಅಪರಿಹಾರ್ಯವಿರುವದು."

"ನನಗೆ ನೀವು ಅಹಿತಮಾಡಿದರೆ ದೇವರು ನಿಮಗೆ ಕಲ್ಯಾಣ ಮಾಡ ಲಿಕ್ಕಿಲ್ಲ ದೇವರು ದಯಾಘನನಿರುವನು. ನೀವು ನನ್ನ ಮೇಲೆ ದಯೆ ದೋರಿದರೆ, ದೇವರು ನಿಮ್ಮ ಮೇಲೆ ದಯ ಮಾಡುವನು."

"ನಾವು ದೇವರಿಗಿಂತಲೂ ದೇವಿಗೆ-ರಾಣೀಸರಕಾರಕ್ಕೆ ಹೆಚ್ಚು ಮಹತ್ವ ಕೊಡಬೇಕಾಗಿದೆ. ಹಾಗೆ ಮಾಡದಿದ್ದರೆ ನಿಮಗೆ ವಿಧಿಸಲ್ಪಡುವ ಶಿಕ್ಷೆಯನ್ನು ನಾವೇ ಹೊಂದಬೇಕಾದೀತು." ಎಂದು ಮತ್ತೊಬ್ಬ ಸೇವಕನು ಹೇಳಿದನು.

ಅಷ್ಟರಲ್ಲಿ ನಾಲ್ಕೈದು ಜನರು ಅತ್ತ ಕಡೆಗೆ ಬರುತ್ತಿರುವದನ್ನು ರಾಮ ದಾಸನೂ ಸೇವಕರೂ ಕಂಡರು. ರಾಮದಾಸನಿಗೆ ಮರಣದಂಡನೆಯು ಯೋಗ್ಯರೀತಿಯಿಂದ ವಿಧಿಸಲ್ಪಡುವದೋ ಇಲ್ಲವೋ ನಿರೀಕ್ಷಣೆ ಮಾಡ ಬೇಕೆಂದು ರಾಣಿಯವರು ಬರುತ್ತಿರಬಹುದೆಂದು ಸೇವಕರು ತಿಳಿದರು. ತನಗೆ ವಿಧಿಸಿದ ದಂಡನೆಯನ್ನು ದೂರ ಮಾಡುವದಕ್ಕಾಗಿಯೇ ರಾಣಿಯವರು ಬರು ತ್ತಿರಬಹುದೆಂದು ರಾಮದಾಸನು ತಿಳಿದನು. ಸ್ವಲ್ಪವೇಳೆಯಲ್ಲಿ ಆಗಂತುಕರು ಆ ಸ್ಥಳಕ್ಕೆ ಬಂದರು. ಅವರೆಲ್ಲರೂ ಬುರುಕೆಹಾಕಿದ್ದು, ಅಲ್ಲಿಗೆ ಬಂದ ಕೂಡಲೆ ಆವರಣವನ್ನು ದೂರ ಮಾಡಿದರು. ಅವರಲ್ಲಿ ರಾಣಿಯು ಇದ್ದಿಲ್ಲ. ಎಲ್ಲರೂ ಬೈರಾಗಿಗಳಾಗಿದ್ದರು. ಅವರು ಯೋಗಮಾಯೆಯ ಶಿಷ್ಯರೆಂಬ

ದನ್ನು ರಾಜಸೇವಕರು ಗುರುತಿಸಿದರು. ಬಂದ ಬೈರಾಗಿಗಳಲ್ಲಿ ಒಬ್ಬನು:— "ರಾಮದಾಸ!" ಎಂದು ಕೂಗಿದನು.

"ಮಹಾರಾಜರೆ!" ರಾಮದಾಸನು ಕೈ ಜೋಡಿಸಿ ದೀನವಾಣಿಯಿಂದ "ನನಗೆ ಜೀವದಾನ ಕೊಡಿರಿ. ನಾನು ಮಹಾಪರಾಧಿಯಾಗಿರುವೆನು; ಆದರೆ ಇಷ್ಟುಕಾಲದ ವರೆಗೆ ಅನುಭವಿಸಿದ ಶಿಕ್ಷೆಯೇನೂ ಕಡಿಮೆಯದಿದ್ದಿಲ್ಲ. ಇನ್ನು ಮೇಲೆ ಸದಯ ಹೃದಯಿಗಳಾಗಿ ನನ್ನನ್ನು ಬದುಕಿಸಿರಿ."

"ಇವನನ್ನು ಬಿಡಿರಿ!" ಬೈರಾಗಿಯೊಬ್ಬನು ರಾಜದೂತರಿಗೆ ಆಜ್ಞೆ ಮಾಡಿದನು.

"ರಾಣೀಸಾಹೇಬರ ಆಜ್ಞೆಯನ್ನು ಹೇಗೆ ಮೀರಬೇಕು?" ಎಂದು ಒಬ್ಬ ದೂತನು ಕೇಳಿದನು.

"ರಾಣಿಯವರಿಗೆ ಮಾತಾಜಿಯವರ ಹೆಸರು ಹೇಳಿರಿ. ಮೊದಲು ಇವ ನನ್ನು ಬಿಡಿರಿ"

ತಮಗೆ ಆಜ್ಞೆಮಾಡತೊಡಗಿದ ಬೈರಾಗಿಯು ಯೋಗಮಾಯೆಯೆಂದು ಸೇವಕರು ತಿಳಿದರು. ಆವಳ ಆಜ್ಞೆಯನ್ನು ಮೀರಿದರೆ ತಮ್ಮ ನೂರು ವರ್ಷ ಗಳ ಆಯುಷ್ಯವು ಇಂದೇ ಮುಗಿಯುವದೆಂದು ಅವರು ಅಂಜಿದರು; ಯಾಕಂ ದರೆ, ಯೋಗಮಾಯೆಯ ಇಚ್ಛೆಯ ಮೇರೆಗೆ ರಾಮದಾಸನಿಗೆ ದಂಡನೆ ವಿಧಿಸ ಬೇಕೆಂದು ರಾಣಿಯು ತೀರ್ಮಾನ ಮಾಡಿದ್ದಳು. ಅನಂತರ ಕರ್ತೃತ್ವಶಾಲಿನಿ ಯಾದ ಅವಳ ಆಜ್ಞೆಯನ್ನೇ ಉಲ್ಲಂಘಿಸುವದೆಂದರೆ, ರಾಣಿಯ ಆಜ್ಞೆಯನ್ನು ಮೀರುವದಕ್ಕಿಂತಲೂ ಬಿಕ್ಕಟ್ಟಿನದೆಂದು ಸೇವಕರು ತಿಳಿದರು. ಕೂಡಲೆ ಅವರು ರಾಮದಾಸನನ್ನು ಬಿಟ್ಟು ಬಿಟ್ಟರು.

ಅನಂತರದಲ್ಲಿ ಬೈರಾಗಿಯು ರಾಮದಾಸನನ್ನು ಸಂಗಡ ಕರಕೊಂಡು ಮುಂದೆ ಸಾಗಿದನು. ರಾಜಸೇವಕರು ಅರಮನೆಯ ದಾರೀ ಹಿಡಿದರು. ಕೂಡಲೆ ಬೈರಾಗಿಯು ಅವರನ್ನು ಕುರಿತು:-"ನೀವು ಎಲ್ಲಿಗೆ ಹೋಗುವಿರಿ?"

"ರಾಣೀಸಾಹೇಬರಿಗೆ ಈ ಸಂಗತಿಯನ್ನು ತಿಳಿಸಲಿಕ್ಕೆ ಅರಮನೆಗೆ ಹೋಗುವೆವು."

"ನೀವು ಹುಚ್ಚರಿರುವಿರಿ. ತೆಗ್ಗಿನಲ್ಲಿ ಎಲ್ಲ ಸುಣ್ಣವನ್ನು ಸುರುವಿ, ನೀರು ಹೊಯ್ದು ಬಿಡಿರಿ. ಆಜ್ಞೆಯ ಮೇರೆಗೆ ರಾಮದಾಸನಿಗೆ ಶಿಕ್ಷೆವಿಧಿಸಿದೆವೆಂದು ಹೇಳಿ ಬಿಡುಗಡೆ ಹೊಂದಿರಿ. ಮುಂದೆ ಈ ರಾಮದಾಸನು ನಿಮ್ಮ ಹಾಗು ರಾಣಿಯ ಕಣ್ಣಿಗೆ ಬೀಳುವದಿಲ್ಲ. ಇವನ ಮೇಲೆ ಮಾತಾಜಿಯ ಕೃಪೆ ಯಾಗಿರುವದು. ಅಂದಮೇಲೆ ಇವನಿಗೆ ಯಾರು ಶಾಸನ ಮಾಡುವರು?"

"ನೀವು ನಮ್ಮನ್ನು ಮೋಸಗೊಳಿಸಿದಿರಿ!" ರಾಜಸೇವಕನು ಅಂದನು.

"ನಿಜ. ಅದಕ್ಕಾಗಿ ನೀವು ಮಾಡುವದೇನು? ನೀವು ನಮ್ಮ ಮೇಲೆ ಕೈಮಾಡಿದರೆ ಜೀವಕ್ಕೆ ಹೊರತಾಗಬೇಕಾಗುವದು. ನಾನು ಮಾತಾಜಿಯವರ ಪಟ್ಟಶಿಷ್ಯನಿರುವೆನು. ನೀವು ಏನಾದರೂ ಅನರ್ಥ ನಡೆಯಿಸಿದರೆ, ರಾಮದಾಸನಿಗೆ ಶಿಕ್ಷೆ ವಿಧಿಸದೆ ನೀವೇ ಬಿಟ್ಟರೆಂದು ರಾಣಿಯ ಮುಂದೆ ಹೇಳಿ, ನಿಮ್ಮೆಲ್ಲರ ಪಾರುಪತ್ಯಗೊಳಿಸುವೆನು. ನಾನು ಹೇಳಿದಂತೆ ಕೇಳಿದರೆ ಮಾತ್ರ ನಿಮಗೆ ಉಳಿವುಂಟು."

ರಾಜಸೇವಕರು ಉಪಾಯಗಾಣದೆ, ಬೈರಾಗಿಯ ಹೇಳಿಕೆಯ ಮೇರೆಗೆ ತೆಗ್ಗಿನ ಬಳಿಗೆ ಬಂದು, ಉಳಿದ ಸುಣ್ಣವನ್ನು ಸುರುವಿ, ನೀರು ಹೊಯ್ದರು ಅನಂತರದಲ್ಲಿ ಅವರು ಬೈರಾಗಿಯ ಕಾಲು ಹಿಡಿದು:—"ಈ ಸಂಗತಿಯನ್ನು ಗುಪ್ತವಾಗಿರಿಸಿ ಜೀವದಾನಕೊಡಿರಿ."

"ನಿಮ್ಮ ಮೇಲೆ ಮಾತಾಜಿಯವರ ಕೃಪೆಯಿರುವದು. ನಿರ್ಭಯರಾಗಿರ್ರಿ." ಎಂದು ಬೈರಾಗಿಯು ಅವರಿಗೆ ಆಶ್ವಾಸನೆಯಿತ್ತು, ರಾಮದಾಸನನ್ನೂ ಉಳಿದ ಬೈರಾಗಿಗಳನ್ನೂ ಕರಕೊಂಡು ಅಲ್ಲಿಂದ ಹೊರಟನು.

ಮಾರನೆಯ ದಿನ ಜಿಜಾಬಾಯಿಯು ರಾಮದಾಸನಿಗೆ ಶಾಸನ ವಿಧಿಸಿದ ರಾಜಸೇವಕರಿಗೆ ಒಂದೊಂದು ಬೆಳ್ಳಿಯ ಸರಪಳಿಗಳನ್ನು ಪಾರಿತೋಷಕವಾಗಿ ಕೊಟ್ಟಳು. ಪಾರಿತೋಷಕ ತೆಗೆದುಕೊಂಡು ಹೋಗುವಾಗ ದೂತರ ಮನಸ್ಸಿನಲ್ಲಿ ಉಂಟಾದ ಗೊಂದಲದ ಬಗೆಯನ್ನು ಅವರೇ ಬಲ್ಲರು!

ಶಿರೋಳದಲ್ಲಿ ರಾಮದಾಸನನ್ನು ಭಜಿಸುವ ಜನರು ಬಹಳವಾಗಿದ್ದರು ಅವರು ತಮ್ಮ ಗುರುವಿನ ದುರ್ಮರಣದಿಂದ ಬಹು ಪರಿಯಾಗಿ ನೊಂದರು. ಅವರು ತೆಗ್ಗಿನ ಬಳಿಗೆ ಹೋಗಿ ಅವರ ಮೇಲೆ ಹೂವು ಏರಿಸಿ, ಅರಳಿದ ಸುಣ್ಣವನ್ನು ಹಣೆಗೆ ಹಚ್ಚಿಕೊಂಡರು ಈ ಎಲ್ಲ ಕೆಲಸಗಳು ಮುಚ್ಚುಮರೆಯಾಗಿ ನಡೆದವು. ಜನರು ರಾಮದಾಸನನ್ನು ಭಜಿಸತೊಡಗಿದ ಸಂಗತಿಯು ರಾಣಿಯ ಕಿವಿಯ ಮೇಲೆ ಬಿದ್ದರೆ, ಅವಳು ತಮ್ಮನ್ನಾದರೂ ಸುಣ್ಣದಲ್ಲಿ ಕುದಿಸಿ ಸುಡುವಳೆಂದು ಜನರು ಅಂಜಿದ್ದರು.

ರಾಮದಾಸನನ್ನು ಉಳಿಸಿದ ಬೈರಾಗಿಗಳು ಯಾರಿರಬಹುದು? ಇತ್ತೀಚೆಗೆ ರಾಜ-ರಾಣಿಯರಿಗೆ ಪೂಜನೀಯಳಾದ ಯೋಗಮಾಯೆಯು ಯಾರಾಗಿರಬಹುದು?

## ಒಪ್ಪಂದವೊ, ದ್ವಂದ್ವವೊ?

— ÷+ — —

ಪೇಶವೆ ಬಾಜೀರಾಯನು ಕಾಗಲದಿಂದ ಹೊರಟು ಶಿರೋಳಕ್ಕೆ ಬಂದನು. ಅಂದು ಶಿರೋಳವು ರಾಮದಾಸನ ಪ್ರಕರಣದಿಂದ ಅಲ್ಲೋಲ-ಕಲ್ಲೋಲವಾಗಿತ್ತು; ಆದ್ದರಿಂದ ಅವನು ಅಂದು ಸಂಭಾಜಿರಾಜನಿಗೆ ಭೆಟ್ಟಿಯಾಗದೆ ಒಬ್ಬ ಅಧಿಕಾರಿಯ ಮನೆಯಲ್ಲಿ ಇಳಿದುಕೊಂಡನು. ಅಂದು ಅವನಿಗೆ ಅಲ್ಲಿಯ ಪರಿಸ್ಥಿತಿಯ ಕಲ್ಪನೆಯಾಯಿತು. ಈಗ ಸಂಭಾಜಿರಾಜನು ಪರಾಭವಹೊಂದುತ್ತ ನಡೆದಿರುವದರಿಂದ, ಒಪ್ಪಂದಕ್ಕೆ ಒಪ್ಪಬಹುದೆಂದು ಅವನು ತಿಳಿದನು. ಮಾರನೆಯ ದಿನ ಅವನು ರಾಜದರ್ಶನಕ್ಕಾಗಿ ಅರಮನೆಗೆ ಹೊರಟನು ಸಂಭಾಜಿರಾಜನಾದರೂ ಪೇಶವೆಯ ಮಾರ್ಗ ನಿರೀಕ್ಷಣೆ ಮಾಡತೊಡಗಿದ್ದನು. ಪೇಶವೆಯು ಅರಮನೆಯನ್ನು ಪ್ರವೇಶಿಸಿ, ರಾಜನಿಗೆ ಮುಜುರೆ ಮಾಡಿದನು. ರಾಜನಾದರೂ ಅವನನ್ನು ಸನ್ಮಾನಪೂರ್ವಕವಾಗಿ ತನ್ನ ಬಲಗಡೆಯ ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಅಂದಿನ ಓಲಗದಲ್ಲಿ ಭಗವಂತರಾಯ ಅಮಾತ್ಯನೂ, ಕೃಷ್ಣರಾಯ ಪ್ರತಿನಿಧಿಯೂ ಇದ್ದರು. ಸತ್ಕೃದ್ದರ್ಶನದಲ್ಲಿ ತನಗೆ ಬಹುಮಾನವಾದದ್ದು ಶುಭಶಕುನವೆಂದು ತಿಳಿದು ಬಾಜೀರಾಯನು ಆನಂದಬಡುತ್ತಲಿದ್ದನು. ಆಗ ಸಂಭಾಜಿರಾಜನು ಅವನನ್ನು ಕುರಿತು:—"ಪೇಶವೆ! ನೀವು ನಮ್ಮ ಕಡೆಗೆ ಯಾಕೆ ಬಂದಿರೆಂಬದನ್ನು ನಾವು ಅರಿತಿರುವೆವು."

"ಮಹಾರಾಜರು ನಿಜವಾಗಿಯೂ ಅಂಥ ಚತುರರೇ ಇರುವರು." ಎಂದು ಬಾಜೀರಾಯನು ನಮ್ರತೆಯಿಂದ ನುಡಿದನು.

"ಪೇಶವೆ! ಸವಿಮಾತಿನಿಂದ ಮಹಾರಾಜರ ಮನಸ್ಸನ್ನು ಆಕರ್ಷಿಸಿಕೊಳ್ಳಬಹುದೆಂದು ನೀವು ತಿಳಿದಿರಬಹುದು; ಆದರೆ ಈ ಸಂಗತಿಯು ನೀವು ತಿಳಿದುಕೊಂಡಷ್ಟು ಸುಲಭವಿಲ್ಲ."

ಸಂಭಾಜಿಯ ಮಾತುಗಳನ್ನು ಕೇಳಿ ಬಾಜೀರಾಯನಿಗೆ ವಿಸ್ಮಯವಾಯಿತು. ಇಷ್ಟು ಹೊತ್ತಿನವರೆಗೆ ರಾಜನ ವಿಷಯವಾಗಿ ನೆಲೆಗೊಂಡಿದ್ದ ಕಲ್ಪನೆಯು ಬೇರೆಯಾಯಿತು. ಆದರೂ ಅವನು ಮನಸ್ಸಿನಲ್ಲಿಯ ವಿಕಾರವನ್ನು ಹೊರಗೆಡವದೆ:—"ಯಾವದೊಂದು ಸಂಗತಿಯನ್ನು ನೀವೂ ಮಹಾರಾಜರೂ ಕೂಡಿಯೇ ತಾಳ್ಮೆಯಿಂದ ಕೊನೆಗಾಣಿಸುವದನ್ನು ನಿಶ್ಚಯಿಸಿದರೆ, ಅದು ಎಂದೂ ಕಠಿಣವಾಗಲಾರದೆಂದು ನನಗೆ ತೋರುವದು"

ರಾಜನು ಆಧ್ಯತೆಯಿಂದ:—"ಈ ಉಪಸ್ಥಿತವಾದ ಪ್ರಕರಣವು ತಾಳ್ಮೆಯಿಂದ ಬಗೆಹರಿಯುವಂತಹದಲ್ಲ."

"ಅದೇಕೆ?"

"ಅದನ್ನು ನೀವೇ ನಿಮ್ಮ ಮನಸ್ಸಿಗೆ ಕೇಳಿಕೊಳ್ಳಿರಿ."

"ಅದನ್ನು ಮಹಾರಾಜರು ಹೇಳಿದರೂ ನಡೆಯುವದು."

"ಇದ್ದಲಿಯನ್ನು ತೇಯುತ್ತ ಹೋದಂತೆ ಕಪ್ಪೇ ಹೊರಡುತ್ತ ಹೋಗುವದಲ್ಲದೆ, ಅದರಿಂದ ಶ್ವೇತವರ್ಣವು ಹೊರಡಲಾರದು."

"ಹೀಗೆ ಇಬ್ಬರಿಗೂ ಅನ್ನಲಿಕ್ಕೆ ಬರುವದು; ಆದರೆ ಹಾಗೆ ಅನ್ನುವ ಪ್ರಸಂಗವು ಇಬ್ಬರಿಗೂ ಬರಬಾರದೆಂದೇ ಈ ಎಲ್ಲ ಸಾಹಸ ಮಾಡಬೇಕಾಗಿದೆ."

"ಅದಕ್ಕಾಗಿ ನೀವು ಯಾವ ಹಂಚಿಕೆಯನ್ನು ತೆಗೆಯುವಿರಿ? ಹೇಳಿರಿ ನೋಡುವಾ."

"ಇಂದಿನ ವರೆಗಿನ ವ್ಯಾಜ್ಯವೂ ರಕ್ತಪಾತವೂ ಇಲ್ಲಿಗೇ ನಿಲ್ಲಬೇಕು. ಮುಂದೆ ಇಬ್ಬರೂ ಮಹಾರಾಜರು ಸುವಿಚಾರದಿಂದ ನಡೆದು ಸ್ವರಾಜ್ಯಕಲ್ಯಾಣವನ್ನು ಸಾಧಿಸಬೇಕು. ಮನುಷ್ಯನು ಈರ್ಷೆಗೆ ಬಿದ್ದರೆ, ಯಾವ ಹೊತ್ತಿಗೆ ಏನು ಮಾಡುವನೆಂಬದರ ನಿಯಮವಿಲ್ಲ. ಈ ದೃಷ್ಟಿಯಿಂದ ವಿಚಾರಿಸಿದರೆ ತಮ್ಮಿಂದ ಇಂದಿನ ವರೆಗೆ ಘಟಿಸಿದ ಕೃತ್ಯಗಳು ತಮ್ಮ ಹಾಗು ತಮ್ಮ ವಂಶದ ಮತ್ತು ಹಿಂದು ಸ್ವರಾಜ್ಯದ ಗೌರವಕ್ಕೆ ಕುಂದು ಬರುವಂಥವುಗಳಾಗಿವೆ."

"ಪೇಶವೆ! ಅಂಥ ಸಂಗತಿಗಳಾವವು ಹೇಳಿರಿ?"

"ಅವುಗಳನ್ನು ಶೋಧಿಸುತ್ತ ನಾನು ಬಹಳ ದೂರ ಹೋಗಬೇಕಾಗುವದು"

"ಹಾಗಾದರೆ ಅಲ್ಲಿ ಒಂದು ಬಂಡೆಯು ಬಡೆದು ಮಸ್ತಕವು ರಕ್ತಮಯವಾಗಬಹುದು; ಆದ್ದರಿಂದ ಮೊದಲು ಅದರ ಜತನ ಮಾಡಲಿಕ್ಕೆಬೇಕು." ಕೃಷ್ಣರಾಯ ಪ್ರತಿನಿಧಿಯು ಚುಚ್ಚಿ ಮಾತನಾಡಿದನು.

ಈ ಮಾತು ಕೇಳಿ ಬಾಜೀರಾಯನಿಗೆ ತ್ವೇಷವುಂಟಾಯಿತು. ಆಗ ಅವನು:—"ಕೃಷ್ಣರಾಯರೆ! ನೀವು ನಡುವೆ ಮಾತನಾಡದಿದ್ದರೂ ನೀವು ಪರಶುರಾಮಪಂತ-ಪ್ರತಿನಿಧಿಗಳ ಚಿರಂಜೀವಿಗಳೂ, ಶ್ರೀಪತಿರಾಯ-ಪ್ರತಿನಿಧಿಗಳ ಬಂಧುಗಳೂ ಇರುವಿರೆಂಬದನ್ನು ನಾನು ಗುರುತಿಸುತ್ತಿದ್ದೆನು."

"ಈಗ ನಾನು ಮಾಡಿದ್ದೇನು?" ಆಧ್ಯತೆಯಿಂದ ಕೃಷ್ಣರಾಯನು ಕೇಳಿದನು.

"ಅದನ್ನು ನೀವೇ ನಿಮ್ಮ ಮನಸ್ಸಿಗೆ ಕೇಳಿರಿ." ಎಂದು ಬಾಜೀ

ರಾಯನು ನುಡಿದು, ಎಲ್ಲರನ್ನು ಕುರಿತು ಕೈಜೋಡಿಸಿ:—"ಇದು ವಾದಿಸುತ್ತ ಕುಳಿತುಕೊಳ್ಳುವ ಸಮಯವಲ್ಲ. ಮಹಾರಾಜರ ಹಾಗು ನನ್ನ ಮಾತಿನಲ್ಲಿ ಆಗಂತುಕತನದಿಂದ ಯಾರೂ ನಡುವೆ ಬಾಯಿ ಹಾಕಬಾರದು"

ಬಾಜೀರಾಯನ ಮಾತಿನಿಂದ ಕೃಷ್ಣರಾಯನು ತಲೆ ಬಾಗಿಸಿದನು. ಅನಂತರದಲ್ಲಿ ಬಾಜೀರಾಯನು ಸಂಭಾಜಿಯನ್ನು ಕುರಿತು:—"ಮಹಾರಾಜರೆ! ನಮ್ಮ ಹೆಚ್ಚು-ಕಡಿಮೆಯು ಮಾತಿನಿಂದ ತಮಗೆ ತೊಂದರೆ ಯಾಯಿತು; ಕ್ಷಮಿಸಬೇಕು. ತಮ್ಮೊಡನೆಯೂ ರಾಣೀಸಾಹೇಬರೊಡನೆಯೂ ಮಾತನಾಡಲಿಕ್ಕೆ ನನಗೆ ಸ್ವತಂತ್ರ ಸಂಧಿಯು ದೊರೆತರೆ ಒಳಿತಾಗುವದು."

ಛತ್ರಪತಿ-ಪೇಶವೆಯರು ಕುಳಿತ ಉಚ್ಚಾಸನದ ಹಿಂದೆಯೇ ಇದ್ದ ಗೋಡೆಯಲ್ಲಿ ಒಂದು ಭಿತ್ತಿವಾತಾಯನವಿದ್ದಿತು. ಅಲ್ಲಿಂದ ಈ ಮೇರೆಗೆ ಧ್ವನಿಯು ಹೊರಬಿತ್ತು.—"ಪೇಶವೆ! ನಾನು ಇಲ್ಲಿಯೇ ಇರುವೆನು. ನನಗೆ ಎಲ್ಲ ಸಂಗತಿಗಳೂ ಕೇಳಿರುವವು"

"ರಾಣೀಸಾಹೇಬರು ಇಲ್ಲಿಯೆ ಇರುವರೇ! ಒಳಿತಾಯಿತು. ಸಾತಾರೆ-ಕೊಲ್ಹಾಪುರಗಳ ರಾಜಮನೆತನಗಳಲ್ಲಿ ಐಕ್ಯವು ನೆಲೆಗೊಳ್ಳಬೇಕೆಂದು ಶಾಹೂ ಮಹಾರಾಜರ ಇಚ್ಛೆಯಿರುವದು." ಎಂದು ಬಾಜೀರಾಯನು ಹೇಳಿದನು.

"ಹಾಗಾದರೆ ಐಕ್ಯವನ್ನು ಯಾರು ಮುರಿದರು?"

"ರಾಣೀಸಾಹೇಬರೆ! ಹಿಂದಿನ ರಾಡಿಯನ್ನು ತೊಳೆಯುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವಿಲ್ಲ. ಆಗಿಹೋದ ಮಾತುಗಳನ್ನು ಮರೆತು, ಮುಂದೆ ಐಕ್ಯದಿಂದ ನಡೆದುಕೊಳ್ಳಲಿಕ್ಕೆ ಉಭಯತರೂ ಸಿದ್ಧರಾಗಲಿಕ್ಕೆಬೇಕು."

" 'ನಾವೂ ನೀವೂ ನೆಂಟರು; ನಮ್ಮ ಕಂಟಲಿಗೆ ಕೈಹಾಕಬೇಡಿರಿ' ಎಂಬಂತೆ ಶಾಹೂಮಹಾರಾಜರು ಐಕ್ಯವನ್ನು ಮಾಡುವಂತಿದ್ದರೆ, ಅದು ನಮಗೆ ಬೇಡ. ಇಂದು ನಮ್ಮ ಪಕ್ಷವು ಪ್ರಬಲವಾಗಿರುವದೆಂಬದನ್ನು ಮನಗಂಡು, ಅವರು 'ಮುಚ್ಚಿದ ಕೈಯಲ್ಲಿ ಮೂರು ಲಕ್ಷ'ವೆಂಬಂತೆ ತಮ್ಮ ಒಗರನ್ನು ಇಟ್ಟುಕೊಂಡು, ಐಕ್ಯದ ಸಲುವಾಗಿ ಹೋರಾಡತೊಡಗಿರುವರು."

ಸಂಭಾಜಿರಾಜನು ಹೀಗೆ ಮಾತಾಡಿದ ಕೂಡಲೆ ಬಾಜೀರಾಯನು ಗಂಭೀರತೆಯಿಂದ:—"ಮಹಾರಾಜರೆ! ನೀವು ಹೀಗೆ ಮಾತಾಡಿದ್ದಕ್ಕೆ ಸ್ಪಷ್ಟವಾಗಿ ಉತ್ತರ ಕೊಡಬೇಕಾಗಿದೆ. ಅದಕ್ಕಾಗಿ ಕ್ಷಮಿಸಿರಿ. ಶಾಹೂಮಹಾರಾಜರು ನಿಮಗಾಗಲಿ ನಿಮ್ಮ ಪಕ್ಷಕ್ಕಾಗಲಿ ಅಂಜಿ ಐಕ್ಯವನ್ನು ಬಯಸುತ್ತಿರುವರೆಂದು ನೀವು ತಿಳಿದುಕೊಳ್ಳಬೇಡಿರಿ. ನೀವು ಹಾಗೆ ತಿಳಿದುಕೊಳ್ಳುತ್ತಿದ್ದರೆ,

ನನ್ನ ಮಾತೇ ನಿಂತಂತಾಯಿತು."

"ಪೇಶವೆ, ಮಾತಾಡುವದನ್ನು ಆಡಿ ಬಿಡಿರಿ."

"ನಿಮ್ಮ ಹಾಗು ನಿಮ್ಮ ಪಕ್ಷದ ಪರಿವೆಯು ನಮಗೆ ತಿಲಾಂಶವಾದರೂ ಇರುವದಿಲ್ಲ. ಸದ್ಯದ ಸಂಗ್ರಾಮವು ಮುಂದುವರಿದರೆ, ವಿಜಯಶ್ರೀಯು ಶಾಹೂಮಹಾರಾಜರಿಗೇ ಮಾಲೆ ಹಾಕುವಳು."

"ಹೀಗೆಯೊ?" ಎಂದು ಸಂಭಾಜಿರಾಜನು ತಿರಸ್ಕಾರದಿಂದ ನುಡಿದು - "ವಸ್ತುಸ್ಥಿತಿಯು ಹೀಗಿದ್ದರೂ ನಿಮ್ಮ ಮಹಾರಾಜರಿಗೆ ಒಡಂಬಡಿಕೆಯ ಉತ್ಕಂಠೆಯು ಬೆಳೆಯುತೊಡಗಿರುವದರ ಇಂಗಿತವೇನೋ ತಿಳಿಯುದಾಯಿತಲ್ಲ!"

"ಅದು ನಿಮಗೆ ತಿಳಿಯದಿದ್ದರೆ ಹಿಂದು ಸ್ವರಾಜ್ಯದ ದುರ್ದೈವ! ಮಹಾರಾಜರೆ, ನಾನು ಸತ್ಯವನ್ನೇ ಆಡುತ್ತಿರುವೆನು ನನ್ನ ಕಠೋರತನದ ಬಗ್ಗೆ ಕ್ಷಮಿಸಿರಿ ನೀವು ಹಿಂದಿನ ಒಂದು ಶತಕದ ಇತಿಹಾಸವನ್ನು ಮನಸ್ಸಿನಲ್ಲಿ ತಂದುಕೊಳ್ಳಿರಿ. ಪರಮಪೂಜ್ಯರಾದ ಶ್ರೀ ಛತ್ರಪತಿ ಶಿವಾಜಿಮಹಾರಾಜರು ಹಿಂದುಪದ ಪಾತಶಾಹಿಯನ್ನು ಸ್ಥಾಪಿಸಬೇಕಾದರೆ ಹೇಗೆ ಹೇಗೆ ಶ್ರಮಬಟ್ಟರೆಂಬದು ಹಿಂದಿನ ಇತಿಹಾಸದಿಂದ ನಿಮಗೆ ಕಂಡು ಬರುವದು. ಅವರ ಮಹತ್ಕಾರ್ಯಕ್ಕೆ ವಿಜಾಪುರ-ದಿಲ್ಲಿಗಳ ಬಾದಶಾಹಿಗಳಿಂದ ಬೇಕಾದಷ್ಟು ವಿರೋಧವಾದರೂ ಅದನ್ನು ಲೆಕ್ಕಿಸದೆ, ಕಾರ್ಯಸಾಧನೆಯಾದದ್ದು ಯಾತರ ಲಕ್ಷಣವು? ಹಿಂದುಗಳ ಐಕ್ಯವೇ ಮಹಾರಾಜರ ಸ್ವರಾಜ್ಯ ಸ್ಥಾಪನೆಗೆ ಕಾರಣವಾಗಲಿಲ್ಲವೆ? ಶಿವಾಜಿಮಹಾರಾಜರ ತರುವಾಯದ ಇತಿಹಾಸವನ್ನೂ ನೀವು ಅರಿತಿರುವಿರಿ. ಶಾಹೂಮಹಾರಾಜರು ದಕ್ಷಿಣಕ್ಕೆ ಬಂದ ಮೇಲೆ ತಾರಾಬಾಯಿರಾಣೀಸಾಹೇಬರು ಅವರ ವಶಕ್ಕೆ ಸ್ವರಾಜ್ಯವನ್ನು ಕೊಡದೆ, ಸವತಿಸುಭೆಯನ್ನು ನಿರ್ಮಾಣ ಮಾಡಿದರು. ಅವರಿಂದ ನೀವು ರಾಜ್ಯವನ್ನು ದೊರಕಿಸಿಕೊಳ್ಳಬೇಕಾದರೆ ಶಾಹೂಮಹಾರಾಜರೇ ನಿಮಗೆ ಸಹಾಯ ಮಾಡಿದರು. ನಿಮಗೆ ರಾಜ್ಯಕೊಡಬಾರದೆಂದು ಮಹಾರಾಜರು ಮನಸ್ಸಿನಮೇಲೆ ತೆಗೆದುಕೊಂಡಿದ್ದರೆ, ನೀವು ಇಂದಿನ ವೈಭವವನ್ನು ಅನುಭವಿಸುತ್ತಿರಲಿಲ್ಲ. ಮಹಾರಾಜರಿಗೆ ಸ್ವಜನಾನುರಾಗವುಂಟು. ನೀವು ಅವರೊಡನೆ ಕೃತಜ್ಞತೆಯಿಂದಿದ್ದರೆ ಎಷ್ಟೋ ಶೋಭೆಯುಂಟಾಗುತ್ತಿತ್ತು. ಎರಡೂ ಸ್ವರಾಜ್ಯಗಳು ಬೇರೆ ಬೇರೆಯಾಗಿರದೆ, ಹಿಂದುಪದಪಾತಶಾಹಿಯ ವಿರಾಟ್‌ಪುರುಷನ ಎರಡು ಕೈಗಳೆಂಬ ಬಾವನೆಯು ಹುಟ್ಟಿದ್ದರೆ, ಚಂದ್ರಸೇನ ಜಾಧವ ನಿಜಾಮ ಮೊದಲಾದ ಗೃಹಭೇದಿಗಳ ಆಟವು ನಡೆಯುತ್ತಿದ್ದಿಲ್ಲ. ನೀವಿಬ್ಬರೂ ರಾಜಬಂಧುಗಳು ಸ್ವರಾಜ್ಯದ್ರೋಹಿಗಳ ಹಲ್ಲು ಮುರಿಯುವಷ್ಟು ಸಮರ್ಥರಾಗುತ್ತಿದ್ದಿರಿ ನಿಮಗೆ ರಾಜ್ಯದಾನ ಮಾಡುವಾಗ ಸಹಾನುಭೂತಿಯನ್ನು ತೋರಿಸಿದ

ಕಾರಣವೇನೆಂದರೆ, ಹಿಂದುಸಾಮ್ರಾಜ್ಯಕ್ಕೆ ಪರಚಕ್ರಗಳ ಭಯವು ಉಳಿಯ ಬಾರದು; ಹಿಂದುಸ್ವರಾಜ್ಯದ ಅಭ್ಯುದಯಕ್ಕೆ ತಮ್ಮ ಬಂಧುವಿನಿಂದ ನೆರವು ದೊರೆಯಬಹುದು. ಮೊದಲಾದ ವಿಚಾರಗಳನ್ನು ಶಾಹೂಮಹಾರಾಜರು ಮನಸ್ಸಿನಲ್ಲಿ ತಂದರು; ಆದರೆ ನೀವು ಸ್ವರಾಜ್ಯದ ಹಿತವನ್ನು ಸಾಧಿಸಲೇ ಇಲ್ಲ, ಇಷ್ಟೇ ಅಲ್ಲ, ಸ್ವರಾಜ್ಯಕ್ಕೇ ಅಹಿತವಾಗುವಂಥ ಕೃತ್ಯಗಳು ನಿಮ್ಮಿಂದ ಘಟಿಸಿದವು. ಅದಕ್ಕಾಗಿಯೇ ಹಿಂದು ಸ್ವರಾಜ್ಯದ ಪಕ್ಷದಿಂದ ನಿಜಾಮ ನೊಡನೆ ಕಾದುವಾಗ ನಿಮ್ಮ ಮೇಲೆ ಶಸ್ತ್ರವೆತ್ತುವ ಪ್ರಸಂಗವು ನನಗೆ ಪ್ರಾ-ಪ್ತವಾಯಿತು. ನಿಮ್ಮ ಮೇಲೆ ಶಸ್ತ್ರ ಹಿಡಿಯಲಿಕ್ಕೆ ಒಪ್ಪಿಗೆ ಕೊಡುವಾಗ ಮಹಾರಾಜರ ಮನಸ್ಸಿನಲ್ಲುಂಟಾದ ತಲ್ಲಣವನ್ನು ಈಗ ಬಾಯಿಂದ ಆಡಿದರೆ ತೀರುವಂತಿಲ್ಲ. ನೀವು ಸ್ವರಾಜ್ಯದ್ರೋಹಿಗಳ ಪಕ್ಷಹಿಡಿದು ಸಾಧಿಸಿದ್ದೇನು? ಹಿಂದುಗಳ ಹಾಗು ಹಿಂದು ರಾಜ್ಯದ ದ್ರೋಹಚಿಂತನೆ ಮಾಡುವ ನಿಜಾಮ ನಂತಹ ಶತ್ರುಗಳು ನಿಮ್ಮನ್ನು ಬನ್ನಿಗೆ ಹಾಕಿಕೊಳ್ಳುವದರ ಮರ್ಮವನ್ನು ನೀವು ಅರಿತಿರುವಿರೇನು? ಮಹಾರಾಜರೇ, ನಿಜಾಮನಂತಹ ಜನರನ್ನು ನಂ-ಬಿದರೆ ಹೇಗೆ ಗೊತ್ತಿಗೆ ಮುಟ್ಟೀರಿ? ಬೆಂಕಿ-ನೀರುಗಳ ಮೈತ್ರಿಯು ಎಂದಾ ದರೂ ಸಂಭಾವ್ಯವಿರುವದೆ? ಕಟುಕನು ಎಂದಾದರೂ ಆಕಳ ಮೇಲೆ ದಯೆ ತೋರಿಸುವದುಂಟೆ? ಇಂಥ ಅವಿಂಧರ ಸಾಹಾಯದಿಂದ ಹಿಂದುಗಳ ಹಾಗು ಮಾತೃಭೂಮಿಯ ಮಂಗಲವನ್ನು ಸಾಧಿಸಲಿಕ್ಕೆ ಬರುವಂತಿದ್ದರೆ, ಶಿವಪ್ರಭು ಗಳು ತಮ್ಮ ತಂದೆಯ ರೋಷವನ್ನು ಸಹನ ಮಾಡಿ, ಅವಿಂಧರ ವಿರುದ್ಧ ವಾಗಿ ಎಂದೂ ಶಸ್ತ್ರವನ್ನೆತ್ತುತ್ತಿದ್ದಿಲ್ಲ. ಶಿವಛತ್ರಪತಿಗಳೊಡನೆ ಮೈತ್ರಿ ಯನ್ನು ಬಳೆಯಿಸುವ ಸೋಗು ಹಾಕಿ, ವಿಶ್ವಾಸಘಾತ ಮಾಡಲೆಳಸಿದ ಅಫ ಝುಲಖಾನ-ಶಾಹಿಸ್ತೆಖಾನರ ನಿಮಗೆ ಏನು ಕಲಿಸುತ್ತಾರೆ? ಶಿವಪ್ರಭುಗಳನ್ನು ವಿಶ್ವಾಸಘಾತದಿಂದ ಸೆರೆಹಿಡಿಯಲುಪಕ್ರಮಿಸಿದ ಹಾಗು ಸಂಭಾಜಿಮಹಾ ರಾಜರನ್ನು ಅಮಾನುಷ ಅತ್ಯಾಚಾರಗಳಿಂದ ವಧ ಮಾಡಿದ ಅವಿಂಧ ಬಾದ ಶಹನು ನಿಮಗೆ ಏನು ಕಲಿಸುವನು? ಅವೇ ಬಾದಶಹನು ಶಾಹೂಮಹಾರಾಜ ರನ್ನು ಧರ್ಮಭ್ರಷ್ಟರನ್ನು ಮಾಡುವದಕ್ಕೆ ಸಿದ್ಧನಾಗಿದ್ದಿಲ್ಲವೆ? ಹಿಂದಿನ ಇವೆಲ್ಲ ದೃಷ್ಟಾಂತಗಳಿಂದ ನಿಮಗೆ ಅವರ ಸ್ನೇಹ ವಿಶ್ವಾಸಗಳ ಬೆಲೆಯು ತಿ-ಳಿಯುವದಿಲ್ಲೆಂದು ಹೇಗೆ ಅನ್ನಲಿ? ಶತಕಾನುಶತಕಗಳವರೆಗೆ ಹಿಂದುಭೂಮಿ ಯಲ್ಲಿದ್ದು, ಹಿಂದಭೂಮಿಯ ಅನ್ನವನ್ನುಂಡು, ಹಿಂದ ಭೂಮಿಯಿಂದ ತಮ್ಮ ವೈಭವಗಳನ್ನು ಬೆಳೆಯಿಸಿಕೊಂಡ ಅವಿಂಧರು, ಹಿಂದು ಭೂಮಿಯನ್ನು ತಮ್ಮ ಮಾತೃಭೂಮಿಯಂತೆ ಮನ್ನಿಸಲಿಕ್ಕೆ ಸಿದ್ಧರಿಲ್ಲ; ಅಷ್ಟೇ ಅಲ್ಲ, ಹಿಂದ

ಭೂಮಿಯ ದ್ರೋಹಚಿಂತನೆ ಮಾಡುವದಕ್ಕೆ ಹಿಂಜರಿಯುವದಿಲ್ಲ! ಇಂತಹ ಮಾತೃದ್ರೋಹಿಗಳನ್ನು ನಾವು ಯಾಕೆ ನಂಬಬೇಕು? ಅವರಿಗೆ ಯಾಕೆ ಆಶ್ರಯ ಕೊಡಬೇಕು? ಅವರನ್ನು ಹಣಿಯುವದಕ್ಕಾಗಿ ನಮ್ಮ ಶಕ್ತಿಗಳನ್ನು ಬೆಳೆಯಿಸಲಿಕ್ಕೆ ನಾವು ಯಾಕೆ ಪ್ರಯತ್ನಿಸಬಾರದು? ಮಹಾರಾಜರೆ, ನೀವು ನಿಮ್ಮ ಕಾರ್ಯಸಾಧಕ ಸ್ನೇಹಿಗಳ ಹಂಬಲವನ್ನು ತ್ಯಜಿಸಿರಿ. ಹಿಂದು ಸ್ವ-ರಾಜ್ಯವು ಇಂದು ದಿಲ್ಲಿಯ ಬಾದಶಾಹಿಗೆ ಸಹ ಮಿರಿರುವದು. ಇದನ್ನು ತುಂಡು ತುಂಡು ಮಾಡಿ ನುಂಗಬೇಕೆಂದು ದಿಲ್ಲೀಶ್ವರನ ಹವಣಿಕೆ. ದಕ್ಷಿಣದಲ್ಲಿ ಸ್ವತಂತ್ರ ಬಾದಶಾಹಿಯನ್ನು ಪ್ರಸ್ಥಾಪಿಸಬೇಕೆಂಬ ಮನೀಷೆಯಿಂದ ನಿಜಾಮನು ನಿಮ್ಮ ಸ್ನೇಹ ಬಯಸುತ್ತಿರುವನು. ಸದ್ಯಕ್ಕೆ ನಿಜಾಮನು ಬಾದಶಹನ ಶಿಷ್ಯನಾಗಿರುವನು. ಅವನು ಸ್ವತಂತ್ರನಾಗಲಿಕ್ಕೆ ಹವಣಿಸುತ್ತಿರುವನು. ಶಾಹೂಮಹಾರಾಜರಲ್ಲಿ ತನ್ನ ಬೇಳೆ ಬೇಯದ್ದರಿಂದ ಈಗ ಅವನು ನಿಮ್ಮ ಬೆನ್ನಹತ್ತಿರುವನು."

ಬಾಜೀರಾಯನು ಹೀಗೆ ಸಂಭಾಷಣ ಮಾಡುತ್ತಿರುವಾಗ ಅಕಸ್ಮಾತ್ತಾಗಿ ಅಲ್ಲಿಗೆ ಉದಾಜಿ ಚವ್ಹಾಣನು ಬಂದನು. ಆದ್ದರಿಂದ ಆ ಭಾಷಣವು ಅಲ್ಲಿಗೇ ನಿಂತಿತು ಉದಾಜಿಯು ಬಂದ ಕೂಡಲೆ ಬಾಜೀರಾಯನನ್ನು ನೋಡಿ ಸಂತಪ್ತನಾದನು. ಬಾಜೀರಾಯನಿಗೆ ಅವನ ಮನೋಭಾವನೆಯು ತಿಳಿಯದಿರಲಿಲ್ಲ. ಅವನು ಉದಾಜಿಯನ್ನು ಕುರಿತು:—'ಬನ್ನಿರಿ, ಹಿಮ್ಮತ ಬಹಾದ್ದರರೆ! ಹೀಗೆ ನಮ್ಮ ಬಳಿಯಲ್ಲಿ ಕುಳಿತುಕೊಳ್ಳಿರಿ.''

"ಉದಾಜಿರಾಯರೆ, ಈ ವೇಳೆಯಲ್ಲಿ ನೀವು ಬಂದದ್ದು ಒಳಿತಾಯಿತು ಈ ಪೇಶವೆಯವರು ಶಾಹೂಮಹಾರಾಜರ ಕಡೆಯಿಂದ ಒಪ್ಪಂದದ ಮಾತು-ಕಥೆಗಳಿಗಾಗಿ ಬಂದಿರುವರು.'' ಎಂದು ಸಂಭಾಜಿರಾಯನು ಹೇಳಿದನು.

ಉದಾಜಿಯು ಪೇಶವೆಯು ತೋರಿಸಿದ ಆಸನದಲ್ಲಿ ಕುಳಿತುಕೊಳ್ಳದೆ, ಸಂಭಾಜಿರಾಜನ ಎಡಭಾಗದಲ್ಲಿದ್ದ ಆಸನದ ಮೇಲೆ ಕುಳಿತು:—"ತಂತ್ರಯುದ್ಧದಿಂದ ರಾಜಕಾರಣವನ್ನು ಅಲ್ಲೋಲ-ಕಲ್ಲೋಲ ಮಾಡಲಿಕ್ಕೆ ನಾವು ಒಳ್ಳೇ ಚತುರರಿರುವೆವೆಂದು ಪೇಶವೆಯವರು ತಿಳಿದಿರಬಹುದು; ಆದರೆ ಹಿಮ್ಮತಬಹಾದ್ದರನೊಡನೆ ಪ್ರಸಂಗವಿರುವದೆಂಬದನ್ನು ಅವರು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು. ಅತ್ತಕಡೆಗೆ ಪ್ರತಿನಿಧಿಗಳನ್ನು ನನ್ನ ಮೇಲೆ ದಾಳಿ ಮಾಡಲಿಕ್ಕೆ ಕಳುಹಿಸಿ, ಇತ್ತಕಡೆಗೆ ಈ ಪೇಶವೆಯವರು ಶಿಷ್ಟಾಯಿಗೆ ಬಂದಿರುವರೇನು? ನಾವು ಇಂಥ ಮೋಸಗಳಿಗೊಳಗಾಗುವ ಮರುಳತನದವರಲ್ಲ. ಪೇಶವೆ! ಸಾಕು; ನಿಮ್ಮ ಶಿಷ್ಟಾಯಿಯು ನಮಗೇನೂ ಕೆಲಸದ್ದಲ್ಲ.

ಇನ್ನು ಮೇಲೆ ಸಮರಾಂಗಣದಲ್ಲಿ ನಮ್ಮ ನಿಮ್ಮ ಖಡ್ಗಗಳು ಯಾವುದನ್ನು ನಿರ್ಣಯಿಸುವವೋ ಅದೇ ಖಂಡಿತವಾದ ನಿರ್ಣಯ. ನೀವು ಒಮ್ಮೆ ಒರೆಯಿಂದ ಖಡ್ಗವನ್ನು ಹಿರಿಯಲಿಕ್ಕೆ ಸಮಯ ತಂದು ಕೊಟ್ಟಿರಿ!'' ಎಂದು ನುಡಿದು, ಆವನು ತನ್ನ ಖಡ್ಗವನ್ನು ಒರೆಯಿಂದ ಹಿರಿದು—''ಈ ಖಡ್ಗವು ಸ್ವರಾಜ್ಯದ ಮೇಲೆ ಒಬ್ಬ ಸಂಭಾಜಿರಾಜರ ಅಧಿಕಾರವಿರುವದೆಂಬದನ್ನು ಪ್ರಸಿದ್ಧಗೊಳಿಸಿ ವಿಶ್ರಾಂತಿ ಹೊಂದುವದು!"

ಪೇಶವೆಯು ಇಂಥ ಉಬ್ಬಾಳುತನದ ಮಾತುಗಳಿಗೆ ಸೊಪ್ಪು ಹಾಕುವಂಥವನಿದ್ದಿಲ್ಲ. ಆವನು ಉದಾಜಿಯನ್ನು ಕುರಿತು—"ಚವ್ಹಾಣ! ನಿಮ್ಮ ಕೈಯಲ್ಲಷ್ಟೇ ಖಡ್ಗವಿರುವದು, ಉಳಿದವರ ಕೈಯಲ್ಲಿ ಬಳೆಗಳಿರುವವು; ಹೀಗೆಯೇ ನೀವು ತಿಳಿದುಕೊಂಡಿರಬಹುದಲ್ಲವೆ? ಹಾಗೆ ತಿಳಿದುಕೊಂಡಿದ್ದರೆ ಅದು ನಿಮ್ಮ ತಪ್ಪು. ನಿಮ್ಮಂತೆ ಇತರರೂ ಖಡ್ಗಗಳನ್ನು ಹಿಡಿಯಲಿಕ್ಕೆ ಬಲ್ಲವರಿರುವರು. ನಮ್ಮ ಖಡ್ಗದ ಉಕ್ಕಿನ ನೀರು ಕುಡಿದು, ಪಚನವಾಗದ್ದಕ್ಕಾಗಿ ತೇಕುತ್ತ ನೀವು ಇಲ್ಲಿಯವರೆಗೆ ಬಂದಿರುವಿರೆಂಬದು ನನಗೇನು ತಿಳಿಯದಿರುವದೆ? ನಾಗವು ಫಣೆಯೆತ್ತುವದೆಂದು ಓತೀಕಾಟವೂ ತಲೆಯೆತ್ತಿದರೆ, ಶೋಭಿಸುವದೆ? ನಾಗವು ನಾಗವೇ, ಓತೀಕಾಟವು ಓತೀಕಾಟವೇ!''

''ಪೇಶವೆ, ಸೂರ್ಯನ ಮೇಲೆ ಉಗುಳುವ ಮನುಷ್ಯನು ಅಭ್ರಾಚ್ಛಾದಿತ ಸೂರ್ಯನನ್ನು ನೋಡಿ, ನನಗೆ ಸೂರ್ಯನು ಅಂಜಿರುವನೆಂದರೆ, ಅವನ ವಲ್ಗನೆಯು ಹಾಸ್ಯಾಸ್ಪದವಾಗಲಾರದೆ? ಅಭ್ರವು ದೂರವಾದ ಮೇಲೆ ಸೂರ್ಯನು ಸೃಷ್ಟಿಯಲ್ಲಿ ಬೆಳಗತಕ್ಕವನೇ!''

ಈ ವಾದವು ವಿಕೋಪಕ್ಕೆ ಹೋಗಬಹುದೆಂದು ತಿಳಿದು ಅಮಾತ್ಯ ಭಗವಂತರಾಯನು ಸಂಭಾಜಿರಾಜನನ್ನು ಕುರಿತು:—''ಮಹಾರಾಜರೆ ಪೇಶವೆಯವರು ಘನವಂತರಿರುವರು; ಗೌರವಾನ್ವಿತರಿರುವರು; ಶಾಹೂಮಹಾರಾಜರ ಪ್ರತಿನಿಧಿಗಳಾಗಿ ಬಂದಿರುವರು. ತಮ್ಮ ಒಬ್ಬ ಸೇವಕನು ಇವರ ಉಪಮರ್ದ ಮಾಡುವದು ಉಚಿತವಾಗಲಾರದು.''

"ಅಮಾತ್ಯ! ನೀವು ಪೇಶವೆಯವರ ಬಾಲಬಡಿಯುವದಿದ್ದರೆ ಅದಕ್ಕೆ ನನ್ನ ಆತಂಕವಿಲ್ಲ. ನೀವು ಅವರಿಗೆ 'ಜೀ-ಜೀ' ಅನ್ನುತ್ತ ಸಾಧಿಸಬೇಕಾದುದನ್ನು ಸಾಧಿಸಬಹುದು. ನನಗೆ ಹಾಗೆ ಮಾಡಬೇಕಾದ ಪ್ರಸಂಗವಿಲ್ಲ. ನಾನು ರಣವೀರ ಮರಾಟನಿರುವೆನು. ಮುಂಗೈಯಲ್ಲಿ ಬಲವಿದೆ; ಖಡ್ಗದಲ್ಲಿ ಉಕ್ಕಿನ ನೀರು ಅದೆ.'' ಎಂದು ಉದಾಜಿಯು ಮಾತಾಡುತ್ತಿರಲು, ಪೇಶವೆಯು ನಡುವೇ ಬಾಯಿಹಾಕಿ:—"ಬೊಗಳುವದು ಕಚ್ಚುವದಿಲ್ಲ; ಕಚ್ಚುವದು

ಹೊಗಳುವದಿಲ್ಲ."

"ಹೀಗೋ? ಪೇಶವೆ! ನಾನು ಆಡಿದಂತೆ ನಡೆದರೇನೇ ಉದಾಜಿಚವ್ಹಾಣನು; ಇಲ್ಲದಿದ್ದರೆ ಹೆಸರು ಬೇರೆ ಮಾಡಿ ಮೀಸೆಗಳನ್ನು ಕಿತ್ತೊಗೆಯುವೆನು!"

"ಹಾಗಾದರೆ ನೀವು ಸಂಭಾಜಿರಾಜರನ್ನು ಮಹಾರಾಜರ ಸಿಂಹಾಸನದ ಮೇಲೆ ಕುಳ್ಳಿರಿಸುವಿರೆಂದಂತಾಯಿತು" ಎಂದು ಬಾಜೀರಾಯನು ಉಪಹಾಸಾತ್ಮಕವಾಗಿ ನುಡಿದನು.

"ಹೌದು. ಸ್ವರಾಜ್ಯದ ಮೇಲೆ ಒಬ್ಬ ಛತ್ರಪತಿಯನ್ನು ಮಾಡಿದರೇನೇ ನಾವು ಹಿಮ್ಮತಬಹಾದ್ದರನು!"

"ಬಹಳೇ ಒಳಿತಾಯಿತು! ಹಿಮ್ಮತಬಹಾದ್ದರರ ಹಿಮ್ಮತಬಹಾದ್ದೂರಿಕೆಯನ್ನು ಹಿಂದೆಯೂ ನೋಡಿರುವೆನು; ಮುಂದೆಯೂ ನೋಡುವೆನು." ಎಂದು ಬಾಜೀರಾಯನು ನುಡಿದು, ಸಂಭಾಜಿರಾಜನನ್ನು ಕುರಿತು:--"ಮಹಾರಾಜರೆ, ಒಪ್ಪಂದವೋ-ದ್ವಂದ್ವವೋ? ಎಂಬದನ್ನು ನನಗೆ ಸ್ಪಷ್ಟವಾಗಿ ಹೇಳಿಬಿಡಿರಿ."

"ಪೇಶವೆ!" ಸಂಭಾಜಿರಾಜನು ಬಾಜೀರಾಯನಿಗೆ:—"ನೀವು ಇಲ್ಲಿಗೆ ಬಂದುದರ ಇಂಗಿತವು ನಮಗೆ ಗೊತ್ತಾಯಿತು. ನಾವು ಈ ವಿಷಯದಲ್ಲಿ ವಿಚಾರ ಮಾಡಿ ತಿಳಿಸುವೆವು. ನೀವು ಹೋಗಿರಿ."

"ಛೀ! ಛೀ! ಪೇಶವೆಯವರೆ, ನೀವು ಹೋಗಬೇಡಿರಿ. ಸದ್ಯಕ್ಕೆ ನೀವು ಇಲ್ಲಿಯೇ ಇರ್ರಿ. ಇಲ್ಲಿಯ ಪ್ರಸಂಗವನ್ನು ನೀವು ಮನಸ್ಸಿನಲ್ಲಿ ಹಿಡಿಯಬೇಡಿರಿ. ಒಪ್ಪಂದವು ಆಗಲಿ-ಆಗದಿರಲಿ, ನಿಮ್ಮ ಮಾನ್ಯತೆಗೆ ಬಾಧೆ ಬರುವಂಥ ಯಾವ ಕಟುಕೃತ್ಯಗಳೂ ಇನ್ನು ಮುಂದೆ ಇಲ್ಲಿ ಜರುಗುವದಿಲ್ಲೆಂಬದಕ್ಕೆ ನಾನು ಹೊಣೆಯಾಗಿರುವೆನು." ಎಂದು ಜಿಜಾಬಾಯಿಯು ನುಡಿಯುತ್ತ ಹೊರಗೆ ಬಂದು, ಪತಿಯನ್ನು ಕುರಿತು:—"ಇವರ ಆತಿಥ್ಯದ ವ್ಯವಸ್ಥೆಯನ್ನು ಅಮಾತ್ಯರ ಕಡೆಗೆ ಒಪ್ಪಿಸಿರಿ."

"ಅಮಾತ್ಯರೆ, ಪೇಶವೆಯವರ ಯೋಗ್ಯತೆಗೆ ಸರಿಯಾದ ವ್ಯವಸ್ಥೆ ಮಾಡುವ ಕೆಲಸವನ್ನು ನಿಮ್ಮ ಕಡೆಗೆ ಕೊಟ್ಟಿರುವೆನು" ಎಂದು ಸಂಭಾಜಿರಾಜನು ಭಗವಂತರಾಯನಿಗೆ ಹೇಳಿದನು

"ಒಳ್ಳೇದು." ಎಂದು ನುಡಿದು, ಅಮಾತ್ಯನು ಆಸನದಿಂದೆದ್ದನು.

ಬಾಜೀರಾಯನಾದರೂ ಕುಳಿತ ಸ್ಥಳದಿಂದೆದ್ದು:—"ರಾಣೀಸಾಹೇಬರೆ! ನಿಮ್ಮ ಸುತ್ತುಮುತ್ತಲಿನ ಕರ್ತವ್ಯಭಾರಹೀನ ಜನರು ಆಗಂತುಕವಾಗಿ ಬಾಯಿ ಹಾಕಿ, ಮನಬಂದಂತೆ ಮಾತಾಡಿ, ನನ್ನ ಅಂತಃಕರಣಕ್ಕೆ ಗಾಯ

ಮಾಡಿದ್ದರು; ಆ ಗಾಯವು ತಮ್ಮ ಔದಾರ್ಯದಿಂದ ವಾಸಿಯಾಯಿತು. ಯಾವ ಪವಿತ್ರಕಾರ್ಯದ ಸಿದ್ಧತೆಗಾಗಿ ಇಲ್ಲಿ ಬಂದಿರುವೆನೋ, ಅದರ ಕಡೆಗೆ ಲಕ್ಷ್ಯಗೊಟ್ಟು, ಇಂಥ ಅಪಮಾನಗಳನ್ನು ಒಮ್ಮೆ ಬಿಟ್ಟು ನೂರು ಸಾರೆ ಸಹನ ಮಾಡುವೆನು. ನಾನು ಈಗ ಹೊರಡುವೆನು. ನೀವು ಸುಜ್ಞರಿರುವಿರಿ; ವಿಚಾರ ವಂತರಿರುವಿರಿ. ರಾಜರಿಗೂ ರಾಜಪರಿವಾರಕ್ಕೂ ಸಾವೋಪಚಾರದ ನಾಲ್ಕು ಮಾತು ಹೇಳಿ, ಇಬ್ಬರು ಛತ್ರಪತಿಗಳಲ್ಲಿ ಐಕ್ಯವನ್ನು ನೆಲೆಗೊಳಿಸಿ, ಛತ್ರ ಪತಿಯ ದೊಡ್ಡವಂಶದ ಮಾನ-ಮಾನ್ಯತೆಗಳನ್ನು ಕಾಯುವ ಮಹತ್ತಮ ವಾದ ಪುಣ್ಯಸಂಪಾದನೆ ಮಾಡಿ ಶ್ರೇಯೋಭಾಗಿಗಳಾಗಬೇಕೆಂದು ಮತ್ತೆ ಮತ್ತೆ ನಿಮ್ಮನ್ನು ಪ್ರಾರ್ಥಿಸುವೆನು ನಿಮ್ಮಲ್ಲಿ ವಿಚಾರವಾಗಿ ನನಗೆ ಯಾವಾಗ ನಿರ್ಣಯ ದೊರೆಯುವದು?''

''ಬೇಗನೆ, ಒಂದೆರಡು ದಿನಗಳಲ್ಲಿ ತಿಳಿಸುವೆನು.''

''ಒಳ್ಳೇದು. ನಾನು ಬರುತ್ತೇನೆ.'' ಎಂದು ನುಡಿದು, ಬಾಜೀರಾಯನು ರಾಜ-ರಾಣಿಯರಿಗೆ ಅಭಿವಾದನ ಮಾಡಿ, ಅಮಾತ್ಯನೊಡನೆ ಅಲ್ಲಿಂದ ಹೊರಟು ಹೋದನು



## ದಿವ್ಯಪ್ರತಾಪನಿಧಿ.

—÷+÷—

"ಚವ್ಹಾಣ, ಒಟ್ಟಿನ ಮೇಲೆ ಶ್ರೀಪತಿರಾಯರಿಗೆ ನೀವು ಬೆನ್ನು ತೋರಿಸಿದಿರಿ! ಮೊದಲನೇ ಕಾಳಗದಲ್ಲೇ ನಿಮಗೆ ಅಪಶಕುನವಾದಂತಾಯಿತು."

"ರಾಣೀಸಾಹೇಬರೆ! ಒಮ್ಮೆ ಜಯ. ಮತ್ತೊಮ್ಮೆ ಪರಾಜಯ. ಹೀಗೆ ನಡೆಯತಕ್ಕವುಗಳೇ. ಇದರಲ್ಲೇನು ಮಹತ್ವವಿದೆ? ದುರ್ಗಾಬಾಯಿಯವರ ಪ್ರಕೃತಿಯು ಹೇಗಿದೆ?"

ಉದಾಜಿಯು ರಾಣಿಯನ್ನು ಹೀಗೆ ಕೇಳುವಷ್ಟರಲ್ಲಿ ದುರ್ಗಾಬಾಯಿಯೇ ಅಲ್ಲಿಗೆ ಬಂದು, ಉಪಹಾಸದಿಂದ—"ನೀವು ನನ್ನ ಪ್ರಕೃತಿಯ ವಿಚಾರಣೆ ಮಾಡುವದಕ್ಕಾಗಿಯೇ ರಣಾಂಗಣದಿಂದ ಕಾಲ್ದೆಗೆದು ಓಡಿ ಬಂದಂತೆ ತೋರುವದು!"

ದುರ್ಗಾಬಾಯಿಯ ಮಾತುಗಳು ಉದಾಜಿಯ ಮರ್ಮಕ್ಕೆ ತಗಲಿದರೂ, ಇನ್ನೂ ಹುಡುಗತನವಿರುವದರಿಂದ ಅವಳು ಹೀಗೆ ತಿಳಗೇಡಿತನದ ಮಾತಾಡುವಳೆಂದು ಅವನು ಮನಸ್ಸಿಗೆ ಸಮಾಧಾನಹಚ್ಚಿಕೊಂಡನು. ಅವನು ದುರ್ಗಾಬಾಯಿಯ ಮುಖವನ್ನು ದಿಟ್ಟಿಸಿ ನೋಡುತ್ತ—"ನಾನು ರಣಭೂಮಿಯಿಂದ ಓಡಿ ಬಂದಿಲ್ಲ. ನಿಮ್ಮ ಪ್ರಕೃತಿಯು ಹೇಗಿರಬಹುದೆಂಬ ಯೋಚನೆಯು ಬಹಳವಾಗಿತ್ತು. ದೇಹವು ಅತ್ತಕಡೆಗಿದ್ದರೂ ಮನಸ್ಸು ನಿಮ್ಮ ಕಡೆಗೇ ಇತ್ತು."

ದುರ್ಗಾಬಾಯಿಯು ರಾಜನ ರಾಣಿಯಾಗುವಳೆಂದು ನಿರ್ಧರವಾದಾಗಿನಿಂದ ಉದಾಜಿಯ ಮನಸ್ಸು ವ್ಯಾಕುಲವಾಗಿತ್ತು. ಆ ಯೋಗವನ್ನು ಕೂಡಗೊಡಬಾರದೆಂದು ಅವನು ಯಥಾಶಕ್ತಿಯಾಗಿ ಪ್ರಯತ್ನ ಮಾಡುತ್ತಲಿದ್ದನು. 'ನೀನು ರಾಜನ ರಾಣಿಯಾದರೆ, ನಿನ್ನ ಅಕ್ಕನು ನಿನ್ನನ್ನು ಸುಖದಿಂದ ಇರಗೊಡುವದಿಲ್ಲ. ರಾಜನ ಪ್ರೇಮವಾದರೂ ನಿನ್ನ ಮೇಲಿಲ್ಲ. ನಾನು ಅವನ ಪಕ್ಷಗಟ್ಟಿರುವೆನೆಂದು ಅವನ ಪ್ರತಿಷ್ಠೆಯು ಇಷ್ಟು ಬೆಳೆದಿದೆ. ಮನಸ್ಸಿನ ಮೇಲೆ ತಿಗೆದುಕೊಂಡರೆ, ನಾನೇ ರಾಜನಾಗಬಹುದು. ನಾನು ರಾಜನಾದ ಮೇಲೆ ನೀನು ರಾಣಿಯು ಆಗಿಯೇ ಆಗುವೆ. ರಾಮದಾಸನ ಭವಿಷ್ಯದ ಮೇರೆಗೆ ನೀನು ಪುತ್ರವತಿಯಾದರೆ, ಅವನು ರಾಜಪುತ್ರನಾಗುವನು.' ಮೊದಲಾದ ಉಪದೇಶವನ್ನು ಉದಾಜಿರಾಯನು ದುರ್ಗಾಬಾಯಿಗೆ ಮಾಡುತ್ತಿದ್ದನು. ದುರ್ಗಾಬಾಯಿಯೇನೂ ಮರುಳಳಿದ್ದಿಲ್ಲ. ಸಂಗ್ರಾಮವು ಪೂರೈಸುವವರೆಗೆ ಅವಳು ಉದಾಜಿಗೆ ನಿಷ್ಠುರವಾಡದೆ, ಸವಿಮಾತಿನಿಂದ ಅವನ ಮನಸ್ಸನ್ನು ಸಂತೈಸುತ್ತ ಬಂದಿದ್ದಳು

ದುರ್ಗಾಬಾಯಿಯ ಪ್ರಕೃತಿಯ ವಿಚಾರಣೆಗಾಗಿ ರಣಾಂಗಣದಿಂದ ಓಡಿಬರುವಷ್ಟು ಮನೋದೌರ್ಬಲ್ಯವು ಉದಾಜಿಯಲ್ಲಿದ್ದುದನ್ನು ನೋಡಿ, ಜಿಜಾಬಾಯಿಯ ಕ್ರೋಧವು ಅನಿವಾರವಾಯಿತು. ಆಗ ಅವಳು:—"ಉದಾಜಿರಾಯರೆ, ದುರ್ಗಾಬಾಯಿಯ ಯೋಚನೆಯಲ್ಲಿದ್ದುದರಿಂದ ನಿಮಗೆ ಅಪಜಯವೊದಗಿತೆಂದಂತಾಯಿತು. ಇದೇನೂ ಒಳ್ಳೆಯ ಲಕ್ಷಣವಲ್ಲ. ಇತ್ತೀಚೆಗೆ ದುರ್ಗಾಬಾಯಿಯ ಹೊರತು ಅನ್ಯವಿಷಯಗಳೇ ನಿಮ್ಮ ತಲೆಯಲ್ಲಿ ಬರುವದಿಲ್ಲವೆ?"

ಉದಾಜಿರಾಯನ ಅವಹೇಲನೆಯಾಗಬಾರದೆಂದು ದುರ್ಗಾಬಾಯಿಯ ಇಚ್ಛೆಯಿತ್ತು; ಆದ್ದರಿಂದ ಅವಳು:—"ಉದಾಜಿರಾಯರು ನನ್ನ ಪ್ರಕೃತಿಯ ಬಗ್ಗೆ ಯೋಚಿಸುವದು ಯೋಗ್ಯವಿರುವದು. ಆ ಕಪಟ ಸಾಧುವಾದ ರಾಮದಾಸನು ನನ್ನ ಅಹಿತಚಿಂತನೆಗಾಗಿ ಹೊಂಚು ಹಾಕಿದ್ದನು. ಉದಾಜಿರಾಯರೆ, ನೀವು ಇನ್ನು ಚಿಂತಿಸುವ ಕಾರಣವಿಲ್ಲ. ನಿನ್ನೆಯೆ ನಾವು ರಾಮದಾಸನ ವ್ಯವಸ್ಥೆ ಮಾಡಿ ಬಿಟ್ಟಿರುವೆವು." ಎಂದು ನುಡಿದು, ಅವಳು ರಾಮದಾಸನ ವಿಷಯವನ್ನು ಹೇಳಿದಳು.

ಅನಂತರದಲ್ಲಿ ಜಿಜಾಬಾಯಿಯು:—"ಉದಾಜಿರಾಯರೆ, ಪೇಶವೆಗೆ ಏನೆಂದು ಹೇಳಬೇಕು?"

"ನನ್ನ ವಿಚಾರವು ಎಲ್ಲರಿಗೂ ಗೊತ್ತಿದೆ. ಅದು ನಿಮಗೆ ಮಾನ್ಯವಾಗದಿದ್ದರೆ ನಿಮ್ಮ ಮನಸ್ಸಿಗೆ ಬಂದ ಹಾಗೆ ಮಾಡಬಹುದು. ಸಾತಾರೆಯವರೊಡನೆ ಒಪ್ಪಂದ ಮಾಡಿಕೊಂಡರೆ, ನನ್ನನ್ನು ಮಾತ್ರ ತೋಫಿನ ಬಾಯಿಗೆ ಕೊಟ್ಟಂತಾಗುವದು. ನಾನು ಶಾಹೂಮಹಾರಾಜರ ವೈರವನ್ನು ಸಂಪಾದಿಸಿದ್ದು ನಿಮ್ಮ ಸಲುವಾಗಿಯೇ ಅಲ್ಲವೆ? ಶ್ರೀಪತಿರಾಯನು ನನ್ನ ಸೀಮೆಯಲ್ಲಿ ಹಾವಳಿ ಮಾಡಿದಾಗ ಸ್ವಂತ ಸಂರಕ್ಷಣೆಗಾಗಿ ಅವನೊಡನೆ ಒಪ್ಪಂದ ಮಾಡಿಕೊಳ್ಳದೆ ಇದ್ದದ್ದು ನಿಮ್ಮ ಸಲುವಾಗಿಯೇ ಅಲ್ಲವೆ? ನಿಮ್ಮೊಡನೆ ಅಪ್ರಾಮಾಣಿಕತನದಿಂದ ನಡೆಯಬಾರದೆಂದು ಆಗ ನನ್ನ ಮನಸ್ಸು ನನಗೆ ಹೇಳುತ್ತಲಿತ್ತು."

"ಮೊದಲನೆಯ ದಾಳಿಯಲ್ಲಿಯೇ ಶ್ರೀಪತಿರಾಯನು ನಿಮ್ಮನ್ನು ಜಯಿಸಿದ್ದರಿಂದ ನಮ್ಮ ಮನಸ್ಸಿನಲ್ಲಿ ಸಾತಾರೆಯವರ ಬಲವು ಹೆಚ್ಚಾಗಿರುವದೆಂಬ ಕಲ್ಪನೆಯಾಗತೊಡಗಿದೆ." ಎಂದು ಸಂಭಾಜಿಯು ನುಡಿದನು.

"ನನ್ನ ಪರಾಜಯವೆಂದರೆ ನಿಮ್ಮ ಪರಾಜಯವಲ್ಲವೆ? ಉದಾಜಿರಾಯನ ಸುಖ-ದುಃಖಗಳ ಪರಿವೆಯು ನಿಮಗಿದ್ದಂತೆ ತೋರಲಿಲ್ಲ." ಎಂದು ಉದಾಜಿಯು ನುಡಿದು, ಸಂಭಾಜಿರಾಜನ ಮೋರೆ ನೋಡತೊಡಗಿದನು

"ಉದಾಜಿರಾಯರೆ, ನೀವು ಬೇರೆ-ನಾವು ಬೇರೆ ಹೀಗೇನೂ ಇಲ್ಲ. ನಿಮ್ಮ ಪರಾಜಯವೇ ನಮ್ಮ ಪರಾಜಯವು. ಆದ್ದರಿಂದಲೇ ಪ್ರಸಂಗವನ್ನು ಲಕ್ಷ್ಯದಲ್ಲಿ ತಂದು ಹೇಗೆ ನಡೆಯಬೇಕೆಂಬ ಪ್ರಶ್ನವು ಉಪಸ್ಥಿತವಾಗಿದೆ.'' ಎಂದು ಸಂಭಾಜಿರಾಯನು ಹೇಳಿದನು.

"ಉದಾಜಿರಾಯರೆ!" ಜಿಜಾಬಾಯಿಯು ನಿಷ್ಠುರತೆಯಿಂದ --''ಸಾತಾರೆ ಯುವರನ್ನು ಪರಾಭವಗೊಳಿಸುವದು ಸುಸಾಧ್ಯವೆಂದು ನೀವು ತಿಳಿದಿದ್ದಿರಿ. ಎಲ್ಲಿಯ ವರೆಗೆ ಬಾಜೀರಾಯನಂಥ ಕಾರ್ಯಕರ್ತ ಪುರುಷನು ಸಾತಾರೆಯ ರಾಜ್ಯದಲ್ಲಿರುವನೋ, ಅಲ್ಲಿಯ ವರೆಗೆ ನಿಮ್ಮ ಸಾಹಸವು ನಿಷ್ಫಲವಾಗುವದೇ ಸರಿ. ನಿಜಾಮುನಂಥ ಬಲಾಢ್ಯ ಶತ್ರುಗಳನ್ನು ಬಾಗಿಸಿದವನಿಗೆ ನಿಮ್ಮ ಪಾಡೇನು? ಹೀಗಿದ್ದರೂ ನೀವು ಈಗ ಯುದ್ಧದ ಗೊಂದಲವನ್ನೆಬ್ಬಿಸಿದಿರೇಕೆ?''

''ನಾನೇ ಈ ಪ್ರಶ್ನೆಯನ್ನು ಕೇಳಿದರೆ, ನಿವೇನು ಉತ್ತರ ಕೊಡುವಿರಿ?"

"ಪೇಶವೆಯು ಉತ್ತರ ದಿಗ್ವಿಜಯಕ್ಕೆ ಹೋಗುವವನು; ಶ್ರೀಪತಿರಾಯನು ನಮ್ಮ ಪಕ್ಷಕ್ಕೆ ಕೂಡಿರುವನು ಮೊದಲಾದ ಸಂಗತಿಗಳನ್ನು ನೀವು ಹೇಳಲಿಲ್ಲವೆ? ಆದಕ್ಕಾಗಿ ಯುದ್ಧವನ್ನು ಹೂಡಬೇಕಾಯಿತು ''

''ಶ್ರೀಪತಿರಾಯನು ವಿಶ್ವಾಸ ಘಾತಮಾಡಿದನು ಪೇಶವೆಯು ಉತ್ತರಕ್ಕೆ ಹೊರಡುವದನ್ನು ಬಿಟ್ಟುಗೊಟ್ಟನು. ಅಂತೆಯೇ ಸಮರಕಾರ್ಯವು ಗಡಚಾಗತೊಡಗಿದೆ. ಆದರೂ ಈಗ ಏನಾಗಿದೆ? ಈ ಉದಾಜಿಚವ್ಹಾಣನಿರುವ ವರೆಗೆ ಏನು ಬಂದಿದೆ' ಚವ್ಹಾಣೀ ಖಡ್ಗವೇನೂ ಸಾಮಾನ್ಯವಾದದ್ದಲ್ಲ. ಇಷ್ಟಾಗಿಯೂ ದ್ವಂದ್ವವನ್ನು ಬಿಟ್ಟು ಒಪ್ಪಂದ ಮಾಡಬೇಕೆನಿಸಿದರೆ, ಉದಾಜಿರಾಯನು ನಿಮ್ಮವನಲ್ಲ."

''ಉದಾಜಿರಾಯರೆ, ಹೀಗೆ ಮುರಿದು ಮಾತನಾಡಬೇಡಿರಿ. ಸದ್ಯದ ಪ್ರಸಂಗದಲ್ಲಿ ತರಣೋಪಾಯವನ್ನು ಸೂಚಿಸುವಿರೆಂಬ ವಿಶ್ವಾಸದಿಂದಲೇ ನಿಮ್ಮ ಸಲಹೆ ಕೇಳುತ್ತಿರುವೆನು.''

''ರಾಣೀಸಾಹೇಬರೆ, ಶ್ರೀಪತಿರಾಯನು ನಮುಗೆ ಮೋಸ ಮಾಡಿರುವನು. ನಾವಾದರೂ ಮೋಸದ ಕೃತ್ಯ ಮಾಡಿ ವಿಜಯಲಾಭ ಹೊಂದಬೇಕು. ಪೇಶವೆಯು ಈಗ ನಮ್ಮ ಕೈಯಲ್ಲಿ ಹೇಗೂ ಸಿಲುಕಿರುವನು. ಇದೇ ಸಂಧಿಯಲ್ಲಿ ಅವನನ್ನು ಸೆರೆಹಿಡಿದರೆ, ನಮ್ಮ ಕಾರ್ಯವು ಸಾಧಿಸುವದು.''

''ಶಿಷ್ಟಾಯಿಗೆ ಬಂದವನನ್ನು ಸೆರೆ ಹಿಡಿಯುವದು ರಾಜನೀತಿಗೆ ಅನುಚಿತವು. ಭಾರತ ಯುದ್ಧದ ಪೂರ್ವದಲ್ಲಿ ಕೌರವರಿಗೆ ಶಕುನಿಯು ಸಲಹೆ ಕೊಟ್ಟಂತಾಯಿತು. ಈ ಸಲಹೆಯಂತೆ ನಡೆದರೆ ಕೌರವನಿಗಾದ ಗತಿಯೇ

ನಮಗಾಗುವದು.'' ಎಂದು ಅದೇ ಬಂದಿದ್ದ ಅಮಾತ್ಯ ಭಗವಂತರಾಯನು ಹೇಳಿದನು.

''ಪುರಾಣದೊಳಗಿನ ಮಾತುಗಳು ಇಲ್ಲಿ ಅನಾವಶ್ಯಕ!'' ಎಂದು ಉದಾಜಿರಾಯನು ಆಢ್ಯತೆಯಿಂದ ನುಡಿದನು

''ನೀವು ಪೇಶವೆಯನ್ನು ಸೆರೆ ಹಿಡಿಯಲಾರಿರಿ. ಅವನು ನಿಮ್ಮಂತೆ ಎಚ್ಚರಗೇಡಿಯಿರುವದಿಲ್ಲ. ಅವನು ಸ್ವಸಂರಕ್ಷಣೆಯ ವ್ಯವಸ್ಥೆಯಿಂದಲೇ ಬಂದಿರಬಹುದು'' ಅಮಾತ್ಯನು ಹೇಳಿದನು.

ಕೆಲವು ಹೊತ್ತು ಈ ವಿಷಯಕ್ಕಾಗಿ ಅರೆದಾಟ ನಡೆದು, ವಿಶ್ವಾಸಘಾತ ಮಾಡಬಾರದೆಂದು ನಿಶ್ಚಯಿಸಲ್ಪಟ್ಟಿತು.

ಮುಂದೆ ಎರಡು ದಿನಗಳ ಮೇಲೆ ಸಂಭಾಜಿರಾಜನು ಪೇಶವೆಯನ್ನು ಓಲಗಕ್ಕೆ ಕರೆಯಿಸಿ:—''ಪೇಶವೆ! ನೀವು ಹೇಳುತ್ತಿರುವಂತೆ ಒಪ್ಪಂದಕ್ಕೆ ನಾವು ಸಿದ್ಧರಿಲ್ಲವೆಂದು ನಿಮ್ಮ ಮಹಾರಾಜರಿಗೆ ತಿಳಿಸಿರಿ''

''ಇದೇ ನಿಮ್ಮ ಕೊನೆಯ ನಿಶ್ಚಯವಿದ್ದರೆ, ಎರಡು ದಿನ ನನ್ನನ್ನು ನಿರರ್ಥಕವಾಗಿ ಏಕೆ ನಿಲ್ಲಿಸಿಕೊಂಡಿರಿ? ಒಟ್ಟಿನ ಮೇಲೆ ನೀವು ಒಪ್ಪಂದಕ್ಕೆ ಸಿದ್ಧರಾಗಲಿಲ್ಲವೆಂದಂತಾಯಿತು. ನೀವು ಈ ವಿಷಯದಲ್ಲಿ ಚನ್ನಾಗಿ ವಿಚಾರ ಮಾಡಿರುವಿರಾ?'' ಎಂದು ಬಾಜೀರಾಯನು ಕೇಳಿದನು.

''ಚನ್ನಾಗಿ ವಿಚಾರ ಮಾಡಿಯೇ ತಿಳಿಸಿರುವೆನು.''

ಸಂಭಾಜಿರಾಜನು ಹೀಗೆ ನುಡಿದ ಮೇಲೆ ಉದಾಜಿಯು:—''ಒಂದು ಕಟ್ಟಳೆಯ ಮೇಲಿಂದ ನಮ್ಮ ರಾಜರು ಒಪ್ಪಂದಕ್ಕೆ ಸಿದ್ಧರಾಗಬಹುದು.''

''ಅದಾವ ಕಟ್ಟಳೆ?''

''ಶಾಹೂಮಹಾರಾಜರು ಸ್ವರಾಜ್ಯದ ಮೇಲಿನ ತಮ್ಮ ಬಾಧ್ಯತೆಯನ್ನು ಬಿಟ್ಟು ಬಿಡಬೇಕು''

ಬಾಜೀರಾಯನು ಉಪಹಾಸಾತ್ಮಕವಾಗಿ ಒಮ್ಮೆ ನಕ್ಕನು.

''ಪೇಶವೆ!'' ಉದಾಜಿಯು ಸಿಟ್ಟಿನಿಂದ:—''ನೀವು ಹೀಗೆ ನಗಬೇಡಿರಿ. ಇದು ನಗೆಯ ಮಾತಲ್ಲ ನಿಮ್ಮಿಂದ ರಾಜ್ಯವನ್ನು ಕಸಿದುಕೊಕೊಳ್ಳುವ ಸಾಮರ್ಥ್ಯವು ನಮ್ಮಲ್ಲಿದೆ. ನೀವಾಗಿ ಒಪ್ಪಂದಕ್ಕೆ ಬಂದ ಮೇಲೆ ನಾವು ಹೇಳಿದಂತೆ ಕೇಳಲಿಕ್ಕೆಬೇಕು. ನಮ್ಮ ಮಹಾರಾಜರನ್ನು ದಿಲ್ಲಿಯ ಸಿಂಹಾಸನದ ಮೇಲೆ ಕುಳ್ಳಿರಿಸಬೇಕೆಂದು ನಾವೇನೂ ಕಟ್ಟಳೆ ಮಾಡಿಲ್ಲ.''

''ನಮ್ಮ ಮೇಲೆ ಇದೊಂದು ದೊಡ್ಡ ಉಪಕಾರವೇ ಆದಂತಾಯಿತು. ಇಂಥ ಕಟ್ಟಳೆಯನ್ನು ಮುಂದೆ ಮಾಡಿದ್ದರೆ ಮಾಡುವದೇನು?'' ಎಂದು ಬಾಜೀ

ರಾಯನು ನುಡಿದು, ಸಂಭಾಜಿರಾಜನನ್ನು ಕುರಿತು:--"ನಿಮ್ಮ ಓಲಗವು ರಾಜ್ಯಕರ್ತರದೋ-ಕಾಗೆಗಳದೋ? ಚವ್ಹಾಣರಾಡಿದ ಮಾತು ಕೇಳಿ, ಇದು 'ಕಾಗೆಗಳ ಕಚೇರಿಯೇ' ಎಂಬಂತೆ ನನಗೆ ತೋರತೊಡಗಿದೆ. ಚವ್ಹಾಣರ ಸಲಹೆಯೇ ನಿಮ್ಮ ಹಾಗು ಇಡೀ ಓಲಗದ ಸಲಹೆಯೆಂದು ತಿಳಿಯಬೇಕಲ್ಲವೆ?"

"ಪೇಶವೆ! ಏನು ಅನ್ನುತ್ತೀರಿ?" ಎಂದು ನುಡಿದು, ಚವ್ಹಾಣನು ಆಸನದಿಂದೆದ್ದು:—"ನಾನು ಕಾಗೆಯು! ನಿಮ್ಮನ್ನು ಚುಚ್ಚಿ ತಿನ್ನಬೇಕೆನಿಸಿದರೆ ನಿಮಗೆ ತರುಣೋಪಾಯವಿರುವದೆ?"

ಉದಾಜಿಯು ಪಾವಿತ್ರ್ಯದ ಮೇಲೆ ನಿಂತು ಶಸ್ತ್ರವನ್ನು ಹಿರಿದ ಕೂಡಲೆ ಅವನ ಸೇವಕರು ಮುಂದೆ ಬಂದರು. ಬಾಜೀರಾಯನ ಅಂಗರಕ್ಷಕನಾದ ಗೋವಿಂದಪಂತ ಬುಂದೇಲೆಯು ಒಡೆಯನ ಎದುರಿಗೆ ನಿಂತು ತನ್ನ ಖಡ್ಗವನ್ನು ಹಿರಿದನು.

"ಉದಾಜಿರಾಯರೆ! ತುಂಬಿದ ಸಭೆಯಲ್ಲಿ ಅತಿ ಪ್ರಸಂಗತನ ಮಾಡುವದು ಛತ್ರಪತಿಗಳ ಓಲಗದ ಕಟ್ಟಳೆಗೆ ವಿರೋಧವಾದದ್ದಾಗಿರುವದು; ನಿಮ್ಮ ಮನುಷ್ಯತ್ವಕ್ಕಾದರೂ ಈ ಕೃತಿಯಿಂದ ಬಾಧೆಯುಂಟಾಗುವದು."

"ನನಗೆ ಈ ವೇಳೆಯಲ್ಲಿ ಓಲಗ ಮೊದಲಾದವುಗಳ ಪರಿವೆಯಿಲ್ಲ. ನೀವು ನನ್ನಲ್ಲಿ ಕ್ಷಮೆಯನ್ನು ಯಾಚಿಸಿದರೇ ಉಳಿಯುವಿರಿ"

"ನೀವು ಮಾತಾಡಿದ್ದಕ್ಕಾಗಿ ನಾನು ಮಾತನಾಡಿದೆನು. ನಾನು ಎಂದೂ ನಿಮ್ಮಲ್ಲಿ ಕ್ಷಮೆಯನ್ನು ಯಾಚಿಸುವದಿಲ್ಲ. ಸಿಟ್ಟಿನ ಭರದಲ್ಲಿ ಆಡಿದ್ದು ಅನುಚಿತನೆಂದು ಓಲಗದ ಅಭಿಪ್ರಾಯವಾದರೆ, ನಾನು ಓಲಗಕ್ಕೆ ಕ್ಷಮೆಬೇಡುವೆನು. ನಾನು ಕ್ಷಮಾಯಾಚನೆ ಮಾಡುವದು ಭಾವೀ ಪರಿಣಾಮಕ್ಕೆ ಅಂಜಿಯೆಂದು ತಿಳಕೊಳ್ಳಲಾಗದು. ಛತ್ರಪತಿಯು ಪೂಜ್ಯ ಸಿಂಹಾಸನದ ಗೌರವವು ಅಭಂಗವಾಗಿ ಉಳಿಯಬೇಕೆಂಬ ಸದುದ್ದೇಶದಿಂದ ಒಮೆಯಲ್ಲವೆಂದರೆ, ನೂರು ಸಾರೆ ಕ್ಷಮಾಯಾಚನೆ ಮಾಡುವೆನು. ಆದಾದರೂ ಮೊದಲಿಗೆ ಅಪರಾಧ ಮಾಡಿದವರಾದ ನೀವು ಕ್ಷಮೆ ಬೇಡಿದ ಮೇಲೆಯೇ"

"ಅದೆಲ್ಲ ಸುಳ್ಳು. ನೀವು ನನ್ನಲ್ಲಿ ಕ್ಷಮೆಬೇಡಿರಿ."

"ಅದೇನೂ ಇಲ್ಲ. ನಾನು ನಿಮ್ಮನ್ನು ಗುರುತಿಸುವದಿಲ್ಲ."

"ನನ್ನನ್ನು ಗುರುತಿಸುವದಿಲ್ಲವೆ?" "ಇಲ್ಲ."

"ಹಾಗಿದ್ದರೆ ನಾನೂ ನಿಮ್ಮನ್ನು ಗುರುತಿಸುವದಿಲ್ಲ." ಎಂದು ನುಡಿದು, ತನ್ನ ಸೇವಕರನ್ನು ಕುರಿತು:—"ಈ ಉನ್ಮತ್ತ ಪೇಶವೆಯನ್ನು ಈಗಲೆ ಸೆರೆ ಹಿಡಿಯಿರಿ!"

ಸೇವಕರು ಮುಂದಾದರು. ಗೋವಿಂದಪಂತ ಬುಂದೇಲೆಯು ಅವರ ಎದೆಗೆ ಗುದ್ದಿ ಗುದ್ದಿ ಹಿಂದೆ ಸರಿಸಿದನು. ಕೂಡಲೆ ಚವ್ಹಾಣನು ತನ್ನ ಶಸ್ತ್ರವನ್ನು ಬುಂದೇಲೆಯ ಮೇಲೆ ಎತ್ತಿದನು. ಅವನ ಆ ಕೈಯನ್ನು ಬುಂದೇಲೆಯು ಬಲವಾಗಿ ಹಿಡಿದನು. ಚವ್ಹಾಣನ ಖಡ್ಗವು ಆ ಹಿಡಿತದಿಂದ ಸಡಿಲಾಗಿ ಭೂಮಿಗೆ ಬಿತ್ತು. ಚವ್ಹಾಣನು ಪ್ರತಿಸ್ಪರ್ಧಿಯ ಶಕ್ತಿಯನ್ನು ನೋಡಿ ದಂಗುಬಡಿದನು! ಆಗ ಪೇಶವೆಯು:—“ಹಿಮ್ಮತಬಹಾದ್ದರರೆ! ಇಂಥ ಹೇಡಿತನದ ಕೃತ್ಯಗಳನ್ನು ಮಾಡಬೇಡಿರಿ. ಪೇಶವೆಯೊಡನೆ ಪ್ರಸಂಗವಿರುವದೆಂಬದನ್ನು ಲಕ್ಷ್ಯದಲ್ಲಿಟ್ಟು ಕೆಲಸ ಮಾಡಿರೆಂದರಾಯಿತು”

ಉದಾಜಿಯ ಕೈಯನ್ನು ಬುಂದೇಲೆಯು ಗಟ್ಟಿಯಾಗಿ ಹಿಡಿದುದರಿಂದ, ಅವನ ವ್ಯವಸ್ಥೆಯು ಮಿಸಿಕಾಡದಂತಾಗಿತ್ತು. ಕೃಷ್ಣರಾಯ ಪ್ರತಿನಿಧಿಯು ಚವ್ಹಾಣನ ಈ ಅವಸ್ಥೆಯನ್ನು ನೋಡಿ, ಅವನ ಸಹಾಯಾರ್ಥವಾಗಿ ಧಾವಿಸಿದನು. ಗೋವಿಂದಪಂತನು ಅವನನ್ನು ಕುರಿತು:—“ಕೃಷ್ಣರಾಯರೆ! ಸುಮ್ಮನೆ ವಿಷದ ಪರೀಕ್ಷೆ ಮಾಡಬೇಡಿರಿ ನೀವು ನಿಮ್ಮ ಕೈಯನ್ನು ಹಿಂದೆ ತೆಗೆದುಕೊಳ್ಳತಕ್ಕದ್ದು. ಇಲ್ಲದಿದ್ದರೆ ಅದು ಕಡಿದು ಚಲ್ಲಲ್ಪಟ್ಟೀತು!”

ಗೋವಿಂದಪಂತನ ಮೇಲೆ ಬೀಳುವ ಶಕ್ತಿಯು ಕೃಷ್ಣರಾಯನಲ್ಲಿ ಇದ್ದಿಲ್ಲ. ಅವನು ಹಿಂದುಮುಂದೆ ನೋಡುತ್ತಿರುವಷ್ಟರಲ್ಲಿ ಅಮಾತ್ಯನು ನಡುವೆ ಬಂದು ಪ್ರತಿನಿಧಿಯನ್ನು ಹಿಂದೆ ಸರಿಸಿದ್ದರಿಂದ, ಅವನ ದುರ್ಬಲತನದ ಮೇಲೆ ಹೊದಿಕೆ ಹಾಕಿದಂತಾಯಿತು.

ಕೈಯನ್ನು ಬಿಡಿಸಿಕೊಳ್ಳಲಾಗದೆ ಚವ್ಹಾಣನು ಚಡಪಡಿಸುತ್ತಿರುವದನ್ನು ನೋಡಿ ಅವನ ಸೇವಕನೊಬ್ಬನು ತನ್ನ ಖಡ್ಗವನ್ನೆತ್ತಿ ಬುಂದೇಲೆಯ ಮೇಲೆ ಬಂದನು. ಕೂಡಲೆ ಆತನ ಹಸ್ತವು ಖಡ್ಗಸಹಿತವಾಗಿ ಕಳಚಿಬಿತ್ತು. ಬುಂದೇಲೆಯು ಆ ಸೇವಕನ ಕೈಯನ್ನು ಒಳ್ಳೇ ಚತುರತನದಿಂದ ಕಡಿದು ಚಲ್ಲಿದನು. ಕೂಡಲೆ ಚವ್ಹಾಣನು ರೋಷದಿಂದ ಸಂಭಾಜಿರಾಜನನ್ನು ಕುರಿತು:—“ಮಹಾರಾಜರೆ! ನೋಡಿರಿ. ರಾಜಸಭೆಯಲ್ಲಿ ರಕ್ತಪಾತವಾಗುತ್ತಲಿದೆ. ಇನ್ನು ನನ್ನಿಂದ ಅತ್ಯಾಚಾರ ಘಟಿಸಿದರೆ, ನನ್ನ ಕಡೆಗೆ ಮಾತಿಲ್ಲ”

ಉದಾಜಿಯು ಹೀಗೆ ನುಡಿಯುವಷ್ಟರಲ್ಲಿ ಸೇವಕನು ಧಾವಿಸಿ ಬಂದು:- “ಮಹಾರಾಜರೆ! ಶತ್ರುಗಳ ಸೈನ್ಯವು ರಾಜಮಂದಿರವನ್ನು ಮುತ್ತಿರುವದು!”

“ಪೇಶವೆ! ಇದು ನಿಮ್ಮ ಕಾರಸ್ಥಾನವು!” ಎಂದು ಸಂಭಾಜಿಯು ಮುಂಗಾಣದವನಾಗಿ ನುಡಿದನು.

"ಮಹಾರಾಜರೆ, ನೀವು ಏನೇ ಅನ್ನಿರಿ. ನನ್ನಿಂದ ಅನ್ಯಾಯವು ಮಾತ್ರ ಘಟಿಸಿಲ್ಲ. ನಿಮ್ಮ ಜನರು ವಿಶ್ವಾಸಘಾತಮಾಡಲೆಳಸಿದರು. ಅದರ ಪ್ರತಿಧ್ವನಿಯು ಸಭೆಯ ಹೊರಗೆ ಕೇಳಿಸಿತು; ಆದ್ದರಿಂದ ಅನರ್ಥವು ಸಂಭವಿಸುತ್ತಲಿದೆ. ನೀವು ನನ್ನನ್ನು ನಿರಾತಂಕವಾಗಿ ಹೋಗಗೊಟ್ಟರೆ ಒಳಿತಾಗುವದು; ಇಲ್ಲದಿದ್ದರೆ ಖಂಡಿತವಾಗಿಯೂ ಗಂಡಾಂತರವು ಪ್ರಾಪ್ತವಾಗುವದು."

"ಇಲ್ಲಿಂದಿಲ್ಲಿಯೇ ನಿಮ್ಮ ಶಿರಚ್ಛೇದನೆ ಮಾಡಿದರೆ?" ಎಂದು ಉದಾಜಿಯು ನುಡಿಯುತ್ತಿರಲು, ಹೊರಗಿನಿಂದ ಬಂದ ಸಶಸ್ತ್ರಸೈನಿಕರು ಓಲಗವನ್ನು ನುಗ್ಗಿ, ಬಾಜೀರಾಯನ ಎಡಬಲಕ್ಕೆ ನಿಂತು, ಅವನಿಗೆ ದಾರಿಯನ್ನು ಮಾಡಿದರು ಬುಂದೇಲೆಯು ಉದಾಜಿಯ ಕೈಬಿಟ್ಟು:—"ಶಾಬಾಸ್! ಹಿಮ್ಮತ್ ಬಹಾದ್ದರರೆ! ನಿಮ್ಮ ಹೇಡಿತನಕ್ಕೆ ಹೊದಿಕೆ ಹಾಕುವದಕ್ಕಾಗಿ ನಿಮ್ಮ ಮಹಾರಾಜರು ನಿಮಗೆ ಹಿಮ್ಮತಬಹಾದ್ದರರೆಂಬ ಹೆಸರು ಕೊಟ್ಟಂತೆ ತೋರುವದು! ಸ್ತ್ರೀಯರಾದರೂ ಈಗ ನೀವು ಮಾಡಿದಂತಹ ಬಹಾದ್ದೂರಿಕೆಯನ್ನು ಮಾಡಬಹುದು. ನಿನ್ನ ಹಿಮ್ಮತಬಹಾದ್ದರಿಕೆಗೆ ಧಿಃಕಾರ, ಧಿಃಕಾರ!"

ಪೇಶವೆಯು ಸ್ವಜನರೊಂದಿಗೆ ಸುರಕ್ಷಿತವಾಗಿ ದಾಟಿ ಹೋದನು. ಅನಂತರದಲ್ಲಿ ಯುದ್ಧದ ವಿಷಯವಾಗಿ ಅರೆದಾಟವು ನಡೆಯಿತು. ಕೃಷ್ಣರಾಯ, ಉದಾಜಿರಾಯ ಮೊದಲಾದವರು ಯುದ್ಧ ಮಾಡಬೇಕೆಂದು ಹಟ ಹಿಡಿದರು. ಸಂಭಾಜಿರಾಜನ ಹಾಗು ಜಿಜಾಬಾಯಿಯ ಮತವೂ ಕೊನೆಗೆ ಅವರಂತೆಯೆ ಬಿತ್ತು. ಎಲ್ಲರೂ ಯೋಗಮಾಯೆಯನ್ನು ಕಂಡು ಅವಳಿಂದ ಶುಭಾಶೀರ್ವಾದ ಹೊಂದಿದರು. ಅನಂತರದಲ್ಲಿ ಯುದ್ಧದ ಸಿದ್ಧತೆಯು ಭರದಿಂದ ನಡೆಯಿತು. ಇದೇ ವೇಳೆಯಲ್ಲಿ ತಾರಾಬಾಯಿಯು ಸೆರೆಮನೆಯಲ್ಲಿ ಯಾವದೋ ಕಾರಸ್ಥಾನ ನಡೆಯಿಸಿದ ಲಕ್ಷಣ ತೋರಿದ್ದರಿಂದ, ಜಿಜಾಬಾಯಿಯು ಅವಳನ್ನು ಅರಮನೆಯಲ್ಲಿಯೆ ಇಡುವದನ್ನು ನಿಶ್ಚಯಿಸಿದಳು. ಅಷ್ಟರಲ್ಲಿ ಶಂಭುಸಿಂಗ ಜಾಧವನೂ ಶ್ರೀಪತಿರಾಯನೂ ದೊಡ್ಡ ಸೈನ್ಯದೊಡನೆ ಶಿರೋಳವನ್ನು ಮುತ್ತುವದಕ್ಕೆ ಸಿದ್ಧರಾಗಿರುವರೆಂದು ದೂತನು ರಾಣಿಗೆ ಅರಿಕೆ ಮಾಡಿಕೊಂಡನು.

ಬಾಜೀರಾಯ ಪೇಶವೆಗೆ ಅವನನ್ನು ಸೆರೆಹಿಡಿಯಬೇಕೆಂದು ಯೋಜಿಸಿದ ಚವ್ಹಾಣನ ಕಾರಸ್ಥಾನವನ್ನು ಅದಾವು ತಿಳಿಸಿರಬಹುದು?

---

## ದೈವದ ಪ್ರತಿಕೂಲತೆ.

—: *** : —

ಇಬ್ಬರು ಛತ್ರಪತಿಗಳ ನಡುವೆ ತುಮುಲವಾದ ರಣಕಂದನವು ಪ್ರಾರಂಭವಾಯಿತು. ದಿವ್ಯಪ್ರತಾಪನಿಧಿಯಾದ ಬಾಜೀರಾಯ ಪೇಶವೆಯ ಹಾಗು ಶ್ರೀಪತಿರಾಯ-ಶಂಭುಸಿಂಗ ಮೊದಲಾದ ಕಲಿಗಳ ಸಾಹಸದಿಂದ ಕೊಲ್ಹಾಪುರದ ರಾಜ್ಯದೊಳಗಿನ ಎಷ್ಟೋ ದುರ್ಗಗಳೂ ಕೋಟೆ-ಕೊತ್ತಳಗಳೂ ಸಾತಾರೆಯ ಛತ್ರಪತಿಯ ಸ್ವಾಧೀನವಾದವು ಯಾರ ಮೇಲೆ ಸಂಭಾಜಿರಾಯನು ಕೈಲೂರಿ ಸಂಗ್ರಾಮವನ್ನು ಪ್ರಾರಂಭಿಸಿದ್ದನೋ, ಆ ಹಿಮ್ಮತ ಬಹಾದ್ದರ ಉದಾಜಿರಾಯನು ಪೇಶವೆಯ ಕೈಯಲ್ಲಿ ಸಿಕ್ಕು ನುಗ್ಗು-ನುಗ್ಗಾಗಿ, ಸತ್ತೆ ಕೆಟ್ಟೆನೆಂದು ಒಮ್ಮೆ ತನ್ನ ಶಿರಾಳೆಯನ್ನು ಸೇರಿ ಗುಪ್ತವಾದವನು ಇನ್ನೂ ಬೈಲಿಗೆ ಬಿದ್ದಿರಲಿಲ್ಲ ಕೃಷ್ಣರಾಯನು ಶ್ರೀಪತಿರಾಯನೊಡನೆ ಕಾದಲಾರದವನಾಗಿದ್ದನು. ಅಮಾತ್ಯಭಗವಂತರಾಯನಂತು ಪ್ರಸ್ತುತ ಸಂಗ್ರಾಮದಲ್ಲಿ ಮನಸ್ಸು ಹಾಕಿದ್ದಿಲ್ಲ. ವೆಂಕಟರಾಯ ಘೋರಪಡೆಯು ಎಲ್ಲಿಯೋ ಮಾಯವಾಗಿ ಹೋಗಿದ್ದನು. ಶಂಭುಸಿಂಗನು ಮುಖ್ಯ ಮುಖ್ಯ ಸ್ಥಳಗಳನ್ನು ಹಿಡಿದು, ಕೊಲ್ಹಾಪುರದ ದಂಡಿಗೆ ಅನ್ನಸಾಮಗ್ರಿಗಳೂ ಯುದ್ಧಸಾಮಗ್ರಿಗಳೂ ದೊರೆಯದಂತೆ ವ್ಯವಸ್ಥೆ ಮಾಡಿದ್ದನು. ಇದ್ದ ಅನ್ನಸಾಮಗ್ರಿಯು ಒಮ್ಮೊಮ್ಮೆ ವಿಷ ಕೂಡಿದ್ದಾಗುತ್ತಿತ್ತು. ಮದ್ದು ಯಾವ ಮಾಯೆಯಿಂದಲೋ ಎಣ್ಣೆಗೂಡಲ್ಪಟ್ಟಿರುತ್ತಿತ್ತು. ಜಲಾಶಯಗಳಲ್ಲಿ ಸಹ ಶತ್ರುಗಳು ವಿಷ ಹಾಕುತ್ತಿದ್ದರು. ಹೊರಗಿನಿಂದ ಬರುವ ಧಾನ್ಯಸಾಮಗ್ರಿಗಳನ್ನು ಶಂಭುಸಿಂಗನು ಸುಲಿದು ಬಿಡುತ್ತಿದ್ದನು. ಒಮ್ಮೊಮ್ಮೆ ಯಾವವಾದರೂ ಕೆಲವು ಗಂಟುಗಳು ಕೊಲ್ಹಾಪುರದವರ ಕಡೆಗೆ ಬಂದರೆ, ಅವುಗಳು ಮಳಲು-ಬೂದಿಗಳಿಂದ ತುಂಬಿದವುಗಳಾಗಿರುತ್ತಿದ್ದವು. ಹೀಗಾಗಿ ಸಂಭಾಜಿರಾಜನು ಬಹಳೇ ಪೇಚಾಟಕ್ಕೆ ಬಿದ್ದನು. ಸದ್ಯದ ಪ್ರಸಂಗದಲ್ಲಿ ರಾಜ-ರಾಣಿಯರಿಗೆ ತರಣೋಪಾಯವು ಕಾಣದಾಯಿತು. ತಮಗೆ ಹೀಗೆ ಪರಾಭವವೊದಗತೊಡಗಿದ ಕಾರಣವನ್ನು ಯೋಗಮಾಯೆಯಿಂದ ತಿಳಿದುಕೊಳ್ಳಬೇಕೆಂದು ನಿಶ್ಚಯಿಸಿ, ಅವರು ಯೋಗಮಂದಿರಕ್ಕೆ ಬಂದರು. ಜಿಜಾಬಾಯಿಯು ದೀನವಾಣಿಯಿಂದ ಯೋಗಮಾಯೆಯನ್ನು ಕುರಿತು:—"ಮಾತಾಜಿ! ನಮಗೆ ಇಷ್ಟೇಕೆ ಕಾಡಾಟವು ಹತ್ತಿದೆ? ಇಷ್ಟು ದಿನಗಳವರೆಗೆ ನಡೆದ ಯುದ್ಧಗಳಲ್ಲಿ ಒಮ್ಮೆಯಾದರೂ ನಮಗೆ ವಿಜಯವು ದೊರೆಯಲಿಲ್ಲ. ಹೀಗಾಗುತ್ತಿರುವ ಕಾರಣವೇನು?"

"ರಾಣಿ! ನಿಮ್ಮ ಪಕ್ಷಕ್ಕೆ ಪರಾಜಯವಾಗುತ್ತ ನಡೆದಿರುವದು ನಿಜವು. ಹೀಗಾಗಲಿಕ್ಕೆ ಪ್ರಬಲವಾದ ಕಾರಣಗಳುಂಟು. ನೀವು ಚದುರೆಯೆಂಬ ದಾಸಿಯನ್ನೂ, ಅವಳ ಗಂಡನನ್ನೂ, ಇಬ್ಬರು ಮಕ್ಕಳನ್ನೂ ಕೊಂದಿರುವಿರಿ. ಮೃತಾತ್ಮಗಳು ಪಿಶಾಚಿಗಳಾಗಿ, ನಿಮ್ಮನ್ನು ಈ ಪರಿಯಾಗಿ ಕಾಡತೊಡಗಿರುವವು."

ಯೋಗಮಾಯೆಯ ಈ ಶೋಧದಿಂದ ಸಂಭಾಜಿಯು ದಿಗಿಲುಗೊಂಡನು. ಆಗ ಅವನು ಭಯವಿಹ್ವಲನಾಗಿ:—"ಮಾತಾಜಿ! ಪಿಶಾಚಿ ಪೀಡೆಯು ಹೇಗೆ ನಿವಾರಣೆಯಾಗುವದು?"

ಪಿಶಾಚಿಪೀಡೆಯ ನಿವಾರಣೆಗೆ ಮಂತ್ರವಿಧಾನಗಳುಂಟು. ನಾನು ಇನ್ನು ಮೇಲೆ ಆ ಮಂತ್ರಪುರಶ್ಚರಣ ಮಾಡತೊಡಗುವೆನು ಸದ್ಯಕ್ಕೆ ನಿಮ್ಮಿಬ್ಬರ ರಕ್ಷಣೆಗಾಗಿ ನನ್ನ ಶಿಷ್ಯರನ್ನು ನಿಯಮಿಸುವೆನು ಅವರು ನಿಮ್ಮ ಬಳಿಯಲ್ಲಿದ್ದಾಗ ನಿಮ್ಮನ್ನು ಯಾವ ಪಿಶಾಚಿಗಳೂ ಬಾಧಿಸಲಾರವು."

ಯೋಗಮಾಯೆಯು ಸಂಭಾಜಿಯು ಹಾಗು ರಾಣಿಯ ಮೈಗಾವಲಿಗೆ ತನ್ನ ಸಿಷ್ಯರನ್ನಿರಿಸಿದಳು ಆಗಿನಿಂದ ಅವರ ಭಯವು ಕಡಿಮೆಯಾಗದೆ, ದಿನ ದಿನಕ್ಕೆ ಹೆಚ್ಚಾಗತೊಡಗಿತು! ಅವರಿಗೆ ರಾತ್ರಿಯ ವೇಳೆಯಲ್ಲಿ ಯಾರೋ ಹೆಸರುಗೊಂಡು ಕೂಗಿದಂತಾಗುತ್ತಿತ್ತು. ಸ್ವಪ್ನದಲ್ಲಿ ಎದೆಯಮೇಲೆ ಕುಳಿತು ಜಜ್ಜಿದಂತಾಗುತ್ತಿತ್ತು. ಒಮ್ಮೊಮ್ಮೆ ಯಾರೂ ಕಾಣದೆ, ಅಕ್ರಾಳ-ವಿಕ್ರಾಳ ಧ್ವನಿಯು ಮಾತ್ರ ಕೇಳುತ್ತಿತ್ತು. ಚದುರೆಯ ಪಿಶಾಚಿಯು ರಾಣಿಯ ಎದುರಿಗೆ ನಿಂತು:—"ಕುಲಟೆ! ನಿನ್ನ ಮರಣಕಾಲವು ಸಮೀಪಿಸಿತು ಬೇಗನೆ ನೀನು ಸಿದ್ಧವಾಗಿರು." ಎಂದು ಹೇಳುತ್ತಿತ್ತು. ರಾಮದಾಸನ ಪಿಶಾಚಿಯು ಸಂಭಾಜಿರಾಜನ ಬಳಿಗೆ ಬಂದು:—"ರಾಜಾ! ನಿನ್ನಂತಹ ನೀಚನಿಗೆ ಮರಣ ದಂಡನೆಯೇ ಯೋಗ್ಯವು. ನೀನು ನನ್ನನ್ನು ಹೇಗೆ ಕೊಲ್ಲಿಸಿದೆಯೋ, ಹ್ಹಾಗೆಯೇ ನೀನು ಸಾಯುವೆ. ಭೀಷಣ ಅತ್ಯಾಚಾರವನ್ನು ತಾಳಕೊಳ್ಳಲಿಕ್ಕೆ ಮನಸ್ಸು ಗಟ್ಟಿಮಾಡು." ಎಂದು ಹೇಳುತ್ತಿತ್ತು. ಒಂದು ರಾತ್ರಿ ಚದುರೆಯ ಪಿಶಾಚಿಯು ರಾಣಿಯ ಎದುರಿಗೆ ನಿಂತು, ಇಂಥ ದಿವಸ ನಿನ್ನನ್ನು ಬಲಿ ತೆಗೆದುಕೊಳ್ಳುವೆನೆಂದು ಹೇಳಿತು. ಈ ಹೇಳಿಕೆಯಿಂದ ಜಿಜಾಬಾಯಿಯ ಅರ್ಧ ಜೀವವೇ ಹೋಯಿತು. ಅವಳು ಯೋಗಮಾಯೆಯ ಬಳಿಗೆ ಬಂದು ಈ ಸಂಗತಿಯನ್ನು ಹೇಳಿದಳು. ಮಾರನೆಯ ದಿನ ಸಂಭಾಜಿರಾಜನಿಗೆ ರಾಮದಾಸನ ಪಿಶಾಚಿಯೂ ಹೀಗೆಯೇ ಹೇಳಿತು. ಅವನೂ ಯೋಗಮಾಯೆಯ ಬೆನ್ನು ಬಿದ್ದನು. ಯೋಗಮಾಯೆಯೇನು ಸಾಮಾನ್ಯಳೆ?

ಅವಳು ಇಬ್ಬರಿಗೂ ಅಭಯ ದಾನ ಮಾಡಿದಳು. ಅವಳ ಅಭಯ ವಾಣಿಯಿಂದ ಮಾತ್ರ ಇಬ್ಬರೂ ನಿಶ್ಚಿಂತರಾಗಲಿಲ್ಲ. ರಾಜ-ರಾಣಿಯರ ಎದೆ ಗುದಿಯು ದಿನದಿನಕ್ಕೆ ಹೆಚ್ಚಾಗತೊಡಗಿತು. ಮರಣದ ದಿನವು ಸಮೀಪಿಸಿ ದಂತೆ ಅವರಿಬ್ಬರೂ ಉದ್ಭ್ರಾಂತರಾಗಿ ಹೋದರು ಅತ್ತ ಪೇಶವೆಯ ಕಾಟ, ಇತ್ತ ಪಿಶಾಚಿಗಳ ಕಾಟ. ಈ ಎರಡೂ ಕಾಟಗಳಲ್ಲಿ ಸಿಲುಕಿದ ರಾಜ-ರಾಣಿ ಯರು ಜರ್ಜರಿತರಾಗಿ ಹೋದರು!

ಜಿಜಾಬಾಯಿಗೆ ಚದುರೆಯ ಪಿಶಾಚಿಯು ಹೇಳಿದ ಮೃತ್ಯುದಿನವು ಅಂದು ಪ್ರಾಪ್ತವಾಗಿತ್ತು. ಆದ್ದರಿಂದ ಆ ಹೊತ್ತು ಇಡೀ ಹಗಲು ಅವಳ ಮನಸ್ಸು ಬಹಳೇ ತಳಮಳಕ್ಕೊಳಗಾಗಿತ್ತು. ಅವಳು ಹೇಗಾದರೂ ಹಗಲನ್ನು ಕಳೆದಳು. ಸೂರ್ಯಾಸ್ತವಾಯಿತು. ರಾತ್ರಿಯ ಒಂದು ಪ್ರಹರವಾಯಿತು. ಅಂದಿನ ರಾತ್ರಿಯು ಅವಳಿಗೆ ಕಾಳರಾತ್ರಿಯಾಗಿತ್ತು. ಆ ಕಾಳರಾತ್ರಿಯು ತನ್ನ ಬಲಿ ತೆಗೆದುಕೊಳ್ಳುವದೆಂಬ ಭೀಷಣ ವಿಚಾರದಿಂದ ಅವಳ ಸರ್ವಾಂ ಗವು ನಡುಗಹತ್ತಿತು ಅವಳು ಆ ರಾತ್ರಿಯನ್ನು ಯೋಗಮಾಯೆಯ ಬಳಿ ಯಲ್ಲೇ ಕಳೆಯಬೇಕೆಂದು ವಿಚಾರ ಮಾಡಿದ್ದಳು. ಯೋಗಮಾಯೆಯು ಜಿಜಾ ಬಾಯಿಯ ಪ್ರಾಣರಕ್ಷಣೆಗಾಗಿ ಸಮಾಧಿಸ್ಥಳಾಗಿದ್ದುದರಿಂದಲೂ ಅಲ್ಲಲ್ಲಿ ಅದೃಶ್ಯ ಸ್ವರೂಪದಿಂದ ಸಂಚರಿಸುತ್ತಿದ್ದುದರಿಂದಲೂ ಯೋಗಮಂದಿರದ ಬಳಿಯಲ್ಲಿ ಸಹ ಯಾರೂ ಹೋಗಬಾರದೆಂಬ ಕಟ್ಟಾಜ್ಞೆಯಾಗಿತ್ತು.

ಮಧ್ಯರಾತ್ರಿಯು ಸಮೀಪಿಸಿತು. ಜಿಜಾಬಾಯಿಯ ಹೃದಯವು ಮರಣ ಭಯದಿಂದ ಕಸವಿಸಿಗೊಳ್ಳತೊಡಗಿತು. ಅವಳು ಯೋಗಮಂದಿರದಲ್ಲಿ ಯೋಗ ಮಾಯೆಯ ಆಶ್ರಯಹೊಂದಬೇಕೆಂದು ಹೊರಟಳು. ಆಗ ಅಲ್ಲಿ ಯೋಗ ಮಾಯೆಯು ಇದ್ದಿಲ್ಲ. ಅವಳು ಶ್ರೀ ದತ್ತಾತ್ರಯ ಮಂದಿರಕ್ಕೆ ಹೋಗಿರುವ ಳೆಂದು ಶಿಷ್ಯರಿಂದ ಗೊತ್ತಾಯಿತು. ಅವಳು ತನ್ನ ಮೇಲಿನ ಅನಿಷ್ಟನಿವಾರಣೆ ಗಾಗಿ ತಪಶ್ಚರ್ಯಮಾಡಲಿಕ್ಕೆ ಅಲ್ಲಿಗೆ ಹೋಗಿರುವಳೆಂದು ಜಿಜಾಬಾಯಿಯು ತಿಳಿದಳು. ಅವಳು ತನ್ನ ಅಂಗ ರಕ್ಷಣೆಗೆ ಸಾಕಷ್ಟು ಜನ ದಾಸ-ದಾಸಿಯ ರನ್ನು ಕರೆದುಕೊಂಡು ದತ್ತಮಂದಿರಕ್ಕೆ ಬಂದಳು. ಅವಳು ಮಂದಿರವನ್ನು ಪ್ರವೇಶಿಸಿದ ಮೇಲೆ 'ಮಾತಾಜಿ!' ಎಂದು ಮೆಲ್ಲನೆ ಕೂಗಿದಳು.

ದೇವಾಲಯದಲ್ಲಿ ಶಾಂತತೆಯು ನೆಲೆಗೊಂಡಿತ್ತು. ಜಿಜಾಬಾಯಿಯ ಆ ಕೂಗು ದೇವಾಲಯದ ಗರ್ಭಾಗಾರದಲ್ಲಿದ್ದ ಯೋಗ ಮಾಯೆಗೆ ಕೇಳ ಲಿಕ್ಕೆ ಪ್ರತ್ಯವಾಯವಿದ್ದಿಲ್ಲ; ಆದರೆ ಕೂಗಿಗೆ ಉತ್ತರವು ಮಾತ್ರ ದೊರೆಯಲಿಲ್ಲ. ತನ್ನ ಮೇಲಿನ ಗಂಡಾಂತರ ದೂರಾಗುವದಕ್ಕಾಗಿ ಮಾತಾಜಿಯು ತಪಶ್ಚರ್ಯ

ಮಾಡತೊಡಗಿರುವಳೆಂದು ಜಿಜಾಬಾಯಿಯ ಕಲ್ಪನೆಯಾಯಿತು. ದತ್ತ ಮಹಾರಾಜನ ದೇವಾಲಯ, ಮೇಲೆ ಯೋಗಮಾಯಾ ಮಾತಾಜಿಯ ಅನುಷ್ಠಾನ; ಇಂಥದರಲ್ಲಿ ತನ್ನ ಸಮೀಪಕ್ಕೆ ಪಿಶಾಚಿಗಳು ಬರಲಿಕ್ಕಿಲ್ಲೆಂದು ಆವಳು ಸ್ವಲ್ಪಮಟ್ಟಿಗೆ ಮನಶ್ಶಾಂತಿ ಹೊಂದಿದಳು. ಆಗ ಅವಳಿಗೆ ದೇವಾಲಯದ ಹೊರಭಾಗದಲ್ಲಿ ಸಂಭಾಷಣ ನಡೆದದ್ದು ಕೇಳತೊಡಗಿತು:

"ಅಣ್ಣಾ! ಇನ್ನೊಮ್ಮೆ ಮನಸ್ಸನ್ನು ಗಟ್ಟಿಮಾಡಿ ಈ ಕೆಲಸಕ್ಕೆ ತೊಡಗು. ಆ ಚಾಂಡಾಲಿನಿಯ ಮೇಲೆ ನೀನು ದಯೆದೋರಬೇಡ. ಆ ಕುಲಟೆಯು ನನ್ನ ಸರ್ವಸ್ವವನ್ನೂ ಹಾಳು ಮಾಡಿದಳು ನನ್ನ ಪತಿಯನ್ನೂ ಮಕ್ಕಳನ್ನೂ ನಾಶಗೊಳಿಸಿದ ಆ ಕುಲಟೆಯನ್ನು ಭೀಷಣವಾದ ಪ್ರಕಾರದಿಂದ ಕೊಲೆ ಮಾಡು. ನೀನು ಗಂಡಸಾಗಿದ್ದರೆ, ಘೋರಾತ ಮನೆತನದಲ್ಲಿ ಜನಿಸಿದ್ದರೆ, ನಿನ್ನಲ್ಲಿ ನಿನ್ನ ಕುಲದ ಅಭಿಮಾನವಿದ್ದರೆ ಭಯಗೊಳ್ಳದೆ, ಆ ನೀಚಳನ್ನು ನಾಶಗೊಳಿಸು."

"ಚದುರೆ! ಭಯವು ಎಂತಹ ಪದಾರ್ಥವಿರುವದೆಂಬದು ಈ ರಘೂಜಿಗೆ ಗೊತ್ತೇ ಇಲ್ಲ. ನನ್ನ ಧೋರಣವು ತಪ್ಪಿದ್ದರಿಂದ ನಿನ್ನ ಪತಿಯ ಹಾಗು ನಿನ್ನ ಪುತ್ರನಾದ ಸಟವಾಜಿಯ ಮರಣಕ್ಕೆ ನಾನೇ ಕಾರಣವಾದಂತಾಯಿತು. ನನ್ನ ಈ ಎಚ್ಚರಗೇಡಿತನದ ಬಗ್ಗೆ ಮನಸ್ಸು ಉದಾಸವಾಗಿದೆ."

"ಆಗಿ ಹೋದ ಸಂಗತಿಗಳ ಬಗ್ಗೆ ಕುದಿಯುವದರಿಂದ ಲಾಭವೇನು? ಈಗ ಆ ನರಾಧಮಳು ಬರಬಹುದು. ಮಾತಾಜಿಯ ಹೊರತು ಅವಳಿಗೆ ಶಾಂತಿದೊರೆಯುವಂತಿಲ್ಲ. ಆವಳು ಬಂದ ಕೂಡಲೆ ನೀನು ನಿನ್ನ ಕೆಲಸವನ್ನು ಕೊನೆಗಾಣಿಸು."

"ಅವಳನ್ನು ಜೀವಂತವಾಗಿ ಹಿಡಿಯುವದಕ್ಕಿಂತ ಆಗಿಂದಾಗ ಕೊಂದು ಹಾಕಿದರೆ?"

"ಬೇಡ; ಒಮ್ಮೆಲೆ ಕೊಲ್ಲುವದು ಬೇಡ. ಅವಳು ನನ್ನ ವಿಡಂಬನೆ ಮಾಡಿರುವಳು. ನಾನು ಅದೇ ರೀತಿಯಾಗಿ ಅವಳ ಛಲನೆಮಾಡಿ ಕೊಲ್ಲುವೆನು. ಅವಳು ನಿನಗೂ ನನಗೂ ತುಸ ತೊಂದರೆ ಕೊಟ್ಟಿರುವಳೆ?"

"ಚದುರೆ, ನಿನ್ನ ಇಚ್ಛೆಯಿದ್ದಂತಾಗಲಿ."

ಈ ಸಂಭಾಷಣವನ್ನು ಕೇಳಿ ಜಿಜಾಬಾಯಿಯ ಅವಸ್ಥೆಯು ಹೇಗಾಗಿರಬಹುದೆಂಬದನ್ನು ತಿಳಿಸುವದು ಅಸಾಧ್ಯವು. ಅವಳು ಅರ್ಧ ಸತ್ತಂತಾಗಿ:—"ಮಾತಾಜಿ!" ಎಂದು ಕೂಗಿದಳು.

"ರಾಣಿಯು ಬಂದಂತೆ ತೋರುವದು."

"ಚದುರೆ! ನಡೆ, ಬೇಗ ಹೋಗೋಣ."

ಚದುರೆಯ ಹಾಗು ರಾಮದಾಸನ ಪಿಶಾಚಿಗಳು ಈ ಕ್ಷಣದಲ್ಲಿಯೇ ಬಂದು ತನ್ನ ಅಸುವನ್ನು ಹೀರುವವೆಂದು ಜಿಜಾಬಾಯಿಯು ತಿಳಿದು:— "ದತ್ತಾ, ಅವಧೂತಾ! ಪಾರ ಮಾಡು!" ಎಂದು ಕೂಗಹತ್ತಿದಳು. ಅಷ್ಟರಲ್ಲಿ ಒಬ್ಬ ಸ್ತ್ರೀಯೂ ಒಬ್ಬ ತರುಣ ಬೈರಾಗಿಯೂ ಶಸ್ತ್ರಪಾಣಿಗಳಾಗಿ ಅವಳೆದುರಿಗೆ ಬಂದು ನಿಂತರು. ಆಗ ಆ ಸ್ತ್ರೀಯು ಕರ್ಕಶವಾಣಿಯಿಂದ:— "ರಾಕ್ಷಸಿ! ನಾನೇ ನಿನ್ನ ಕಾಲಸ್ವರೂಪಿಣಿಯಾದ ಚದುರೆ!"

"ಚಾಂಡಾಲಿನಿ! ನಾನೇ ನಿನ್ನ ಕರಾಲಸ್ವರೂಪನಾದ ರಾಮದಾಸನು!"

"ಭೂ....ಭೂ.....ಭೂ....ತ! ಭೂ.....ತ.....ತ" ಜಿಜಾಬಾಯಿಯು ಚೀರಿದಳು.

ಅಷ್ಟರಲ್ಲಿ ದೇವಾಲಯದ ಬಳಿಗೆ ಅಡಗಿದ್ದ ಸೈನಿಕರು ಹೊರಬಿದ್ದು ಅಲ್ಲಿಗೆ ಬಂದರು. ಸೈನಿಕರ ಮುಖ್ಯಸ್ಥನು:—"ದೇವಾಲಯದಲ್ಲಿಯ ಎಲ್ಲರನ್ನೂ ಸೆರೆಹಿಡಿಯಿರಿ!" ಎಂದು ಆಜ್ಞೆ ಮಾಡಿದನು.

"ಅಯ್ಯೋ! ನಾನು ಸೆರೆಸಿಕ್ಕೆನು. ಪ್ರತಿನಿಧಿ ಶ್ರೀಪತಿರಾಯನ ಧ್ವನಿಯಿದು! ನಾನು ವೈರಿಗಳ ವಶಳಾದೆನು." ಎಂದು ಜಿಜಾಬಾಯಿಯು ಉದ್ಗಾರ ತೆಗೆದಳು. ಅವಳನ್ನು ಹಿಡಿಯ ಬಂದ ಸ್ತ್ರೀಯೂ ಬೈರಾಗಿಯೂ ಎತ್ತ ಕಡೆಗೋ ಮಾಯವಾಗಿ ಹೋಗಿದ್ದರು. ಅವರು ಚದುರೆ-ರಾಮದಾಸರೆಂದು ಜಿಜಾಬಾಯಿಯು ಗುರುತಿಸಿದಳು. ಚದುರೆಯು ಇದುವರೆಗೂ ಹೇಗೆ ಜೀವದಿಂದಿರುವಳು? ರಾಮದಾಸನನ್ನು ಸುಣ್ಣದಲ್ಲಿ ಸುಡಿಸಿರಲು, ಮತ್ತೆ ಹೇಗೆ ಉಳಿದು ಬಂದನು? ಮೊದಲಾದ ವಿಚಾರಗಳು ಅವಳಲ್ಲಿ ಹುಟ್ಟಿದವು. ಈ ವಿಷಯದಲ್ಲಿ ಯೋಗ್ಯ ನಿರ್ಣಯವಾಗದ್ದರಿಂದ ಅವಳ ಮನಸ್ಸು ಬಹಳೇ ಗೊಂದಲಕ್ಕೊಳಗಾಯಿತು. ಆಗ ಶ್ರೀಪತಿರಾಯನು ತನ್ನ ಸೈನಿಕರನ್ನು ಕುರಿತು:—"ರಾಣೀಸಾಹೇಬರನ್ನು ಕರೆದುಕೊಂಡು ಹೋಗಿ ಪೇಶವೆಯವರ ಸ್ವಾಧೀನಪಡಿಸತಕ್ಕದ್ದು. ಈಗ ಪೇಶವೆಯವರು ಇಚಲಕರಂಜಿಯಲ್ಲಿರುವರು." ಅನಂತರದಲ್ಲಿ ಪ್ರತಿನಿಧಿಯು ರಾಜಮಂದಿರವನ್ನು ಮುತ್ತಿ ರಾಜಸಬಾಯಿ, ದುರ್ಗಾಬಾಯಿ ಮೊದಲಾದವರನ್ನು ಸೆರೆಹಿಡಿದನು. ತಾರಾಬಾಯಿಯೂ ಭವಾನಿಬಾಯಿಯೂ ನಿನ್ನೆ ಯೋಗಮಾಯೆಯ ದರ್ಶನಕ್ಕೆ ಹೋದವರು ಎಲ್ಲಿಯೋ ಮಾಯವಾಗಿರುವರೆಂದು ಪ್ರತಿನಿಧಿಗೆ ಯಾರೋ ಹೇಳಿದರು. ಸೆರೆಯಲ್ಲಿ ಸಿಲುಕಿದ ರಾಜಕುಟುಂಬವು ಪೇಶವೆಯ ಶಿಬಿರವನ್ನು ಸೇರುವದಕ್ಕೆ ಇಚಲಕರಂಜಿಯ ದಾರೀ ಹಿಡಿಯಿತು.

## ಘನವಂತನಾದ ಪೇಶವೆ.

—:—:—

ಚದುರೆಯೂ ರಾಮದಾಸನೂ ಇಹಲೋಕವನ್ನು ತ್ಯಜಿಸಿ ಹೋಗಿರುವರೆಂದು ಜಿಜಾಬಾಯಿಯು ತಿಳಿದುಕೊಂಡಂತೆ ಉಳಿದ ಜನರೂ ತಿಳಿದಿದ್ದರು. ದತ್ತಮಂದಿರದಲ್ಲಿದ್ದಾಗ ನುಸುಳಿ ಹೋದವರು ಚದುರೆ-ರಾಮದಾಸರಂತೆಯೇ ಕಂಡರೆಂದು ಜಿಜಾಬಾಯಿಯು ದಾರಿಯಲ್ಲಿ ಸೈನಿಕರಿಗೆ ಹೇಳಿದಳು. ಈ ಸಂಗತಿಯನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. ಚದುರೆ-ರಾಮದಾಸರನ್ನು ಹೋಲುವ ಇಬ್ಬರು ಬೈರಾಗಿಣಿ-ಬೈರಾಗಿಗಳು ಸೈನ್ಯವು ಬೀಡುಬಿಟ್ಟಲ್ಲಿ, ವನ-ರಣದಲ್ಲಿ ಎಷ್ಟೋ ಸಾರೆ ಅವರ ಕಣ್ಣಿಗೆ ಬಿದ್ದಿದ್ದರು. ಅವರು ದೇವತೆಗಳಿರಬಹುದೆಂದು ಸೈನಿಕರ ಕಲ್ಪನೆಯಾಗಿದ್ದುದರಿಂದ, ಚದುರೆ-ರಾಮದಾಸರ ವಿಷಯವಾಗಿ ಯಾರಲ್ಲಿಯೂ ಸಂಶಯವುಂಟಾಗಿದ್ದಿಲ್ಲ ಸೈನಿಕರ ಜಾಳಿಗೆಯಲ್ಲಿ ಸಿಲುಕಿದ ಅವರು ಹಾ ಹಾ ಅನ್ನುವಷ್ಟರಲ್ಲಿ ಮಂಕುಬೂದಿ ಹಚ್ಚಿ ಪಾರಾಗಿ ಹೋದುದರಿಂದ, ಅವರ ಚಪಲತೆಯು ಬಗ್ಗೆ ಎಲ್ಲರೂ ಬೆರಗಾಗಿದ್ದರು.

ಜಿಜಾಬಾಯಿ, ರಾಜಸಬಾಯಿ, ದುರ್ಗಾಬಾಯಿ ಮೊದಲಾದ ರಾಜಪರಿವಾರದವರು ಶ್ರೀಪತಿರಾಯನ ಸೈನಿಕರ ಕಾವಲಿನಲ್ಲಿ ಶಿರೋಳದಿಂದ ಇಚಲಕರಂಜಿಯ ಕಡೆಗೆ ಸಾಗಿಸಲ್ಪಟ್ಟಿದ್ದರು. ಸುಮಾರು ಅರ್ಧ ದಾರಿ ಹೋದ ಮೇಲೆ ಪಂಚಗಂಗೆಯ ತೀರದ ಬೈಲು ಪ್ರದೇಶದಲ್ಲಿದ್ದ ಒಂದು ವೃಕ್ಷದ ಕೆಳಗೆ ಕೆಲವು ಜನರು ಕುಳಿತುಕೊಂಡಿರುವದು ಶ್ರೀಪತಿರಾಯನ ಸೈನಿಕರ ದೃಷ್ಟಿಗೆ ಬಿತ್ತು. ಆಗ ಸ್ವಚ್ಛವಾಗಿ ಬೆಳದಿಂಗಳು ಬಿದ್ದುದರಿಂದಲೂ, ವೃಕ್ಷದ ಕೆಳಗಿನ ಜನರ ಬಳಿಯಲ್ಲಿ ದೀವಟಿಗೆಯಿದ್ದುದರಿಂದಲೂ ಅವರು ಶ್ರೀಪತಿರಾಯನ ಸೈನಿಕರಿಗೆ ಸ್ಪಷ್ಟವಾಗಿ ಕಾಣತೊಡಗಿದರು. ಅವರು ಯಾರಿರುವರೆಂಬದನ್ನು ತಿಳದುಕೊಳ್ಳುವ ಕುತೂಹಲವು ಶ್ರೀಪತಿರಾಯನ ಸೈನಿಕರಲ್ಲಿ ಹುಟ್ಟಿತು. ಅವರು ವೃಕ್ಷದ ಬಳಿಗೆ ಹೋದರು. ಅಲ್ಲಿ ಒಂದು ಮೇಣೆಯು ಅವರ ಕಣ್ಣಿಗೆ ಬಿತ್ತು. ಅವರು ಆ ಜನರನ್ನು ಕುರಿತು:— "ಮೇಣೆಯಲ್ಲಿ ಯಾರಿರುವರು?" ಎಂದು ಕೇಳಿದರು.

"ಶ್ರೀಮಂತ ಪೇಶವೆ ಬಾಜೀರಾಯರ ಪರಿವಾರವಿರುವದು."

ಹೀಗೆ ಹೇಳಿದ್ದರಿಂದಲೇ ಆ ಜನರು ಪಾರಾದರು. ಇಲ್ಲದಿದ್ದರೆ ಪರಸ್ಪರರಲ್ಲಿ ಕಾಳಗವೇ ಪ್ರಾರಂಭವಾಗುತ್ತಿತ್ತು. ಎರಡೂ ಗುಂಪಿನವರು ಇಚಲಕರಂಜಿಯಲ್ಲಿಯ ಪೇಶವೆಯ ಶಿಬಿರಕ್ಕೆ ಹೋಗುವವರಿದ್ದುದರಿಂದ,

ಪರಸ್ಪರರು ಮಾತು-ಕಥೆಗಳನ್ನಾಡುತ್ತ ಮಾರ್ಗಕ್ರಮಣ ಮಾಡತೊಡಗಿದರು. ಕೆಲವು ವೇಳೆಯಲ್ಲಿ ಅವರು ಪಂಚಗಂಗೆಯ ತೀರದಲ್ಲಿದ್ದ ಪೇಶವೆಯ ಶಿಬಿರವನ್ನು ತಲುಪಿದರು. ಜಿಜಾಬಾಯಿಯೇ ಮೊದಲಾದ ಸಂಭಾಜಿಯ ರಾಜಪರಿವಾರದ ಜನರನ್ನು ಪೇಶವೆಯ ಸೈನಿಕರು ಒಂದು ಡೇರೆಗೆ ಕಳುಹಿಸಿದರು. ಮತ್ತೊಂದು ಗುಂಪಿನವರು ತಮ್ಮ ಮೇಣೆಯನ್ನು ಪೇಶವೆಯ ಡೇರೆಗೇ ಒಯ್ದರು. ಆಗ ಇನ್ನೂ ರಾತ್ರಿಯಿದ್ದುದರಿಂದ, ಜಿಜಾಬಾಯಿಯೇ ಮೊದಲಾದವರು ಸಾಮಾನ್ಯ ಜನರಂತೆ ಕುಳಿತು ವೇಳೆಗಳೆಯಬೇಕಾಯಿತು.

ಪೇಶವೆ ಬಾಜೀರಾಯನು ಎಲ್ಲಿಗೋ ಹೋದವನು ಬೆಳಗಾಗುವಷ್ಟರಲ್ಲಿ ತನ್ನ ಡೇರೆಗೆ ಬಂದನು. ಅವನು ಅಲ್ಲಿದ್ದ ತಾರಾಬಾಯಿ, ಭವಾನಿಬಾಯಿ. ಯಾದೋಗೋಪಾಳ ಮೊದಲಾದವರನ್ನು ನೋಡಿ ವಿಸ್ಮಿತನಾದನು. ಅಷ್ಟರಲ್ಲಿ ಶ್ರೀಪತಿರಾಯನ ಸೈನಿಕರು ಜಿಜಾಬಾಯಿ ಮೊದಲಾದವರನ್ನು ಅಲ್ಲಿಗೆ ಕರೆತಂದರು. ಜಿಜಾಬಾಯಿಯ ಜನರು ಸೆರೆಯಾದದ್ದನ್ನು ನೋಡಿ ತಾರಾಬಾಯಿಗೆ, ತಾರಾಬಾಯಿ-ಭವಾನಿಬಾಯಿಯರು ಸೆರೆಯಾದದ್ದನ್ನು ನೋಡಿ ಜಿಜಾಬಾಯಿಗೆ ಆನಂದವಾಯಿತು. ಸಂಭಾಜಿಯ ಸ್ತ್ರೀ ಪರಿವಾರವೆಲ್ಲ ಸೆರೆಯಲ್ಲಿ ಸಿಲುಕಿದ್ದರಿಂದ ಪೇಶವೆಯ ಮನಸ್ಸು ಖಿನ್ನವಾಯಿತು. ಅವನು ಶ್ರೀಪತಿರಾಯನ ಈ ಅನುಚಿತ ಕೃತ್ಯವನ್ನು ಮನಃಪೂರ್ವಕವಾಗಿ ಅಲ್ಲಗಳೆದನು. ಅವನು ಆ ರಾಜಪರಿವಾರವನ್ನು ಕುರಿತು:—ನಿಮ್ಮ ಸ್ಥಿತಿಯು ಹೀಗಾದ ಬಗ್ಗೆ ನನ್ನ ಮನಸ್ಸು ಅಸಮಾಧಾನಗೊಂಡಿದೆ. ಶ್ರೀಪತಿರಾಯರ ಈ ತಪ್ಪಿಗಾಗಿ ನಾನು ನಿಮ್ಮಲ್ಲಿ ಕ್ಷಮಾಯಾಚನೆ ಮಾಡುವೆನು. ನಿಮ್ಮನ್ನು ಸಂಭಾಜೀರಾಜರ ಕಡೆಗೆ ಸುರಕ್ಷಿತವಾಗಿ ತಲುಪಿಸುವೆನು''

ಬಾಜೀರಾಯನ ದೊಡ್ಡಿಸ್ತಿಕೆಯನ್ನು ನೋಡಿ ಜಿಜಾಬಾಯಿಯು ಬೆರಗಾದಳು ''ಪೇಶವೆಯು ಪ್ರತಾಪಿಯೂ, ಕರ್ತವ್ಯನಿಷ್ಠುರನೂ ಇದ್ದರೂ, ಮಹಾ ಘನವಂತನೂ ದಯಾಪರನೂ ಇರುವನು!'' ಎಂದು ಅವಳು ಮನಸ್ಸಿನಲ್ಲಿ ಉದ್ಗಾರ ತೆಗೆದಳು ಶತ್ರುಪಕ್ಷದ ಜನರಲ್ಲಿ ಇಂಥ ಮಹಾನುಭಾವತೆಯನ್ನು ಕಂಡದ್ದು ಅವಳು ಇದೇ ಮೊದಲು. ಜಿಜಾಬಾಯಿ-ರಾಜಸಬಾಯಿ ಮೊದಲಾದವರು ಸಂಭಾಜಿರಾಜನ ಕಡೆಗೆ ಹೋಗಲಿಕ್ಕೆ ಸಿದ್ಧರೇ ಇದ್ದರು; ತಾರಾಬಾಯಿ-ಭವಾನಿಬಾಯಿಯರು ಮಾತ್ರ: "ನಾವು ಇನ್ನುಮೇಲೆ ಸಂಭಾಜಿರಾಜನಲ್ಲಿರುವದಿಲ್ಲ. ನಮ್ಮನ್ನು ಶಾಹೂ ಮಹಾರಾಜನ ಕಡೆಗೇ ಕಳುಹಿಸಬೇಕು.'' ಎಂದು ಪೇಶವೆಗೆ ವಿನಂತಿ ಮಾಡಿಕೊಳ್ಳತೊಡಗಿದರು.

''ನೀವು ಸಂಭಾಜಿರಾಜರ ಆಶ್ರಯದಲ್ಲಿರಲಿಕ್ಕೆ ಬೇಸರಗೊಂಡಿರುವಿ

ರೇನು?" ಎಂದು ಪೇಶವೆಯು ತಾರಾಬಾಯಿಯನ್ನು ಕೇಳಿದನು.

"ಸಂಭಾಜಿಯ ಆಶ್ರಯದಲ್ಲಿರುವದಕ್ಕಿಂತ ಸ್ಮಶಾನವಾಸವೇ ಮೇಲು!" ಎಂದು ತಾರಾಬಾಯಿಯು ಸಂತಾಪದಿಂದ ನುಡಿದಳು.

"ಸಾತಾರೆಯ ಸೆರೆಮನೆಯಲ್ಲಿ ಕೊಳೆಯುವದು ನಿನ್ನ ಹಣೆಯಲ್ಲಿದ್ದರೆ ಅದಾರು ತಪ್ಪಿಸುವರು?'' ಎಂದು ಜಿಜಾಬಾಯಿಯು ಆಕ್ಕಸದಿಂದ ನುಡಿದಳು.

"ಇಚ್ಛೆಯಂತೆ ಫಲ ದೊರೆಯುವದು." ಎಂದು ರಾಜಸಬಾಯಿಯೂ ಡುಚ್ಚಿ ಮಾತನಾಡಿದಳು.

"ಅಪ್ಪಾ, ಪೇಶವೆ! ನನ್ನನ್ನು ಗಂಡಾಂತರದಿಂದ ಪಾರು ಮಾಡು. ನನ್ನನ್ನು ಶಾಹುವಿನ ಕಡೆಗಾದರೂ ಕಳಿಸು; ಇಲ್ಲವೆ ಕಡಿದು ಚೆಲ್ಲಿಯಾದರೂ ಬಿಡು; ಆದರೆ ಇನ್ನು ಮೇಲೆ ಸಂಭಾಜಿಯ ಕಡೆಗೆ ನಾನು ಹೋಗಲಾರೆನು.''

ಪೇಶವೆಗೆ ರಾಜಮನೆತನದ ವ್ಯಾಜ್ಯವು ತಿಳಿದಿತ್ತು. ಅವನು ಉಭಯ ಪಕ್ಷದವರನ್ನು ಸವಿಮಾತಿನಿಂದ ಸಂತೈಸಿದನು. ಜಿಜಾಬಾಯಿ-ರಾಜಸ ಬಾಯಿಯರು ಬಾಜೀರಾಯನ ಉಪದೇಶಕ್ಕೆ ಬಾಗುವಂಥವರಲ್ಲ; ಆದರೆ ತಮ್ಮ ಪ್ರತಿಕೂಲ ಪರಿಸ್ಥಿತಿಯನ್ನು ಲಕ್ಷ್ಯಕ್ಕೆ ತಂದು, ಅಲ್ಲಿಗೇ ಸುಮ್ಮ ನಾದರು. ಅನಂತರದಲ್ಲಿ ಬಾಜೀರಾಯನು ರಾಜಸಬಾಯಿಯನ್ನೂ ಜಿಜಾ ಬಾಯಿಯನ್ನೂ ಕುರಿತು:—"ಆಯೀಸಾಹೇಬ, ರಾಣೀಸಾಹೇಬ, ಇಂದು ಆಕಲ್ಪಿತ ಯೋಗಾಯೋಗದಿಂದ ಇಲ್ಲಿಗೆ ಬಂದಿರುವಿರಿ. ಎರಡು ದಿನ ಇದ್ದು, ಆತಿಥ್ಯಸ್ವೀಕಾರಮಾಡಿ ಹೋಗಬೇಕೆಂದು ನನ್ನ ವಿನಂತಿಯಿದೆ.''

''ಪೇಶವೆ!'' ಜಿಜಾಬಾಯಿಯು ಸಿಟ್ಟಿನ ಸ್ವಭಾವಕ್ಕನುಗುಣವಾಗಿ:— "ನಾವು ಇಲ್ಲಿಗೆ ಆತಿಥ್ಯಸ್ವೀಕಾರಕ್ಕಾಗಿ ಬಂದಿರುವೆವೆ? ಬಂಧನದಲ್ಲಿ ನಾವು ಹೇಗೆ ಇರಬೇಕು? ಈ ವೇಳೆಯು ಆತಿಥ್ಯಸ್ವೀಕಾರ ಮಾಡಲಿಕ್ಕೆ ತಕ್ಕದ್ದಾಗಿಲ್ಲ. ನಾವು ನಿಮ್ಮ ಬಂಧನೆಯಲ್ಲಿರುವದರಿಂದ ಹೋಗಗೊಡದಿದ್ದರೆ ಉಪಾಯ ವಿಲ್ಲ! ನಾವಂತು ನಿಮ್ಮನ್ನೇ ತಾರಕರೆಂದು ಭಾವಿಸಿರುವೆವು"

"ರಾಣೀಸಾಹೇಬರೇ, ಹೀಗೇಕೆ ಮಾತನಾಡುವಿರಿ? ಎಲ್ಲರಿಗೂ ತಾರ ಕನು ಪರಮೇಶ್ವರನು. ನೀವು ಭೇದಭಾವಗಳನ್ನು ಕಲ್ಪಿಸಿದರೆ ಯತ್ನವಿಲ್ಲ. ನಿಮ್ಮನ್ನು-ನನ್ನ ಪೂಜ್ಯ ಸ್ವರಾಜ್ಯ ಸಿಂಹಾಸನದ ಅಧಿಕಾರಗಳನ್ನು-ಬಂಧನೆ ಯಲ್ಲಿರಿಸುವಷ್ಟು ಪಾಶವೀವೃತ್ತಿಯು ನನ್ನದಿಲ್ಲ.''

''ಪೇಶವೆ! ನೀವು ಅಪಕಾರವನ್ನು ಉಪಕಾರದಿಂದ ತೀರಿಸಿದಿರಿ. ನೀವು ಶಿಷ್ಟಾಯಿಗಾಗಿ ಬಂದಾಗ ನಮ್ಮ ಜನರು ನಿಮ್ಮನ್ನು ಬಂಧನೆಗೊಳ ಪಡಿಸಬೇಕೆಂದು ಹವಣಿಸಿದರು; ಆದರೆ ನೀವು ಬಂಧನೆಗೊಳಗಾದ ನಮ್ಮನ್ನು

ನಮ್ಮನ್ನು ಸನ್ಮಾನಪೂರ್ವಕವಾಗಿ ಬಿಡುಗಡೆ ಮಾಡಿದಿರಿ. ನಿಮ್ಮ ಅಂತಃ ಕರಣದ ಪರಿಚಯವು ನಮಗೆ ಚನ್ನಾಗಿದ್ದಿಲ್ಲ. ನೀವು ಬರಿಯ ಶೂರರಿಲ್ಲ; ಗುಣಮಂಡಿತರೂ ಇರುವಿರಿ. ನಿಮ್ಮ ವರ್ಧಮಾನ ಯಶಕ್ಕೆ ನಿಮ್ಮ ಶೂರ ತನದೊಡನೆ ಸೌಜನ್ಯವೂ ಕಾರಣೀಭೂತವಾಗಿದೆ."

"ರಾಣಿಯವರೆ, ನೀವು ನನ್ನನ್ನು ಹೊಗಳಿದ್ದಕ್ಕಾಗಿ ಋಣಿಯಾಗಿರು ವೆನು. ಸದ್ಯದಲ್ಲಿ ನಾನೇನೂ ಹೆಚ್ಚಿನ ಕೆಲಸ ಮಾಡಿಲ್ಲ. ನನ್ನ ಕರ್ತವ್ಯ ವನ್ನು ಮಾಡಿದೆನು."

"ಶಾಹೂಮಹಾರಾಜರ ಪೂರ್ವಾರ್ಜಿತ ಸುಕೃತದಿಂದಲೇ ಅವರಿಗೆ ನೀವು ದೊರೆತಿರುವಿರಿ!" ಎಂದು ಜಿಜಾಬಾಯಿಯು ಮನಃಪೂರ್ವಕವಾಗಿ ನುಡಿದಳು.

"ಬಾಜೀರಾವ ಪೇಶವೆ-ಶ್ರೀಪತಿರಾವ ಪ್ರತಿನಿಧಿಗಳಲ್ಲಿ ಎಷ್ಟು ಅಂತರ ವಿರುವದು ನೋಡು! ಇಬ್ಬರೂ ಒಂದೇ ಸಿಂಹಾಸನದ ಸೇವಕರು. ತಿರುಗಿ ಕೇಳಿದರೆ, ಪ್ರತಿನಿಧಿ ಮನೆತನವು ನಮ್ಮಿಂದ ಹೆಚ್ಚಾಗಿ ಉಪಕೃತವಾಗಿದೆ. ಪೇಶವೆಯವರು ಸ್ವಂತದ ಪರಾಕ್ರಮದಿಂದ ಮುಂದೆ ಬಂದವರಿದ್ದರೂ, ಎಷ್ಟು ರಾಜನಿಷ್ಠೆಯವರಿರುವರು ನೋಡಿದಿಯಾ!" ರಾಜಸಬಾಯಿಯು ಜಿಜಾಬಾಯಿಯನ್ನು ಕುರಿತು ನುಡಿದಳು.

"ಆಯಿಸಾಹೇಬರೆ! ರಾಣೀಸಾಹೇಬರೆ! ನನ್ನ ವಿಷಯವಾಗಿ ನಿಮ್ಮಲ್ಲಿ ನಿಜವಾದ ಆದರವು ಉತ್ಪನ್ನವಾಗಿದ್ದರೆ, ನನ್ನ ಮಾತನ್ನು ನಡೆಯಿಸ ಬೇಕೆಂದು ಕರಜೋಡಿಸಿ ಬೇಡಿಕೊಳ್ಳುವೆನು. ನೀವು ಪನ್ಹಾಳಗಡಕ್ಕೆ ಹೋದ ಮೇಲೆ ಸಂಭಾಜಿರಾಜರಿಗೆ ಉಪದೇಶಮಾಡಿ, ಅವರನ್ನು ದುರಾಗ್ರಹ ಪರಾ ವರ್ತರನ್ನಾಗಿ ಮಾಡಿರಿ. ಅಂದರೇನೇ ನನಗೆ ನಿಜವಾದ ಗೌರವ ಕೊಟ್ಟಂ ತಾಗುವದು. ಪರಮಪವಿತ್ರ ರಾಜವಂಶಗಳ ಐಕ್ಯವೇ ಸ್ವರಾಜ್ಯದ ಕಲ್ಯಾ ಣವು. ಸದ್ಯದ ಹೊಡೆದಾಟವು ಹೀಗೆಯೇ ನಡೆದರೆ, ನಿಮ್ಮ ಹಾನಿಯೇ ಆಗುವದೆಂದು ಖಂಡಿತವಾಗಿ ಹೇಳುವೆನು. ನೀವು ಮನಸ್ಸಿನ ಮೇಲೆ ತೆಗೆದು ಕೊಂಡರೆ ಈ ಕಾರ್ಯವು ನೆರವೇರುವದು. ನನ್ನ ಈ ವಿನಂತಿಯನ್ನು ಮಾನ್ಯ ಮಾಡುವಿರಾ?" ಎಂದು ಬಾಜೀರಾಯನು ಕೈಜೋಡಿಸಿ ನುಡಿದನು.

"ಇದು ವಿನಂತಿಯಲ್ಲ; ಉಪದೇಶವು. ನಾವು ಚವ್ಹಾಣನ ದುರುಪ ದೇಶದಿಂದ ಮೋಸಹೋದೆವು. ಇನ್ನು ಮೇಲೆ ಶಾಹೂಮಹಾರಾಜರು ನಮ್ಮನ್ನು ಕ್ಷಮಿಸುವರೋ ಇಲ್ಲವೋ ಎಂಬ ಬಗ್ಗೆ ಸಂಶಯ ಹುಟ್ಟುತ್ತದೆ." ಎಂದು ಜಿಜಾಬಾಯಿಯು ನುಡಿದಳು.

"ನೀವು ಚಿಂತಿಸಬೇಡಿರಿ. ಈ ವಿಷಯದಲ್ಲಿ ನನ್ನಿಂದಾದಷ್ಟು ಪ್ರಯತ್ನಮಾಡಿ ನಿಮ್ಮ ಇಚ್ಛೆಯನ್ನು ನೆರವೇರಿಸುವೆನು. ಶಾಹೂಮಹಾರಾಜರ ಅಂತಃಕರಣವನ್ನು ನೀವು ಗುರುತಿಸಿಲ್ಲ. ಕರ್ಮಧರ್ಮ ಸಂಯೋಗದಿಂದ ಅವರ ಗುಣದ ಪರಿಚಯ ಮಾಡಿಕೊಳ್ಳುವ ಪ್ರಸಂಗವೊದಗಿತೆಂದರೆ, ಅಂಥ ಸಾಧುಪುರುಷರ ವಿರೋಧ ಮಾಡಿದ್ದು ಅನುಚಿತವಾಯಿತೆಂದು ಸಂಭಾಜಿರಾಜರೂ ನೀವೂ ಸ್ವಯಂಸ್ಫೂರ್ತಿಯಿಂದ ಉದ್ಗಾರ ತೆಗೆಯುವಿರಿ."

"ಪೇಶವೆ! ನಾವು ನಮ್ಮ ಅತ್ತೆಯವರ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ನಡೆದೆವು. ನಮಗೆ ಈ ಸಂಗತಿಗಳು ಹೇಗೆ ತಿಳಿಯಬೇಕು?"

"ಜಿಜಾ!" ತಾರಾಬಾಯಿಯು ಸಂತಾಪದಿಂದ:—"ಅಂತೆಯೇ ಅತ್ತೆಗೆ ಇಷ್ಟು ಮಾನ ದೊರೆಯುತ್ತಲಿದೆ. ಜಿಜಾ, ನಿನ್ನ ಮಾತುಗಳು ನನಗೇನು ತಿಳಿಯುವದಿಲ್ಲವೆ? ಅತ್ತೆಯು ಮೂರ್ಖಳಾದರೆ, ಜಾಣಳಾದ ನಿನಗೆ ಸನ್ಮಾರ್ಗವು ಕಾಣಲಿಲ್ಲವೆ?"

"ನೀವೇ ಒಡಕಿನ ಬೀಜ ಊರಿದಿರಿ!"

"ರಾಣಿಯವರೇ, ತಾರಾಬಾಯಿಸಾಹೇಬರೇ, ಹಿಂದಿನ ಮಾತು ತೆಗೆಯಬೇಡಿರಿ ಮುಂದೆ ಐಕ್ಯವು ನೆಲೆಗೊಳ್ಳುವಂತೆ ಮಾಡಿರಿ." ಎಂದು ಪೇಶವೆಯು ಹೇಳಿದನು

"ನಾನು ಸಾತಾರೆಗೆ ಹೋದ ಮೇಲೆ ಸಂಭಾಜಿಯನ್ನು ಕ್ಷಮಿಸಬೇಕೆಂದು ಹೇಳುವೆನು. ನಾನು ಹಚ್ಚಿದ ವೃಕ್ಷವನ್ನು ಕಿತ್ತೊಗೆಯಬೇಕೆಂದು ನಾನೇಕೆ ಬಯಸಲಿ? ನಾನು ಕೊಲ್ಹಾಪುರದ ರಾಜಸಿಂಹಾಸನದ ಸುಯಶಕ್ಕಾಗಿ ಆಯುಷ್ಯದ ಕೊನೆಯ ಕ್ಷಣದ ವರೆಗೂ ಪ್ರಯತ್ನಿಸತಕ್ಕವಳೇ." ಎಂದು ತಾರಾಬಾಯಿಯು ನುಡಿದು, ಜಿಜಾಬಾಯಿಯನ್ನು ಕುರಿತು:—"ಜಿಜಾ, ನಿನ್ನ ಪತಿಯು ನಿನ್ನ ಹಿಡಿಕೆಯಲ್ಲಿರುವನು. ಅವನಿಗೆ ಚೆನ್ನಾಗಿ ಉಪದೇಶ ಮಾಡಿ, ಶಾಹುವಿನೊಡನೆ ಪ್ರೇಮದಿಂದ ನಡೆಯುವಂತೆ ಮಾಡು. ನೀವಿಬ್ಬರು ದಂಪತಿಗಳು ನನ್ನ ವಂಶಚ್ಛೇದಗೊಳಿಸಿದಿರಿ; ಅನನ್ವಿತ ರೀತಿಯಿಂದ ಛಲನೆ ಮಾಡಿದಿರಿ. ಆವೇಶದ ಭರದಲ್ಲಿ ನಾನಾದರೂ ನಿಮಗೆ ಶಾಪ ಕೊಟ್ಟಿರುವೆನು. ಅದನ್ನು ನೀನು ಮನದಲ್ಲಿ ಹಿಡಿಯಬೇಡ. ಬೆಕ್ಕಿನ ಹಲ್ಲುಗಳು ಮರಿಗಳಿಗೆ ಹೇಗೆ ಚುಚ್ಚುವದಿಲ್ಲವೋ, ಅದರಂತೆಯೇ ನಮ್ಮಂಥ ಮುದುಕರ ಶಾಪಗಳು ನಿಮ್ಮಂಥ ಸಣ್ಣ ಬಾಲಕರನ್ನು ಬಾಧಿಸುವದಿಲ್ಲ. ತಿಳಿಯಿತೆ?"

"ಅತ್ತೆಯವರೇ!" ಜಿಜಾಬಾಯಿಯು ಅನುತಾಪದಿಂದ.—"ನಮ್ಮ ಅಪರಾಧಗಳನ್ನು ಕ್ಷಮಿಸಿರಿ."

"ಕ್ಷಮಿಸುವೆನು. ಜಿಜಾ, ಈ ವಿಷಯದಲ್ಲಿ ಚಿಂತಿಸಬೇಡ."

"ನೀವು ಕೊಲ್ಹಾಪುರಕ್ಕೆ ನಡೆಯಿರಿ. ನೀವು ಅವರಿಗೆ ಉಪದೇಶ ಮಾಡಿದರೆ ಒಳ್ಳೇ ಪರಿಣಾಮವಾಗುವದು"

"ಜಿಜಾ, ನನ್ನ ಉಪದೇಶವು ಕೆಲಸಕ್ಕೆ ಬರುವದಿಲ್ಲ ಸಂಭಾಜಿಯು ನಿನ್ನ ಉಪದೇಶದಿಂದಲೇ ಎಳೆಗೆ ಬರುವನು ನಾನು ಇನ್ನು ಮೇಲೆ ಕೊಲ್ಹಾಪುರಕ್ಕೆ ಹೋಗಬಾರದೆಂಬ ಸಂಕಲ್ಪಮಾಡಿಕೊಂಡೇ ಅಲ್ಲಿಂದ ಹೊರಬಿದ್ದಿರುವೆನು. ನನಗೆ ಸುಖವು ದೊರೆಯಬೇಕೆಂದು ಈಶಸಂಕೇತವಿದ್ದರೆ, ಅದು ಸಾತಾರೆಯಲ್ಲಿಯೇ ದೊರೆಯಲಿ."

"ನನ್ನ ವಿನಂತಿಯಂತೆ ಕೆಲಸ ನೆರವೇರಿಸಿ ಹಿಂದುಪದಪಾತಶಾಹಿಯ ಅಭೀಷ್ಟಚಿಂತನೆ ಮಾಡುವಿರಾ?" ಎಂದು ಬಾಜೀರಾಯನು ಕೇಳಿದನು.

"ನಿಶ್ಚಯವಾಗಿ ನಾನು ನಿಮ್ಮ ಮನಸ್ಸಿನಂತೆ ಕೆಲಸವನ್ನು ಈಡೇರಿಸುವೆನು." ಎಂದು ಜಿಜಾಬಾಯಿಯು ವಚನ ಕೊಟ್ಟಳು

ಅನಂತರದಲ್ಲಿ ಬಾಜೀರಾಯನು ರಾಜಪರಿವಾರಕ್ಕೆ ಬಹುಮೂಲ್ಯವಾದ ವಸ್ತ್ರಾಲಂಕಾರಗಳನ್ನು ಕೊಟ್ಟು, ಸನ್ಮಾನದಿಂದ ಅಂಪೇ ಪನ್ಹಾಳಗಡಕ್ಕೆ ಸಂರಕ್ಷಿತವಾಗಿ ಕಳುಹಿಸಿದನು.



## ರಹಸ್ಯ ಸ್ಫೋಟ.



ಮೂರನೆಯ ದಿನ ತಾರಾಬಾಯಿ-ಭವಾನಿಬಾಯಿಯವರನ್ನು ಸಾತಾರೆಗೆ ಕಳುಹಿಸಬೇಕೆಂದು ಪೇಶವೆಯು ನಿರ್ಧರಿಸಿದ್ದನು. ಪ್ರವಾಸದ ಸಿದ್ಧತೆಯೂ ನಡೆದಿತ್ತು ಆಗ ಬ್ರಹ್ಮೇಂದ್ರಸ್ವಾಮಿಗಳು ಬಂದರು ಅವರೊಡನೆ ಒಂದು ಡೋಲಿಯೂ ಒಬ್ಬ ಬೈರಾಗಿಯೂ ಒಬ್ಬ ಸ್ತ್ರೀಯೂ ಬಂದಿದ್ದರು. ಬಾಜೀರಾಯನು ಸ್ವಾಮಿಗಳನ್ನು ಸನ್ಮಾನಿಸಿ ಆಸನದಲ್ಲಿ ಕುಳ್ಳಿರಿಸಿದ ಮೇಲೆ.—

"ಸ್ವಾಮಿಮಹಾರಾಜರೆ! ಇವನೇ ಅಲ್ಲವೆ ಆ ರಾಮದಾಸನು?"

"ಹಿಂದಿನಿಂದ ಎಲ್ಲವನ್ನೂ ಹೇಳುವೆನು. ಮೊದಲು ನಿಮ್ಮ ಭಗಿನಿಯಾದ ಅನೂಬಾಯಿಯನ್ನು ಜತನ ಮಾಡಿರಿ." ಎಂದು ಬ್ರಹ್ಮೇಂದ್ರ ಸ್ವಾಮಿಗಳು ಶಿಬಿಕೆಯ ಕಡೆಗೆ ಬೆರಳು ಮಾಡಿದರು.

ಬೋವಿಗಳು ಶಿಬಿಕೆಯನ್ನು ಕೆಳಗಿಳಿಸಿದರು. ಅನೂಬಾಯಿಯು ತನ್ನ ಕುಮಾರನಾದ ನಾರಾಯಣನೊಡನೆ ಹೊರಗೆ ಬಂದಳು.

"ತಂಗೀ, ಅನೂ! ಇದೇನು?" ಎಂದು ನುಡಿದು, ಬಾಜೀರಾಯನು ಸ್ವಾಮಿಗಳನ್ನು ಕುರಿತು:—"ಇವರು ನಿಮಗೆ ಎಲ್ಲಿ ಭೆಟ್ಟಿಯಾದರು?"

"ಪ್ರತಿನಿಧಿಯ ಬಂಧನೆಯಿಂದ ಬಿಡಿಸಿಕೊಂಡು ಬಂದೆನು"

"ಅಂದರೆ?"

"ಪೇಶವೆ, ಶಂಭುಸಿಂಗನು ವಡಗಾಂವವನ್ನು ಕೈವಶ ಮಾಡಿಕೊಂಡ ಮೇಲೆ ವೆಂಕಟರಾಯನು ಹೇಡಿಯಂತೆ ಓಡಿ ಹೋದನು. ಈ ಅನೂಬಾಯಿಯೂ ನಾರಾಯಣನೂ ಅಲ್ಲಿಯೇ ಉಳಿದರು. ಈ ಸಂಗತಿಯು ರಾಮದಾಸನಿಂದ ನನಗೆ ತಿಳಿಯಿತು. ನಾನು ಸಂಭಾಜಿರಾಜನ ಭೆಟ್ಟಿಗೆಂದು ಪನ್ಹಾಳೆಗೆ ಹೊರಟಿದ್ದೆನು. ಶತ್ರುಗಳ ಕೈಯಲ್ಲಿ ಸಿಲುಕಿದ ತಾಯಿ-ಮಕ್ಕಳನ್ನು ಪಾರಮಾಡಿ ನಿನ್ನ ಸ್ವಾಧೀನಕ್ಕೆ ಕೊಟ್ಟು, ಮುಂದಿನ ಕೆಲಸ ಮಾಡುವದು ಉಚಿತವೆಂದು ತೋರಿದ್ದರಿಂದ, ಪ್ರತಿನಿಧಿಗೆ ಹೇಳಿ ಇವರನ್ನು ಬಿಡಿಸಿಕೊಂಡು ಬಂದೆನು."

"ಪ್ರತಿನಿಧಿಯು ಇಷ್ಟು ಮೇಲಕ್ಕೇರಿರುವನೇನು? ಉಂಬ್ರಜದಲ್ಲಿ ನಿಮ್ಮ ಸಮಕ್ಷ ಐಕ್ಯವಾದದ್ದರಿಂದ, ಅವನು ನನ್ನ ವಿರುದ್ಧ ನಡೆಯಲಿಕ್ಕಿಲ್ಲವೆಂದು ಭಾವಿಸಿದ್ದೆನು ಸ್ತ್ರೀಯರ ಹಾಗು ಬಾಲಕರ ಮೇಲೆ ಅವನು ಪರಾಕ್ರಮ ತೋರಿಸಹತ್ತಿರುವನೆಂದಂತಾಯಿತು".

"ಸ್ತ್ರೀಯರೇನು? ಬಾಲಕರೇನು? ಅವರು ಯಾರಿದ್ದರೂ ನಿಮಗೆ ಸಂಬಂಧಪಟ್ಟ ಜನರಲ್ಲವೆ? ಪ್ರತಿಸಿಧಿಯೆಂದರೆ ಏನೆಂದು ತಿಳಿದಿರುವಿರಿ? ಅವನ ಸ್ವಭಾವವು ಹಾಗಲಕಾಯಿಯಂತೆ. ತುಪ್ಪದಲ್ಲಿ ಕರಿದರೂ, ಸಕ್ಕರೆಯಲ್ಲಿ ಎದ್ದಿದರೂ ಅದು ವಿಷವೆ?" ಎಂದು ಬ್ರಹ್ಮೇಂದ್ರಸ್ವಾಮಿಗಳು ನುಡಿದರು.

"ಒಳ್ಳೇದು!" ಎಂದು ಬಾಜೀರಾಯನು ನುಡಿದು, ಅನೂಬಾಯಿಯನ್ನು ಕುರಿತು—"ಅನೂಬಾಯಿ, ಚಿಂತಿಸಬೇಡ. ನಾನು ವೆಂಕಟರಾಯನನ್ನು ಶೋಧಿಸಿ ಎಲ್ಲ ವ್ಯವಸ್ಥೆ ಮಾಡುವೆನು. ನೀನು ನಿಶ್ಚಿಂತೆಯಿಂದಿರು"

ಅನೂಬಾಯಿಯು ಒಳಗೆ ಹೋದ ಮೇಲೆ ಪೇಶವೆಯು ಬ್ರಹ್ಮೇಂದ್ರಸ್ವಾಮಿಗಳನ್ನು ಕುರಿತು.—"ಕಾಳಗದ ಸಂಗತಿಯೇನು?"

"ಎಲ್ಲಿ ನೋಡಿದಲ್ಲಿ ಸಂಭಾಜಿಯ ಪರಾಭವವೇ ಪರಾಭವ! ರಾಣಿಯೂ ರಾಜಸಬಾಯಿಯೂ ನಿನ್ನ ಸೆರೆಯಲ್ಲಿರುವರಲ್ಲವೆ?"

'ಅವರನ್ನು ನಾನು ವಸ್ಸಾಳಿಗೆ ಕಳುಹಿದೆನು. ರಾಜಮನೆತನದ ಸ್ತ್ರೀಯರನ್ನು ಸೆರೆಹಿಡಿಯುವದರಿಂದ ಪ್ರತಾಪತೋರಿಸಿದಂತಾಗುವದೆ? ಪ್ರತಿನಿಧಿಯು ಇದೊಂದು ಅಲ್ಲದ ಕೆಲಸ ಮಾಡಿದನು."

ಬಾಜೀರಾಯನ ಮಾತುಗಳನ್ನು ಕೇಳಿ ಬ್ರಹ್ಮೇಂದ್ರ ಸ್ವಾಮಿಗಳಿಗೆ ಆನಂದವಾಯಿತು. ಆಗ ಅವರು:—"ಪೇಶವೆ! ನಿಮ್ಮ ಔದಾರ್ಯವನ್ನು ನೋಡಿ ಶತ್ರುಗಳೂ ಕೂಡ ತಲೆಬಾಗಿಸುವರು. ನಿಮ್ಮ ಅಂತಃಕರಣವು ಪವಿತ್ರ ವಿಶ್ವಪ್ರೇಮದ ಜನ್ಮಸ್ಥಾನವು! ಹಿಂದುಪದಪಾತಶಾಹಿಯ ಉಗಮಃಸ್ಥಾನವು! ಅನೇಕ ಋಷಿವರರು ಷಡ್ರಿಪುಗಳನ್ನು ಜಯಿಸುವದಕ್ಕಾಗಿ ಹೆಣಗಿ ಕೈ ಊರಿರಬಹುದು; ಆದರ ನೀವು ಲೀಲೆಯಿಂದ ಮನೋವಿಜಯ ಲಾಭಮಾಡಿಕೊಂಡಿರುವಿರಿ. ಪೇಶವೆ! ನೀವು ಧನ್ಯರು! ಪರಮ ಧನ್ಯರು!" ಎಂದು ಬ್ರಹ್ಮೇಂದ್ರ ಸ್ವಾಮಿಗಳು ಅವನನ್ನು ಬಿಗಿದಪ್ಪಿದರು.

ಅನಂತರದಲ್ಲಿ ಅವರು ತರುಣ ಬೈರಾಗಿಯನ್ನೂ, ತರುಣ ಸ್ತ್ರೀಯನ್ನೂ ಕುರಿತು.—"ನೀವು ಈ ಪೇಶವೆಯವರ ಕಾಲು ಹಿಡಿದು ಕ್ಷಮಾಯಾಚನೆ ಮಾಡಿರಿ."

"ಇವರು ಯಾರು?" ಪೇಶವೆಯು ಕೇಳಿದನು.

"ಬಾಜೀರಾಯರೆ, ಇವು ಪತಿತಪಾವನ ಜೀವನಗಳು. ಇವನನ್ನು ರಾಮದಾಸನೆಂದು ನೀನು ಗುರುತಿಸುವೆಯಲ್ಲವೆ?"

"ಹೌದು. ಇವಳು ಯಾರು?"

"ಎಲ್ಲ ಹೇಳುವೆನು." ಎಂದು ನುಡಿದು, ಬ್ರಹ್ಮೇಂದ್ರಸ್ವಾಮಿಗಳು:— "ಈ ರಾಮದಾಸನು ರಘೂಜಿ ಘೋರಾತನು. ಅವಳು ರಘೂಜಿಯ ಭಗಿನಿಯಾದ ಚದುರೆಯು. ಇವರಿಬ್ಬರೂ ನನಗೆ ದಾರಿಯಲ್ಲಿ ಭೆಟ್ಟಿಯಾಗಿ, ತಮ್ಮ ಎಲ್ಲ ತಪ್ಪುಗಳನ್ನು ಒಪ್ಪಿದರು. ಇವರು ಪಶ್ಚಾತ್ತಾಪಪುನೀತರೆಂದು ನನಗೆ ನಂಬಿಗೆಯಾದುದರಿಂದ ಕ್ಷಮಿಸಿದೆನು. ಇವರಿಂದ ಅನೇಕ ಅಪರಾಧಗಳು ಘಟಿಸಿರುವದು ನಿಜವು; ಆದರೆ ಇವರು ಅಪ್ರತ್ಯಕ್ಷವಾಗಿ ನಿಮ್ಮ ರಾಜ್ಯದ ಅಮೌಲ್ಯವಾದ ಸೇವೆಯನ್ನು ಪ್ರತಿಫಲೇಚ್ಛೆಯಿಲ್ಲದೆ ಮಾಡಿರುವರು ನೀವು ಸಂಭಾಜಿರಾಜರ ಓಲಗದಲ್ಲಿ ಗಂಡಾಂತರಕ್ಕೊಳಗಾಗಿದ್ದಿರಲ್ಲವೆ? ಚವ್ಹಾಣನ ಕಾರಸ್ಥಾನದ ಗುಪ್ತವಾರ್ತೆಯನ್ನು ಇವರೇ ನಿಮಗೆ ತಿಳಿಸಿದವರು. ಆದ್ದರಿಂದಲೇ ಸಂಕಟವನ್ನು ನಿವಾರಿಸಿಕೊಳ್ಳಲಿಕ್ಕೆ ನೀವು ಮುಂಜಾಗ್ರತೆಯಿಂದ ವ್ಯವಸ್ಥೆ ಮಾಡಿದಿರಿ. ತಾರಾಬಾಯಿ-ಭವಾನಿಬಾಯಿಯರನ್ನು ಬಂಧಮುಕ್ತಗೊಳಿಸಿ, ಅವರನ್ನು ಇಲ್ಲಿಗೆ ಕರೆತಂದವರೂ ಇವರೇ ಅನೂಬಾಯಿಯನ್ನು ವಡಗಾಂವದಿಂದ ಇಲ್ಲಿಗೆ ತರುವಾಗ ಇವರಿಬ್ಬರು ಬಂಧು-ಭಗಿನಿಯರಿಂದ ನನಗೆ ಬಹಳೇ ನೆರವು ದೊರೆಯಿತು. ಇವರು ಮಾಡಿದ ಈ ಸತ್ಕೃತ್ಯಗಳು ಇವರ ಪಾಪದ ಕ್ಷಾಲನೆಗಾಗಿ ಸಾಕಾಗಿರುವವು."

"ರಾಮದಾಸ! ನಿನಗೆ ಜಿಜಾಬಾಯಿಯವರು ಮರಣದಂಡನೆಯನ್ನು ವಿಧಿಸಿದ್ದಿಲ್ಲವೆ?" ಎಂದು ಬಾಜೀರಾಯನು ರಾಮದಾಸನನ್ನು ಕೇಳಿದನು

"ಶ್ರೀಮಂತರೆ, ನಾನು ಈಗ ರಾಮದಾಸನಲ್ಲ, ರಘೂಜಿಯು ನನ್ನ ಕರ್ಮಕಥೆಯನ್ನು ಎಷ್ಟು ಹೇಳಿದರೂ ಕಡಿಮೆಯೇ ಇವೆ. ನನ್ನ ಭಗಿನಿಯಾದ ಈ ಚದುರೆಯನ್ನು ಸಂಭಾಜಿರಾಜರು ಶೀಲಭ್ರಷ್ಟಳನ್ನಾಗಿ ಮಾಡಿದ್ದರಿಂದ ನಾನು ರಾಮದಾಸನಾಗಿ, ದೊಡ್ಡ ಯೋಗಿವರನೆನಿಸಿ, ಅವರು ಮಾಡಿದ ದುಷ್ಕೃತಿಯ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದೆನು ನಾನು ಮೊದಲು ಸಂಭಾಜಿರಾಜರ ಹಾಗು ಜಿಜಾಬಾಯಿಯವರ ಪ್ರೇಮಸಂಪಾದನೆ ಮಾಡಿಕೊಳ್ಳಬೇಕಾಗಿತ್ತು. ಅದಕ್ಕಾಗಿ ತಾರಾಬಾಯಿಯವರ ಮೊಮ್ಮಗನ ಶೋಧ ನಡೆಯಿಸಿದನು. ನರಸಿಂಹಪುರದ ಶ್ರೀನರಸಿಂಹದೇವರ ಗುಡಿಯಲ್ಲಿ ಈ ಚದುರೆಯ ಪತಿಯಾದ ಕೃಷ್ಣಾಜಿ ಜಗದಳೆಯು ಬೈರಾಗಿ ವೇಷದಿಂದಿರುತ್ತಿದ್ದನು. ಅವನೇ ರಾಜಕುಮಾರನ ರಕ್ಷಕನಾದ ರಜಪುತನೆಂದೂ, ಅವನ ಬಳಿಯಲ್ಲಿದ್ದ ಸಟವಾಜಿಯು-ಚದುರೆಯ ಮಗನು-ರಾಜಪುತ್ರನೆಂದೂ ನನ್ನ ಶಿಷ್ಯರಲ್ಲೊಬ್ಬನು ನನಗೆ ಹೇಳಿದನು. ನನಗೆ ಅವನ ಮಾತುಗಳು ನಿಜ

ವಾಗಿ ತೋರಿದ್ದರಿಂದ ನಾನು ಸಟವಾಜಿಯ ಕೊಲೆಮಾಡಿಸಿದೆನು. ಕೃಷ್ಣಾಜಿಯೂ ಹತನಾದನು. ಸಂಭಾಜಿರಾಜರು ಸಟವಾಜಿಯನ್ನು ಕೊಲ್ಲುವ ಪೂರ್ವದಲ್ಲಿ ಅವನನ್ನು ನಾನು ಗುರುತಿಸಿದೆನು; ಆದರೆ ಆಗ ತರಣೋಪಾಯ ವಿದ್ದಿಲ್ಲ. 'ಅವನು ರಾಜಪುತ್ರನಲ್ಲ; ಚದುರೆಯ ಮಗನು' ಎಂದು ಹೇಳಿದ್ದರೂ, ಆ ಬಾಲಕನಿಗೆ ಉಳಿವಿದ್ದಿಲ್ಲ. ಜಿಜಾಬಾಯಿಯು ಚದುರೆಯನ್ನು ಮೊದಲೇ ಕೊಲ್ಲಿಸಿರುವಳೆಂದು ನಾನು ತಿಳಿದಿದ್ದೆನು. ನರಸಿಂಹಪುರಕ್ಕೆ ಹೋದ ಮೇಲೆ ಇವಳು ಜೀವಂತಳಿರುವ ಸಂಗತಿಯು ಗೊತ್ತಾಯಿತು. ಇವಳು ಚವ್ಹಾಣನ ಸೆರೆಯಲ್ಲಿ ಸಿಲುಕಿದ್ದರಿಂದ ಯಾವ ಹಂಚಿಕೆಯಿಂದಲಾದರೂ ಇವಳನ್ನು ಬಿಡುಗಡೆ ಮಾಡಬೇಕೆಂದು ಯೋಚಿಸಿದೆನು. ಅನಂತರದಲ್ಲಿ ನಾನು ಅಜರೆಗೆ ಹೋದೆನು. ಅಲ್ಲಿ ನನ್ನಿಂದ ಅನುಚಿತವು ಘಟಿಸಿದ್ದಕ್ಕಾಗಿ ಪಶ್ಚಾತ್ತಾಪವಾಗಿದೆ. ನಾನು ಅನೂಬಾಯಿಸಾಹೇಬರಲ್ಲಿ ಕ್ಷಮೆ ಬೇಡಿರುವೆನು. ಶ್ರೀಮಂತರೆ, ತಾವಾದರೂ ನನ್ನನ್ನು ಕ್ಷಮಿಸಬೇಕು.''

"ನಿನ್ನನ್ನು ಸ್ವಾಮಿಮಹಾರಾಜರೇ ಕ್ಷಮಿಸಿರುವರೆಂದ ಮೇಲೆ, ಯಾರು ಶಾಸನ ಮಾಡುವರು? ನಿನಗೆ ಜಿಜಾಬಾಯಿಯವರು ಪ್ರಾಣದಂಡನೆ ವಿಧಿಸಿದ್ದರು. ಅವರ ಆಜ್ಞೆಯು ಪ್ರಜಾರದಲ್ಲಿ ತರಲ್ಪಟ್ಟಿತೆಂಬದನ್ನೂ ನಾನು ಶಿರೋಳದಲ್ಲಿಯೇ ಕೇಳಿದ್ದೆನು; ಅಂದಮೇಲೆ ನೀನು ಹೇಗೆ ಪಾರಾದೆ?''

"ಈ ಸಂಗತಿಯನ್ನು ನನ್ನ ಭಗಿನಿಯಾದ ಈ ಚದುರೆಯು ಹೇಳುವಳು" ಎಂದಂದು ರಘೂಜಿಯು ಸುಮ್ಮನಾದನು.

ಚದುರೆಯು ತನ್ನ ಲಗ್ನವಾದಂದಿನಿಂದ ನರಸಿಂಹಪುರದಲ್ಲಿ ಚವ್ಹಾಣನ ಸೇವಕರ ಕೈಸೆರೆಯಾದ ವರೆಗಿನ ಎಲ್ಲ ಸಂಗತಿಗಳನ್ನು ಬಾಜೀರಾಯನಿಗೆ ಸವಿಸ್ತರವಾಗಿ ಹೇಳಿದಳು ಅವಳ ಕರ್ಮಕಥೆಯನ್ನು ಕೇಳಿ ಪೇಶವೆಯು ವಿಸ್ಮಿತನಾದನು ಅನಂತರದಲ್ಲಿ ಅವನು.—"ಚದುರೇ, ನಿನ್ನ ಕರ್ಮಕಥೆಯು ವಿಸ್ಮಯಜನಕವೂ ಭೀಷಣವೂ ಆದದ್ದಿರುವದು. ಚದುರೆಯ ಅವತಾರದ ಕಥೆಯನ್ನು ನಾನು ಕೇಳಿದಂತಾಯಿತು. ಇನ್ನು ಯೋಗಮಾಯೆಯ ಚರಿತ್ರವನ್ನಷ್ಟು ಹೇಳುವೆಯಾ?"

"ಹೇಳದೇನು ಮಾಡಲಿ?'' ಎಂದು ಚದುರೆಯು ನುಡಿದು, ಗಂಭೀರ ಭಾವದಿಂದ:—"ನಾನು ಯುಕ್ತಿ-ಪ್ರಯುಕ್ತಿಗಳಿಂದ ಚವ್ಹಾಣನ ಸೇವಕರಿಗೆ ಮಂಕುಬೂದಿಹಚ್ಚಿ ಪಾರಾದೆನು. ಚದುರೆಯಾಗಿ ಸಂಚರಿಸಲಿಕ್ಕೆ ಬರುವಂತಿದ್ದಿಲ್ಲವಾದ್ದರಿಂದ, ನಾನು ಯೋಗಮಾಯೆಯ ವೇಷ ಹೊಂದಿದೆನು. ಸಾಧುಸಂತರಲ್ಲಿ ಜಿಜಾಬಾಯಿಯವರ ಅತಿರೇಕವಾದ ಶ್ರದ್ಧೆಯಿದ್ದದ್ದು ನನಗೆ

ಗೊತ್ತಿತ್ತು. ಆದ್ದರಿಂದ ಅವರ ಮೇಲಿನ ಸೇಡುತೀರಿಸಿಕೊಳ್ಳುವ ಹವಣಿಕೆಯನ್ನು ಪೂರಯಿಸಲಿಕ್ಕೆ ಸಂಧಿ ದೊರಕಿತು. ನನ್ನ ಯೋಗಮಾಯೆಯ ಅವತಾರದಲ್ಲಿ ನನ್ನ ಪತಿಯ ಶಿಷ್ಯರ-ನರಸಿಂಹಪುರವಾಸಿಗಳಾದ ಬೈರಾಗಿಗಳ-ನೆರವು ನನಗೆ ಚನ್ನಾಗಿ ದೊರೆಯಿತು. ರಾಮದಾಸನೇ ನನ್ನ ಪತಿ-ಪುತ್ರರ ವಧೆಗೆ ಕಾರಣನಾದುದರಿಂದ ಅವನ ಸೇಡು ತೀರಿಸಿಕೊಳ್ಳುವದು ನನ್ನ ಆದ್ಯಕರ್ತವ್ಯವಾಗಿತ್ತು. ಜಿಜಾಬಾಯಿಯವರು ನನ್ನ ಆಜ್ಞೆಯನ್ನು ದೇವಾಜ್ಞೆಗಿಂತಲೂ ಹೆಚ್ಚಾದ ಭಕ್ತಿಯಿಂದ ಪ್ರಚಾರದಲ್ಲಿ ತಂದರು. ರಾಮದಾಸನ ಬಳಿಯಲ್ಲಿದ್ದ ಭೈರವನ ಕೊಲೆಯಾದ ಮೇಲೆ ಅವನಿಗೆ ಶಿಕ್ಷೆಯು ತೀರ್ಪಾಯಿತು. ಆಗ ಅವನು ಅಂತಿಮವಾದ ಮಾತುಗಳನ್ನು ಹೇಳಿದನು. ಕೊಲೆಗೀಡಾದ ಭೈರವನು ನನ್ನ ಮಗನೆಂಬದು ಆಗ ನನಗೆ ತಿಳಿಯಿತು; ಹಾಗು ಆ ರಾಮದಾಸನೇ ನನ್ನ ಅಣ್ಣಂದಿರಾದ ಈ ರಘೂಜಿ ಧೋರಾತರೆಂಬದು ಗೊತ್ತಾಗಿ, ನನ್ನ ದುಷ್ಕೃತ್ಯದ ಬಗ್ಗೆ ನಾನು ಬಹುಪರಿಯಾಗಿ ಮಿಡುಕಿದೆನು. ಆಗ ನಾನೂ ನನ್ನ ಶಿಷ್ಯರಾದ ಬೈರಾಗಿಗಳೂ ಹೋಗಿ, ಇವರನ್ನು ಉಳಿಸಿಕೊಂಡೆವು. ಮುಂದೆ ನಾವಿಬ್ಬರೂ ಅಣ್ಣ-ತಂಗಿಯರು ಜಿಬಾಬಾಯಿಯವರ ಹಾಗು ಸಂಭಾಜಿರಾಜರ ಮೇಲಿನ ಸೇಡುತೀರಿಸಿಕೊಳ್ಳುವದಕ್ಕಾಗಿ ಏನೇನು ಕುತಂತ್ರ ಮಾಡಿದೆವೆಂಬದನ್ನು ಹೇಳುವದರಲ್ಲೇನೂ ಅರ್ಥವಿಲ್ಲ."

"ಪನ್ಹಾಳಗಡದಲ್ಲಿ ಭವಾನಿಬಾಯಿಯನ್ನು ಸೆರೆಮನೆಯಿಂದ ಪಾರಮಾಡುವದಕ್ಕಾಗಿ ಸಾಹಸ ಮಾಡಿದವಳು ಇವಳೇ. ಇವಳ ತಂತ್ರದಿಂದಲೇ ತಾರಾಬಾಯಿ-ಭವಾನಿಬಾಯಿಯರು ಶಿರೋಳದ ಸೆರೆಮನೆಯಿಂದ ಪಾರಾಗಿ ಇಲ್ಲಿಗೆ ಬಂದರು. ಪಶ್ಚಾತ್ತಾಪದಗ್ಧರಾದ ಇವರನ್ನು ಕ್ಷಮಿಸುವದು ಯೋಗ್ಯವಲ್ಲವೆ?" ಎಂದು ಬ್ರಹ್ಮೇಂದ್ರ ಸ್ವಾಮಿಗಳು ಹೇಳಿದರು.

ಬಾಜೀರಾಯನು ಆ ಅಣ್ಣ-ತಂಗಿಯರ ಚಾತುರ್ಯವನ್ನು ಕೇಳಿ ಆಶ್ಚರ್ಯಬಟ್ಟನು. ಅವನು ಬ್ರಹ್ಮೇಂದ್ರಸ್ವಾಮಿಗಳನ್ನು ಕುರಿತು—"ಮಹಾರಾಜ! ತಾವು ಕೃಪಾಸಾಗರರಿರುವಿರಿ. ತಮ್ಮ ಇಚ್ಛೆಯೂ ಆಜ್ಞೆಯೂ ಶಿರಸಾ ಮಾನ್ಯವಿರುವವು."

ಅನಂತರದಲ್ಲಿ ರಘೂಜಿ-ಚದುರೆಯರು ಕೃತಜ್ಞತೆಯಿಂದ ಪೇಶವೆಗೆ ಅಭಿವಾದನೆ ಮಾಡಿದರು. ಆಗ ಪೇಶವೆಯು:—"ರಘೂಜಿ! ಚದುರೆ! ನಿಮ್ಮ ಸಾಹಸಗಳು ಅವರ್ಣನೀಯವಿರುವವು. ಮೊದಲಿನಿಂದ ನಿಮ್ಮ ಕರ್ತವ್ಯಕ್ಕೆ ಯೋಗ್ಯದಿಸೆಯು ದೊರೆತಿದ್ದರೆ, ನೀವು ನಾಮಾಂಕಿತರಾಗುತ್ತಿದ್ದಿರಿ. ಇನ್ನು ಮೇಲಾದರೂ ನೀವು ನಿಮ್ಮ ಮನಸ್ಸನ್ನು ಪರಿಶುದ್ಧಗೊಳಿಸಿ, ಯೋಗ್ಯ

ವಾದ ಕರ್ತವ್ಯವನ್ನು ಜರುಗಿಸಿರಿ. ನಿಮಗೆ ಅಹಿತಮಾಡಿದವರ ಸೇಡು ತೀರಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯನ್ನು ಇನ್ನು ಮೇಲೆ ಮರೆತು ಬಿಡಿರಿ. ಆದದ್ದು ಆಗಿ ಹೋಗಿದೆ. ನೀವಿಬ್ಬರೂ ಪಶ್ಚಾತ್ತಾಪದಿಂದ ಪುನೀತರಾಗಿರುವದರಿಂದ, ನಿಮ್ಮಿಂದ ಇನ್ನು ಮೇಲೆ ಅಲ್ಲದ ಕೆಲಸಗಳು ಜರುಗಲಿಕ್ಕಿಲ್ಲೆಂದು ನನ್ನ ಆತ್ಮವಿಶ್ವಾಸವುಂಟು. ನೀವು ಬೇರೆಯವರ ಸೇಡುತೀರಿಸಿಕೊಳ್ಳಲಿಕ್ಕೆ ಹೋಗಿ, ಪರಸ್ಪರರು ಪರಸ್ಪರರಿಗೆ ಅನಿಷ್ಟ ಚಿಂತನೆ ಮಾಡಿದಿರಿ. ರಘೂಜಿಯು ಸಟವಾಜಿಯ ಮೃತ್ಯುವಿಗೂ ಕೃಷ್ಣಾಜಿಯ ಮೃತ್ಯುವಿಗೂ ಕಾರಣನಾಗಿದ್ದರೆ, ಚದುರೇ, ನೀನು ನಿನ್ನ ಚಿಕ್ಕ ಮಗನಾದ ಭೈರವನ ಮೃತ್ಯುವಿಗೆ ಕಾರಣಳಾದೆ; ಹಾಗು ನಿನ್ನ ಅಣ್ಣನನ್ನೇ ನಾಶಗೊಳಿಸುವ ಕೃತ್ಯವನ್ನು ಹೂಡಿದ್ದೆ. ಈ ಎಲ್ಲ ಕೃತ್ಯಗಳು ಅರಿಯದೆ ಆದುದರಿಂದ, ನೀವಿಬ್ಬರು ಅಣ್ಣ-ತಂಗಿಯರು ಪರಸ್ಪರರನ್ನು ಅಸೂಯೆಯಿಂದ ಎಂದೂ ನೋಡಬಾರದು. ಸಂಭಾಜಿರಾಜರೂ, ಜಿಜಾಬಾಯಿಯವರೂ ನಿಮ್ಮಿಬ್ಬರಿಗೆ ಬಹಳೇ ತೊಂದರೆ ಕೊಟ್ಟರು. ಅದಕ್ಕಾಗಿ ನೀವು ಅವರ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂಬ ಲವಲವಿಕೆಯನ್ನು ತೊಡೆದುಹಾಕಬೇಕು ನೀವು ನಿಮ್ಮ ಶೇಷಾಯುಷ್ಯವನ್ನು ನಿಮ್ಮ ಮಾತೃಭೂಮಿಯ ಸೇವೆಯಲ್ಲಿ ಕಳೆಯುವ ಬಗ್ಗೆ ಸ್ವಾಮಿಗಳ ಸಮ್ಮುಖದಲ್ಲಿ ಪ್ರತಿಜ್ಞೆ ಮಾಡಿದರೆ, ಸಾತಾರೆಯಲ್ಲಿ ನಿಮಗೆ ಸುಖ-ಸೌಕರ್ಯಗಳನ್ನು ಒದಗಿಸಿ ಕೊಡುವೆನು. ರಘೂಜಿಗೆ ಸರದಾರಿಕೆಯನ್ನು ಕೊಡುವೆನು. ಚದುರೇ, ನೀನು ವಿರೂಬಾಯಿಯವರ ಸೇವೆಯಲ್ಲಿದ್ದು, ಶೇಷಾಯುಷ್ಯವನ್ನು ಕಳೆ. ನೀವಿಬ್ಬರೂ ಇಂದೆಯೇ ಸಾತಾರೆಗೆ ನಡೆಯಿರಿ.''

ಬಾಜೀರಾಯನ ಮಾತುಗಳನ್ನು ಕೇಳಿ ರಘೂಜಿಯು:—''ತಮ್ಮ ಅಪ್ಪಣೆಯಂತೆ ನಾನು ಸ್ವರಾಜ್ಯಸೇವೆಯಲ್ಲಿ ದೇಹವನ್ನು ಸವಿಸುವೆನು. ಇದೇ ನನ್ನ ಸತ್ಯ ಪ್ರತಿಜ್ಞೆಯು!''

ಅನಂತರದಲ್ಲಿ ಚದುರೆಯು ಪೇಶವೆಯನ್ನು ಕುರಿತು:—''ಶ್ರೀಮಂತರೆ, ನಾನು ಪತಿತಾ ನಾರಿಯು. ಎಷ್ಟು ವಿಧದಿಂದ ದೇಶಕಾರ್ಯ-ಸಮಾಜಕಾರ್ಯ ಮಾಡಿದರೂ ನನ್ನ ಕುಲಕಲಂಕಿನಿಯೆಂಬ ಹೆಸರು ತೊಳೆಯಲಾರದು. ಅದಕ್ಕಾಗಿ ನನಗೆ ಬಹಳೇ ವ್ಯಸನವೆನಿಸುವದು''

''ನೀನು ವ್ಯಸನಪಡಬೇಡ. ಪಶ್ಚಾತ್ತಾಪದಿಂದ ಪುನೀತಳಾದ ನೀನು ಕುಲಕಲಂಕಿನಿಯಾಗಲಾರೆ. ಜಗತ್ತು ನಿನ್ನ ಸಾಹಸದ ಬಗ್ಗೆ ಕೌತುಕ

ಪಡುವದಲ್ಲದೆ ಹಳಿಯುಲಾರದು. ಇದು ನನ್ನ ಆಶೀರ್ವಾದವೆಂದು ತಿಳಿ.'' ಬ್ರಹ್ಮೇಂದ್ರಸ್ವಾಮಿಗಳು ನುಡಿದರು.

''ಸ್ವಾಮಿನ್! ನಾನು ಧನ್ಯಳಾದೆನು. ಮಹಾತ್ಮರ ದರ್ಶನಾಶೀರ್ವಾದಗಳಿಂದ ಪುನೀತಳಾದೆನು. ನಾನು ಜೀವಿಸಿರುವವರೆಗೆ ದೇಶಕಾರ್ಯ-ಸಮಾಜ ಕಾರ್ಯ ಮಾಡುತ್ತ ಶೇಷಾಯುಷ್ಯ ಕಳೆಯುವೆನು.'' ಎಂದು ಚದುರೆಯು ಪ್ರತಿಜ್ಞೆ ಮಾಡಿದಳು.

ಅನಂತರದಲ್ಲಿ ಬಾಜೀರಾಯನು:—''ಸ್ವಾಮಿನ್! ನೀವು ಇವೆರಡು ಪತಿತ ಜೀವನಗಳನ್ನು ಉದ್ಧರಿಸಿದಂತೆ ರಾಜ-ರಾಣಿಯರನ್ನೂ ಉದ್ಧರಿಸಿ, ರಾಜಬಂಧುಗಳಲ್ಲಿ ಒಪ್ಪಂದ ಮಾಡಿಸಿ ಶ್ರೇಯಸ್ಸಂಪಾದನ ಮಾಡಬೇಕು. ಪರಾಭವದ ಮೇಲೆ ಪರಾಭವವನ್ನನುಭವಿಸಿ ಸಂಭಾಜಿರಾಜರು ಹಣ್ಣಾಗಿರುವರು. ರಾಣಿಯವರ ವೃತ್ತಿಯಾದರೂ ಸುಧಾರಿಸಿದೆ. ಈ ಸಂಧಿಯಲ್ಲಿ ಸ್ವಲ್ಪ ಪ್ರಯತ್ನ ಮಾಡಿದರೆ ಫಲವು ದೊರೆಯುವದು.''

''ಒಳ್ಳೇದು. ನೀವು ಈ ವಿಷಯದಲ್ಲಿ ಬಹುಮಟ್ಟಿಗೆ ಕಾರ್ಯಸಾಧನೆ ಮಾಡಿರುವಿರಿ. ನಿಮ್ಮ ಕಷ್ಟಾರ್ಜಿತ ವಿಜಯದ ಲಾಭವು ನನಗಾಗುವಂತಿದ್ದರೆ. ಒಲ್ಲೆನೆಂದು ಏಕೆ ಅನ್ನಲಿ? ಭಾರ್ಗವರಾಮನ ಕೃಪೆಯಿಂದ ನಿಮ್ಮ ಸದಿಚ್ಛೆಯು ಈಡೇರುವದು; ಚಿಂತಿಸಬೇಡಿರಿ.''

ಅಂದೇ ಬ್ರಹ್ಮೇಂದ್ರಸ್ವಾಮಿ, ಬಾಜೀರಾಯ, ರಘೂಜಿ, ಚದುರೆ, ತಾರಾಬಾಯಿ ಮೊದಲಾದವರು ಇಚಲಕರಂಜಿಯಿಂದ ಸಾತಾರೆಗೆ ಪ್ರಯಾಣ ಮಾಡಿದರು.



ಚದುರೆ



ಶ್ರೀ ಬ್ರಹ್ಮೇಂದ್ರ ಸ್ವಾಮಿಗಳು ಛತ್ರಪತಿ ಸಂಭಾಜಿರಾಜ, ಜಿಜಾಬಾಯಿ ಇವರ ಪ್ರಾರ್ಥನೆಯ ಮೇರೆಗೆ ಅವರನ್ನು ಕ್ಷಮಿಸಿ ಪರಪ್ರದಾನ ಮಾಡಿದರು.

( ಪುಟ ೧೮೪ )

## ಕೊನೆ.

ಬಾಜೀರಾಯ ಪೇಶವೆ ಹಾಗು ಬ್ರಹ್ಮೇಂದ್ರಸ್ವಾಮಿಗಳು ಸಂಭಾಜಿ ರಾಜ-ಶಾಹೂಮಹಾರಾಜರಲ್ಲಿ ಒಪ್ಪಂದವಾಗುವದಕ್ಕಾಗಿ ಬಹಳೇ ಪ್ರಯತ್ನ ಮಾಡಿದರು. ಅಂತಃಕಲಹದಿಂದ ಎರಡೂ ಸ್ವರಾಜ್ಯಗಳು ಬಲಹೀನವಾಗಬಾರ ದೆಂದು ಇವರ ಇಚ್ಛೆಯಿತ್ತು ಕೊನೆಗೆ ಅವರ ಪ್ರಯತ್ನಕ್ಕೆ ಯಶವು ಲಭಿ ಸುವ ಚಿಹ್ನವು ತೋರಹತ್ತಿತು. ಒಡಂಬಡಿಕೆಯ ಎಲ್ಲ ಯೋಜನೆಗಳು ನಿರ್ಧಾರವಾದ ಮೇಲೆ, ಪೇಶವೆಯು ಗುಜರಾಥದಲ್ಲಿ ಮಲೆತುನಿಂತ ತ್ರ್ಯಂಬಕ ರಾಯ ದಾಭಾಡೆಯ ಪಾರುಪತ್ಯಕ್ಕಾಗಿ ಉತ್ತರಕ್ಕೆ ಹೊರಡಬೇಕಾಯಿತು. ಅವನು ಈ ಕಾರ್ಯದಲ್ಲಿ ಬ್ರಹ್ಮೇಂದ್ರಸ್ವಾಮಿಗಳನ್ನು ಮಧ್ಯಸ್ತರನ್ನು ಮಾಡಿ, ಯುದ್ಧದ ಸಿದ್ಧತೆಗಾಗಿ ಸಾತಾರೆಯಿಂದ ಪುಣೆಗೆ ತೆರಳಿದನು.

ಉದಾರಾಂತಃಕರಣಿಯಾದ ಶಾಹೂಮಹಾರಾಜನು ಸಂಭಾಜಿರಾಜ ನಿಗೆ ಸ್ವರಾಜ್ಯದೊಳಗಿನ ಅರ್ಧಭಾಗವನ್ನು ಕೊಡಲಿಕ್ಕೆ ಒಪ್ಪಿದನು. ಕರ್ಹಾ ಡದ ಬಳಿಯಲ್ಲಿ ಇಬ್ಬರು ಮಹಾರಾಜರೂ ದೊಡ್ಡದೊಡ್ಡ ಸರದಾರರೂ ಅಧಿ ಕಾರಿಗಳೂ ಕೂಡಿದರು. ಬ್ರಹ್ಮೇಂದ್ರಸ್ವಾಮಿಗಳು ಇಬ್ಬರೂ ಬಂಧುಗಳ ಒಡಂಬಡಿಕೆಯನ್ನು ಪೂರೈಸಿದರು. ಇಷ್ಟುದಿನ ನಡೆದ ಯುದ್ಧವು ಈ ಪ್ರಕಾರ ಆನಂದಪರ್ಯವಸಾಯಿಯಾಗಿ ಸಮಾಪ್ತವಾಯಿತು.

ಶ್ರೀ ಬ್ರಹ್ಮೇಂದ್ರಸ್ವಾಮಿಗಳು ಅನುತಾಪದಗ್ಧರಾದ ಸಂಭಾಜಿರಾಜ-ಜಿಬಾಬಾಯಿಯರ ಪ್ರಾರ್ಥನೆಯ ಮೇರೆಗೆ ಅವರನ್ನು ಕ್ಷಮಿಸಿ, ವರಪ್ರದಾನ ಮಾಡಿದರು.

ಪೂರ್ವ ಯೋಜನೆಯಂತೆ ದುರ್ಗಾಬಾಯಿಯನ್ನು ಸಂಭಾಜಿಮಹಾ ರಾಜನು ವಿವಾಹವಾದನು.

ಅನೂಬಾಯಿಯ ಇಚ್ಛೆಯ ಮೇರೆಗೆ ವೆಂಕಟರಾಯ ಘೋರಪಡೆಯ ಜಹಾಗೀರಿಯು ಮೊದಲಿನ ಸ್ಥಿತಿಯಲ್ಲಿಯೆ ಉಳಿಯಿತು.

ಒಡಂಬಡಿಕೆಯಾದ ಮೇಲೆ ಸಂಭಾಜಿ-ಜಿಜಾಬಾಯಿಯರು ಶಾಹೂ ಮಹಾರಾಜನೊಡನೆ ಕಡೆತನಕ ಸ್ನೇಹದಿಂದ ನಡೆದರು.

ಉದಾಜಿ ಚವ್ಹಾಣನು ಮಾತ್ರ ಈ ಒಡಂಬಡಿಕೆಯಿಂದ ಶಾಂತನಾಗ ಲಿಲ್ಲ. ಅವನು ಮುಂದೆ ಎಷ್ಟೋ ದಿನ ಶಾಹೂಮಹಾರಾಜನಿಗೆ ತೊಂದರೆ

ಕೊಟ್ಟನು. ಅವನ ಪಾರುಪತ್ಯ ಮಾಡಬೇಕಾದರೆ ಪೇಶವೆ ಬಾಜೀರಾಯನಿಗೆ ಎಷ್ಟೋ ಶ್ರಮವಾಯಿತು.

ತಾರಾಬಾಯಿಯು ತನ್ನ ಶೇಷಾಯುಷ್ಯವನ್ನು ಸಾತಾರೆಯಲ್ಲೇ ಕಳೆದಳು ಸಾತಾರೆಗೆ ಬಂದ ಮೇಲೆ ಅವಳ ಆಯುಷ್ಯವು ಆನಂದಪೂರ್ಣವಾಯಿತು.

ಚದುರೆ-ರಘೂಜಿಯುದು ಬ್ರಹ್ಮೇಂದ್ರಸ್ವಾಮಿಗಳ ಶಿಷ್ಯತ್ವ ವಹಿಸಿ, ಪರಮಾರ್ಥಸಾಧನೆ ಮಾಡುತ್ತ, ಯಥಾಶಕ್ತಿಯಾಗಿ ಸಮಾಜಕಾರ್ಯ-ಸ್ವರಾಜ್ಯಕಾರ್ಯಗಳನ್ನು ನೆರವೇರಿಸತೊಡಗಿದರು

ಬಾಜೀರಾಯ ಪೇಶವೆಯು ಉತ್ತರದಲ್ಲಿ ಅನರ್ಥ ನಡೆಯಿಸಿದ ದಾಭಾಡೆ ಮೊದಲಾದವರನ್ನು ನಿಗ್ರಹಿಸಿ, ಅಪೂರ್ವ ವಿಜಯಸಂಪಾದನೆ ಮಾಡಿ, ಸಾತಾರೆಗೆ ಹಿಂದಿರುಗಿ ಬಂದು ಶಾಹೂ ಮಹಾರಾಜನನ್ನು ಭೆಟ್ಟಿಯಾದನು. ಸ್ವರಾಜ್ಯದ ಅಭ್ಯುದಯಕ್ಕಾಗಿ ಚಿರಂತನವಾಗಿ ಪ್ರಯತ್ನಿಸುವ ಪೇಶವೆಯ ವಿಷಯಕ್ಕೆ ಶಾಹೂ ಮಹಾರಾಜನು ಅನಂತ ಧನ್ಯೋದ್ಗಾರ ತೆಗೆದನು. ಪೇಶವೆಯ ಅಖಂಡ ಕಾರ್ಯತತ್ಪರತೆಯಿಂದಲೂ, ಅನುಪಮವಾದ ಸದ್ಗುಣಗಳಿಂದಲೂ ಸ್ವರಾಜ್ಯಸೂರ್ಯನು ಒಳ್ಳೇ ದೈದೀಪ್ಯಮಾನನಾಗಿ ಬೆಳಗತೊಡಗಿದನು.





# ಉತ್ತಮ ಪುಸ್ತಕಗಳು.

**ವಡಗಾವದ ವಿಜಯು:**—ಲೇಖಕ ಭಿ. ಪ. ಕಾಳೆ. ಕ್ರೌನ ಪುಟ ೧೮೪. ಪೇಶ್ವೇ ರಘುನಾಥರಾಯನು ತನ್ನ ಪ್ರೀತಿಯ ೨ನೇ ಹೆಂಡತಿಯ ಕಿವಿ ಮಾತುಗಳಿಗೆ ಮನಸೋತು ಪೇಶ್ವಾಯಿಯನ್ನು ಮುಳುಗಿಸಲು ಮಾಡಿದ ಕುತಂತ್ರದ ವಿವರಣೆಯೂ, ಲೋಕದಲ್ಲಿ ಅಜೇಯರೆಂದು ಹೇಳಿಕೊಳ್ಳುವ ಇಂಗ್ಲಿಷರನ್ನು ಮರಾಟರು ವಡಗಾವದಲ್ಲಿ ನಭೂತಪೂರ್ವವಾಗಿ ಸೋಲಿಸಿದ ಸಂಗತಿಯೂ ಇದರಲ್ಲಿದೆ. ಪುಸ್ತಕವು ಸ್ವಾರಸ್ಯಪೂರ್ಣವಾಗಿರುವದರಿಂದ ಅಲ್ಪಾವಧಿಯಲ್ಲೇ ಇದರ ಮೊದಲನೇ ಆವೃತ್ತಿಯ ಪ್ರತಿಗಳು ತೀರಿ ೨ನೇ ಆ. ತೆಗೆದಿದೆ. ಬೆಲೆ 1-4-0

**ವಿಮಲಾ** ಅಥವಾ ಮತ್ಸರಗ್ರಸ್ತ ಭಗಿನಿ (೨ನೇ ಆವೃತ್ತಿ):—ಲೇಖಕ ಭಿ. ಪ. ಕಾಳೆ ಕ್ರೌನ ಪುಟ ೧೮೦. ಪೃಥ್ವೀರಾಜನಿಗೆ ಸಂಬಂಧಿಸಿದ ಶ್ರೇಷ್ಠವಾದ ಐತಿಹಾಸಿಕ ಕಥಾನಕವು. ಮತ್ಸರಗ್ರಸ್ತಳಾದ ವಿಮಲೆಯು-ಪೃಥ್ವೀರಾಜನ ದೊಡ್ಡವ್ವನು ತನ್ನ ತಂಗಿಯಾದ ಸದ್ಗುಣಿ ಕಮಲೆಯಲ್ಲಿಯೂ, ಆಕೆಯ ಸುಪುತ್ರನಾದ ಪೃಥ್ವೀರಾಜ ಚಹ್ವಾಣನಲ್ಲಿಯೂ ವಿಕಲ್ಪವನ್ನು ತಾಳಿ, ಅವರ ಸೇಡು ತೀರಿಸಿಕೊಳ್ಳುವದಕ್ಕೆಂದು ಆಗಿನ ಕಾಲದಲ್ಲಿ ಸುಪ್ರಸಿದ್ಧನಾಗಿದ್ದ ಕಾಪಾಲಿಕನೆಂಬ ಶಾಕ್ತನ ಮಂತ್ರ-ತಂತ್ರಗಳ ಆಡಂಬರಕ್ಕೆ ಮನಸೋತು, ತಾನೂ ತನ್ನ ಮಗನಾದ ಜಯಚಂದನೂ ಎಂಥ ಕಠಿಣ ಪ್ರಸಂಗದಲ್ಲಿ ಸಿಕ್ಕರೆಂಬದೂ, ಎಂಥ ಅವಮಾನಕ್ಕೆ ಗುರಿಯಾದರೆಂಬದೂ ವ್ಯಕ್ತವಾಗುವದಲ್ಲದೆ, ಆ ಚಂಡಿ ವಿಮಲೆಯ ಕಾರಸ್ಥಾನದಿಂದಲೇ ನಮ್ಮ ಹಿಂದುಸ್ಥಾನವು-ಆರ್ಯಭೂಮಿಯು-ಅವಿಂಥರ ಆಕ್ರಮಣಕ್ಕೆ ಹೇಗೆ ಬಲಿಯಾಯಿತೆಂಬದು ಈ ಕಥಾನಕದಿಂದ ಬಹು ಚನ್ನಾಗಿ ಗೊತ್ತಾಗುತ್ತದೆ. ಬೆಲೆ 0-14-0

**ವೀರಕಾಂತಾ** (೨ನೇ ಆವೃತ್ತಿ):—ಲೇಖಕ ಚಿ. ಯ. ದೀಕ್ಷಿತ, ಕ್ರೌನ ಪುಟ ೧೩೨. ಬಂಗಾಲ ಪ್ರಾಂತದೊಳಗಿನ ಒಬ್ಬ ಜಮೀನದಾರನ ಜನ್ಮಸಿದ್ಧ ನೀಚತನಕ್ಕೆ ಬಲಿಬಿದ್ದ ಒಬ್ಬ ತರುಣಿಯು ತನ್ನ ನಿಸ್ಸೀಮ ಪತಿಭಕ್ತಿಯ ಮೂಲಕ ವೀರಕಾಂತೆಯಾದ ಸಂಗತಿಯು ಈ ಕಾದಂಬರಿಯಲ್ಲಿ ಹೃದಯಂಗಮವಾಗಿ ವರ್ಣಿಸಿದೆ. ಬೆಲೆ ೧೦ ಆ.

**ವೀರಕುಮಾರಿ ಕನಕಲತೆ:**—ಲೇಖಕ ನಾಗೇಶ. ಜೆಮ್ಮಿ ಪುಟ ೪೮. ಕನಕಲತೆಯೆಂಬ ರಜಪೂತ ತರುಣಿಯು ಸಿಂಧದ ಬಾದಶಹ ಅಹಮ್ಮದಶಹನನ್ನು ಸ್ವದೇಶ ಹಾಗು ಸ್ವಶೀಲ ರಕ್ಷಣೆಗಾಗಿ ದಾರುಣವಾದ ರೀತಿಯಿಂದ ಕೊಲೆಗೆಯ್ದ ಸಂಗತಿಯು ಇದರಲ್ಲಿದೆ. ಬೆಲೆ ೩ ಆಣೆ.

ವಿಳಾಸ—ಭಿ. **ಪ. ಕಾಳೆ, ಆನಂದವನ.**

ಮೈಸೂರ ಸರಕಾರದ ವಿದ್ಯಾಖಾತೆ

**ಕೊ. ಆ. ಸೊ. ಖಾತೆ, ರೆವಿನ್ಯೂ ಕಮಿಶನರ ಇವರಿಂದ ಶಿಫಾರಸ ಹೊಂದಿದೆ**

---

**ವೈದಿಕ ಧರ್ಮಾಭಿಮಾನಿಗಳೂ, ಕನ್ನಡ ಭಾಷಾಭಿಮಾನಿಗಳೂ**

**ಅವಶ್ಯವಾಗಿ ಆಶ್ರಯಕೊಡತಕ್ಕ**

**ಶ್ರೀಶೇಷಾಚಲ-**

# ಸದ್ಬೋಧ ಚಂದ್ರಿಕೆ



(೧೯೦೮ರಿಂದ ಪ್ರಕಟವಾಗುತ್ತಿರುವ)

**ಉಚ್ಚತರಗತಿಯ ತಿಳಿಗನ್ನಡ**

ವಾ. ಚಂದಾ ರೂ. ೩ ]**ಮಾಸಪತ್ರಿಕೆಯು.** [೬೪ ಪುಟಗಳ ಸಂಚಿಕೆ

**(ಸಂಚಿಕೆಗಳನ್ನು ವರ್ಷಾರಂಭದಿಂದಲೇ ಕಳಿಸುವ ರೂಢಿಯುಂಟು.)**

**ಕಳೆದ ೩೦ ವರ್ಷಗಳಿಂದ ಆನಂದವನ-ಅಗಡಿಯಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ "ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ"ಗೆ ಇದರ ಆದಾಯವೆಲ್ಲವೂ ವಿನಿಯೋಗಿಸಲ್ಪಡುತ್ತಿರುವದು. ಇದು ಅನೇಕ ಸದ್ಬೋಧಪೂರ್ಣ ಲೇಖಗಳಿಂದಲೂ, ಮನೋರಂಜಕ, ಸಾಮಾಜಿಕ, ಧಾರ್ಮಿಕ, ಐತಿಹಾಸಿಕ ಕಥೆ-ಕಾದಂಬರಿಗಳಿಂದಲೂ ಕರ್ನಾಟಕ ಸಮಾಜ ಸೇವೆ-ಭಾಷಾಸೇವೆಗಳನ್ನು ಮಾಡುತ್ತಿರುವದು.**

ಮ್ಯಾ. ಸ. ಚ. ಪೋ. ಆನಂದವನ, ಡಿ. ಧಾರವಾಡ.

---

☞ **ಸೂಚನೆ:**—ಇತ್ತೀಚೆಗೆ ಪೋಷ್ಟಿನ ದರಗಳು ಹೆಚ್ಚಾಗಿರುವದರಿಂದ ನಮ್ಮ ಗ್ರಂಥ ಮಾಲೆಯ ಪುಸ್ತಕಗಳು ಕರ್ನಾಟಕದೊಳಗಿನ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯ ಪ್ರಸಿದ್ಧ ಬುಕ್‌ಸೆಲರರಲ್ಲಿ ದೊರೆಯುವ ವ್ಯವಸ್ಥೆ ಮಾಡಿರುತ್ತೇವೆ. ಈ ಅನುಕೂಲತೆಯ ಲಾಭವನ್ನು ಎಲ್ಲರೂ ಪಡಕೊಳ್ಳಬಹುದಾಗಿದೆ.